# ಸೂಕ್ತಿ - ವ್ಯಾಪ್ತಿ

## ಸುಭಾಷಿತ ಸಂಗ್ರಹ - ೧

ಸಂಕಲನ, ವ್ಯಾಖ್ಯಾನ :

ಎನ್. ರಂಗನಾಥಶರ್ಮಾ

ಪ್ರಕಟಣೆ ೬೬

ರಾಷ್ಟ್ರೋತ್ಥಾನ ಸಾಹಿತ್ಯ
'ಕೇಶವ ಶಿಲ್ಪ'
ಕೆಂಪೇಗೌಡ ನಗರ
ಬೆಂಗಳೂರು – ೫೬೦ ೦೧೯

ಮೊದಲ ಮುದ್ರಣ : ೧೯೯೧
ಎರಡನೆ ಮುದ್ರಣ : ೧೯೯೪

ಬೆಲೆ : ರೂ. ೩೦-೦೦

ರಾಷ್ಟ್ರೋತ್ಥಾನ ಮುದ್ರಣಾಲಯ
ಬೆಂಗಳೂರು - ೫೬೦ ೦೧೯

SOOKTI-VYAPTI. Kannada. By N. RANGANATHA SHARMA. A collection of Sanskrit epigrammatic verses with commentary explaining their contemporary relevance. Published by : RASHTROTTHANA SAHITYA, Kempegowda Nagar, Bangalore-560019 (India). Pages: viii + 179. Price: Rs. 30-00. 1991.
Reprint 1994.
Typeset by : VISHWAKANTHI, Rajajinagar, Bangalore – 560 010.
Printed at . Rashtrotthana Mudranalaya, Bangalore – 560 019.

# ಪುಸ್ತಕವನ್ನು ಕುರಿತು

ಇದೊಂದು ಸುಭಾಷಿತ ಸಂಕಲನ. ಕನ್ನಡದಲ್ಲಿ ಗಾದೆ, ಸಾಮತಿ ಎಂದಿರುವುದೇ ಸಂಸ್ಕೃತದಲ್ಲಿ ಸುಭಾಷಿತ ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಸುಭಾಷಿತಗಳಲ್ಲಿ ಹೆಚ್ಚಿನವು ಸಾವಿರಾರು ವರ್ಷಗಳಿಂದ ಜನರ ನಾಲಿಗೆಯಲಿ ನೆಲೆಯೂರಿರುವವು. 'ಸು-ಭಾಷಿತ' ಎಂಬ ಮಾತಿನ ಅರ್ಥವಾದರೋ 'ಚೆನ್ನಾಗಿ ಹೇಳಲ್ಪಟ್ಟದ್ದು', 'ಒಳ್ಳೆಯ ನುಡಿ' ಎಂದು. ಯಾವುದೋ ಜೀವನಾನುಭವವನ್ನೋ ಪಥದರ್ಶಕ ಸೂತ್ರವನ್ನೋ ಸ್ಮರಣೀಯ ರೀತಿಯಲ್ಲಿ ಸುಭಾಷಿತಗಳು ಅಳವಡಿಸಿರುತ್ತವೆ. ಹೀಗೆ ನಮ್ಮ ನಿತ್ಯದ ಬದುಕಿಗೆ ನೇರ ಸಂಬಂಧಿಸಿರುವುದೇ ಇವುಗಳ ಪ್ರಾಚುರ್ಯಕ್ಕೆ ಕಾರಣ. ಭಾಷೆಯನ್ನೂ ಛಂದಸ್ಸನ್ನೂ ಬಲ್ಲ ಯಾರಾದರೂ ಇಂಥ ಪದ್ಯಗಳನ್ನು ಹೊಸೆಯುವುದು ತುಂಬ ಕಷ್ಟವೇನಲ್ಲ. ಆದರೆ ಸುಭಾಷಿತಗಳಿಗೆ ಹೆಚ್ಚಿನ ಮೌಲ್ಯ ಅಂಟಿಕೊಂಡಿರುವುದು ಅವುಗಳಲ್ಲಿ ಸಾವಿರಾರು ವರ್ಷಗಳ ಅನುಭವ ಘನೀಕೃತವಾಗಿರುವುದರಿಂದ. ಸುಭಾಷಿತಗಳಲ್ಲಿ ಹೆಚ್ಚಿನವು ಅಜ್ಞಾತಮೂಲದವು. ಅವನ್ನು ಬರೆದವರಾರೋ ತಿಳಿಯದು. ಅವನ್ನು ಜನಮಾನಸದಲ್ಲಿ ಉಳಿಸಿರುವುದು ಅವುಗಳ ಅರ್ಥವಂತಿಕೆಯಷ್ಟೆ. ಕೆಲವು ಸುಭಾಷಿತಗಳಿಗೆ ಮೂಲ ಆಕರಗಳನ್ನು ತೋರಿಸಬಹುದಾದರೂ, ಅವುಗಳಲ್ಲಿಯೂ ಹೆಚ್ಚಿನವು ಆಯಾ ಕವಿಗಳ ಕಾಲಕ್ಕೆ ಎಷ್ಟೋ ಹಿಂದಿನಿಂದಲೇ ಸಮಾಜದ ನಾಲಿಗೆಯಲ್ಲಿ ನಲಿದಾಡಿರುವುದು ಅಸಂಭವವಲ್ಲ.

ಸುಭಾಷಿತಗಳ ಒಂದು ಮುಖ್ಯ ಆಕರ್ಷಣೆ ಅನುಭವದ ನೆಲೆಗಟ್ಟು; ಇನ್ನೊಂದು ಉಕ್ತಿಸೌಂದರ್ಯ, ಎಂದರೆ ಸಾಹಿತ್ಯಗುಣ. ಈ ಎರಡಂಶಗಳ ಸಮಾವೇಶ ಸುಭಾಷಿತಗಳಲ್ಲಿ ಇರುವುದರಿಂದಲೇ ಇಂಥ ಅಸಂಖ್ಯ ಸೂಕ್ತಿಗಳು ಸಂಸ್ಕೃತ ಭಾಷೆ ಬಾರದವರ ಬಳಕೆಯಲ್ಲಿಯೂ ಸಮೃದ್ಧವಾಗಿರುವುದು. ಕನ್ನಡ ಮತ್ತಿತರ ದೇಶಭಾಷೆಗಳಲ್ಲಿಯೂ ಸಾವಿರಾರು ಗಾದೆಮಾತುಗಳು ಹೀಗೆಯೇ ಪ್ರಚಲಿತವಿವೆ. "ವೇದ ಸುಳ್ಳಾದರೂ ಗಾದೆ ಸುಳ್ಳಾಗದು" ಎಂಬಷ್ಟುಮಟ್ಟಿನ ಮಹತ್ತ್ವವನ್ನು ಅವು ಪಡೆದುಕೊಂಡಿವೆ.

ಈ ಗ್ರಂಥದಲ್ಲಿ ಸಂಕಲಿತವಾಗಿರುವವು ಕಳೆದ ಹನ್ನೆರಡು ವರ್ಷಗಳಿಂದ (೧೯೭೮-೯೦) 'ಉತ್ಥಾನ' ಮಾಸಪತ್ರಿಕೆಯ ಮೊದಲ ಪುಟದಲ್ಲಿ ನಿಯತವಾಗಿ ಪ್ರಕಟಗೊಂಡಿರುವ ಬರಹಗಳು. ನಮ್ಮ ಪ್ರಾರ್ಥನೆಯಂತೆ ಈ ಅರ್ಥವ್ಯಾಖ್ಯೆಗಳನ್ನು ಬರೆಯುತ್ತಿರುವವರು ವಿದ್ವಾನ್ ಎನ್. ರಂಗನಾಥ ಶರ್ಮಾ ಅವರು – 'ವಿಶ್ವಾಮಿತ್ರ' ಎಂಬ ಹೆಸರಿನಲ್ಲಿ, ಸಂಸ್ಕೃತ, ಕನ್ನಡ ವಿದ್ವದ್ ವಲಯದಲ್ಲಿ ವಿದ್ವಾನ್ ರಂಗನಾಥ ಶರ್ಮಾ ಅವರು ಸುಪರಿಚಿತರು; ಶ್ರೀಮದ್ರಾಮಾಯಣ, ಶ್ರೀಮದ್ಭಾಗವತ, ಅಮರಕೋಶ ಗ್ರಂಥಗಳ ಜನಪ್ರಿಯ ಕನ್ನಡ ಅನುವಾದಗಳ ಮೂಲಕವೂ ಸಂಸ್ಕೃತದಲ್ಲಿ 'ಬಾಹುಬಲಿವಿಜಯಮ್', 'ಏಕಚಕ್ರಮ್' ಇತ್ಯಾದಿ ಲಘುರೂಪಕಗಳು, ಮತ್ತಿತರ ಸ್ವತಂತ್ರ ಗ್ರಂಥಗಳ ಮೂಲಕವೂ

ಈ ಪೀಳಿಗೆಯ ಶ್ರೇಷ್ಠ ವಿದ್ವಾಂಸರ ಶ್ರೇಣಿಯಲ್ಲಿ ಸ್ಥಾನ ಪಡೆದುಕೊಂಡಿರುವವರು. ವ್ಯಾಕರಣ, ಅಲಂಕಾರಶಾಸ್ತ್ರಗಳಲ್ಲದೆ ವೇದಾಂತ ಇತ್ಯಾದಿ ದರ್ಶನಗಳಲ್ಲಿಯೂ ಕೃತಪರಿಶ್ರಮರು; ಕೇಂದ್ರ–ರಾಜ್ಯ ಸರ್ಕಾರಗಳಿಂದಲೂ ಅನೇಕ ಸಾರ್ವಜನಿಕ ಸಂಘಸಂಸ್ಥೆಗಳಿಂದಲೂ ಸಂಮಾನಿತರು. ಆರಂಭದಿಂದ ರಾಷ್ಟ್ರೋತ್ಥಾನ ಸಾಹಿತ್ಯದ ಅಭಿಮಾನಿ ವರ್ಗದಲ್ಲಿ ವಿದ್ವಾನ್ ರಂಗನಾಥ ಶರ್ಮಾರವರು ಗಣ್ಯರೆನ್ನುವುದು ನಮಗೆ ಹೆಮ್ಮೆಯ ಸಂಗತಿಯೆನಿಸಿದೆ.

'ಉತ್ಥಾನ' ಪತ್ರಿಕೆಯ 'ಸೂಕ್ತಿ-ವ್ಯಾಪ್ತಿ' ಅಂಕಣ ಮೊದಲಿನಿಂದಲೇ ತುಂಬ ಜನಪ್ರಿಯತೆ ಗಳಿಸಿಕೊಂಡಿದೆ. ಈ ಅಂಕಣಬರಹಗಳು ಪುಸ್ತಕರೂಪದಲ್ಲಿ ಲಭ್ಯವಾಗಬೇಕೆಂಬ ಬೇಡಿಕೆ ದೀರ್ಘಕಾಲದಿಂದ ಇತ್ತು. ಅದನ್ನು ಈಗ ನೆರವೇರಿಸಲಾಗಿರುವುದು ನಮಗೆ ಸಂತೋಷ ತಂದಿದೆ.

ಇಲ್ಲಿ ಆಯ್ಕೆ ಮಾಡಿ ವಿವರಿಸಿರುವ ಶ್ಲೋಕಗಳು ಇತರ ಪ್ರಸಿದ್ಧ ಸುಭಾಷಿತಗಳಂತೆ ಸಾರ್ವಕಾಲಿಕ, ಸಾರ್ವದೇಶಿಕ ಅರ್ಥವ್ಯಾಪ್ತಿಯುಳ್ಳವು. ಇಲ್ಲಿಯ ಶ್ಲೋಕಗಳಿಗೆ ವಿದ್ವಾನ್ ರಂಗನಾಥ ಶರ್ಮಾರವರು ನೀಡಿರುವ ವ್ಯಾಖ್ಯೆ ವಿಶಿಷ್ಟ ಸ್ವರೂಪದ್ದು. ಈ ವಿಶೇಷತೆಗಳು ಎರಡು:

(೧) ಅರ್ಥವಿವರಣೆ ತೀರಾ ಸಂಕ್ಷಿಪ್ತವೂ ಅಲ್ಲದೆ ತೀರಾ ವಿಸ್ತೃತವೂ ಅಲ್ಲದೆ ಹಿತಮಿತವಾಗಿ ಸುಲಭಗ್ರಾಹ್ಯವಾಗಿರುವುದು.

(೨) ಶ್ಲೋಕದ ಅರ್ಥವನ್ನು ಇಂದಿನ ಸಾಮಾಜಿಕ ಪರಿಸರದ ಹಿನ್ನೆಲೆಯಲ್ಲಿ ವಿವೇಚಿಸಿರುವುದು.

ಈ ವಿಶೇಷತೆಗಳಿಂದಾಗಿ ಗ್ರಂಥ ಕನ್ನಡ ಜನತೆಗೆ ಹೆಚ್ಚು ಮೆಚ್ಚಿಕೆಯಾದೀತೆಂದು ಆಶಿಸಿಕೊಂಡಿದ್ದೇವೆ.

ಶ್ರೀ ಪ್ರಜೋತ್ಪತ್ತಿ ಸಂ||
ಚೈತ್ರ ಶುದ್ಧ ಹುಣ್ಣಿಮೆ – ಚಿತ್ರಾಪೂರ್ಣಿಮೆ
೩೦–೩–೧೯೯೧ — ಪ್ರಕಾಶಕರು

# ಸಮಕ್ಷಮದಲ್ಲಿ

ಅನೇಕ ಶತಮಾನಗಳ ನಮ್ಮ ಸ್ವಾತಂತ್ರ್ಯ ಸಂಘರ್ಷ ಇಂದು ಯಶಸ್ಸಿನ ಒಂದು ಘಟ್ಟ ಮುಟ್ಟಿದೆ. ನಮ್ಮ ರಾಷ್ಟ್ರದ ಸ್ವತಂತ್ರ, ಸಾರ್ವಭೌಮ ಜೀವನವನ್ನು ಕಟ್ಟುವ ಸುವರ್ಣಸಂಧಿ ನಮಗಿಂದು ಒದಗಿಬಂದಿದೆ.

ಇದೊಂಗು ಸುವರ್ಣಸಂಧಿ ಆಗಿರುವಂತೆಯೇ ಒಂದು ಗಂಭೀರ ಸವಾಲೂ ಆಗಿದೆ. ನಮ್ಮ ರಾಷ್ಟ್ರಜೀವನವನ್ನು ಯಾವ ಆದರ್ಶದ ಬೆಳಕಿನಲ್ಲಿ, ಯಾವ ಸಿದ್ಧಾಂತದ ಅಡಿಗಲ್ಲ ಮೇಲೆ ಕಟ್ಟಬೇಕು – ಎಂಬ ಸವಾಲಿಗೆ ನಾವಿಂದು ಉತ್ತರ ಕೊಡಬೇಕಾಗಿದೆ.

ಆದರೆ ನಮ್ಮ ನಾಡಿನ ದೌರ್ಭಾಗ್ಯದಿಂದ ಇವತ್ತಿಗೂ ಈ ಮೂಲಪ್ರಶ್ನೆಯ ಬಗೆಗೆ ನಮ್ಮ ಸ್ವತಂತ್ರ ಪ್ರತಿಭೆಯಿಂದ ವಿಚಾರಮಂಥನ ನಡೆಯುತ್ತಲೇ ಇಲ್ಲ. ಇಂಗ್ಲೆಂಡ್ ಅಮೆರಿಕಾಗಳಂತೆಯೋ ಇಲ್ಲವೆ ರಷ್ಯ ಚೀನಾಗಳಂತೆಯೋ ನಮ್ಮ ಜೀವನವನ್ನು ಎರಕ ಹೊಯ್ಯುವ ಆತುರ ಎಲ್ಲ ಕ್ಷೇತ್ರಗಳಲ್ಲೂ ಕಂಡುಬರುತ್ತಿದೆ. ನಮ್ಮ ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಇತ್ಯಾದಿ ಪ್ರತಿಯೊಂದು ಕ್ಷೇತ್ರದಲ್ಲೂ ಭಾರತವನ್ನು ಪರದೇಶ, ಪರಸಂಸ್ಕೃತಿಗಳ ಅಗ್ಗದ ನಕಲಾಗಿ ಮಾಡುವ ಪ್ರಯತ್ನವೇ ನಡೆದಿದೆ. ನಮ್ಮ ರಾಷ್ಟ್ರೀಯ ಪ್ರತಿಭೆ, ಪರಂಪರೆ, ತತ್ತ್ವಜ್ಞಾನ, ಜೀವನಾದರ್ಶ ಇವೆಲ್ಲಕ್ಕೂ ಇಂದು ಗ್ರಹಣ ಹಿಡಿದಂತಾಗಿದೆ.

ಹೀಗಾಗಿ ಇಂದು ಕೋಟಿಕೋಟಿ ಭಾರತೀಯರ ಹೃದಯಕ್ಕೆ ನಮ್ಮ ಸ್ವತಂತ್ರ ರಾಷ್ಟ್ರಜೀವನದ ಅಮೃತಸ್ಪರ್ಶ ಅನುಭವಕ್ಕೆ ಬರುತ್ತಿಲ್ಲ. ನಮ್ಮ ಜನಸಾಮಾನ್ಯರ ಅಂತಃಕರಣವನ್ನು ತಟ್ಟಿ ಎಬ್ಬಿಸುವ ರಾಷ್ಟ್ರೀಯ ಆದರ್ಶಗಳಿಲ್ಲದೆಹೋದಲ್ಲಿ ರಾಷ್ಟ್ರದ ಪುನರುತ್ಥಾನಕ್ಕಾಗಿ ಅವರಲ್ಲಿ ಸ್ವಯಂಪ್ರೇರಣೆ, ಕಾರ್ಯೋತ್ಸಾಹ, ತ್ಯಾಗ, ಪೌರುಷಗಳು ಬೆಳೆದು ನಿಲ್ಲುವುದಾದರೂ ಹೇಗೆ ? ಆದ್ದರಿಂದಲೇ ಇಂದು ರಾಷ್ಟ್ರದ ಆಗುಹೋಗುಗಳ ಬಗೆಗೆ ಸರ್ವತ್ರ ಉದಾಸೀನತೆ, ಕ್ರಿಯಾಶೂನ್ಯತೆ, ವಿಫಲತೆಗಳೇ ತಾಂಡವವಾಡುತ್ತಿವೆ. ಎಂದಮೇಲೆ ಜನರೆದೆಗೆ ಸ್ಫೂರ್ತಿ, ಉತ್ಸಾಹಗಳನ್ನೆರೆಯಬಲ್ಲ ಭಾರತೀಯತೆಯ ಆದರ್ಶವನ್ನು ಎತ್ತಿಹಿಡಿಯುವುದು ಇಂದು ತೀರ ಅನಿವಾರ್ಯ ಹಾಗೂ ತುರ್ತು ಕರ್ತವ್ಯವಾಗಿದೆ. ಭಾರತವು 'ತನ್ನತನ'ದಿಂದ ಎದ್ದುನಿಂತಾಗಲೇ ಅದು ಜಗತ್ತಿನಲ್ಲಿ ತಲೆಯೆತ್ತಿ ಬಾಳುವಂತಾದೀತು ಎಂಬುದು ಸ್ಪಷ್ಟವಿದೆ.

ನಮ್ಮ ಭಾರತೀಯತೆಯ – ನಮ್ಮ ಸಂಸ್ಕೃತಿ, ಪರಂಪರೆ, ಇತಿಹಾಸ, ತತ್ತ್ವಜ್ಞಾನ, ಜೀವನಾದರ್ಶಗಳ–ಹಿರಿಮೆ ಈ ಲೋಕದಲ್ಲಿ ಸಾಟಿಯಿಲ್ಲದ್ದು. ನೂರಾರು ಶತಮಾನಗಳವರೆಗೆ ನಮ್ಮ ರಾಷ್ಟ್ರಜೀವನವನ್ನು ವೈಭವಶಾಲಿಯಾಗಿ ಮಾಡಿದ್ದಷ್ಟೆ ಅಲ್ಲ,

ಜಗತ್ತಿಗೆಲ್ಲ ದಿವ್ಯಜೀವನದ ಸುಧೆ ಕುಡಿಸಿದಂತಹ ಅದ್ಭುತ ಚೈತನ್ಯ ಅದರಲ್ಲಿದೆ. ಇಂದಿಗೂ ಸಹ ಆಧುನಿಕ ಜೀವನದ ಅನೇಕ ವಿಕಟ ಸಮಸ್ಯೆ-ಸವಾಲುಗಳಿಗೆ ಸಮರ್ಪಕವಾಗಿ ಸಮಾಧಾನ ನೀಡಬಲ್ಲಂತಹ ಸಮಗ್ರ ಜೀವನದೃಷ್ಟಿ, ವಿಚಾರಸಂಪತ್ತು ಅದರಲ್ಲಿದೆ.

ರಾಷ್ಟ್ರೋತ್ಥಾನದ ಅಡಿಗಲ್ಲಾದ ನಮ್ಮ ಭಾರತೀಯ ಜೀವನದ ಜ್ಞಾನ-ನಿಷ್ಠೆಗಳನ್ನು ಜನಮನದಲ್ಲಿ ಬೇರೂರಿಸುವ ಈ ಚರಿತ್ರಾರ್ಹ ಕಾರ್ಯಕ್ಕಾಗಿ ರಾಷ್ಟ್ರೋತ್ಥಾನ ಪರಿಷತ್ತು ೧೯೬೫ರಲ್ಲಿ ಜನ್ಮತಾಳಿತು. ಪರಿಷತ್ತು ಕಳೆದ ೨೫ ವರ್ಷಗಳಲ್ಲಿ ಜನಜಾಗೃತಿಯ ಚಟುವಟಿಕೆಯಲ್ಲದೆ ಇನ್ನಿತರ ಹತ್ತುಹಲವು ಸಮಾಜಸೇವಾ ಚಟುವಟಿಕೆಗಳನ್ನು ಹಮ್ಮಿಕೊಂಡು ಬೆಳೆಯುತ್ತಾ ಬಂದಿದೆ. ಪರಿಣಾಮವಾಗಿ ಪರಿಷತ್ತಿನ ಆರಂಭದ ಕೆಲವು ಚಟುವಟಿಕೆಗಳನ್ನು ಜನವರಿ ೧೯೮೬ರಿಂದ ಬೇರ್ಪಡಿಸಲಾಯಿತು. ಈ ರೀತಿ ಬೇರ್ಪಡಿಸಿದ ಚಟುವಟಿಕಗಳಲ್ಲಿ ಪ್ರಕಾಶನಕ್ಕೆ ಸಂಬಂಧಿಸಿದ ಚಟುವಟಿಕೆಯು 'ರಾಷ್ಟ್ರೋತ್ಥಾನ ಸಾಹಿತ್ಯ ಟ್ರಸ್ಟ್' ಹೆಸರಿನಲ್ಲಿ ಮುಂದುವರಿದಿದೆ. ಪ್ರಕಾಶನದ ಮುಖ್ಯ ಯೋಜನೆ ಹೀಗಿದೆ:

* ಸಾಮಾಜಿಕ ಚಿಂತನಪ್ರಧಾನವಾದ ಗ್ರಂಥಗಳನ್ನು ಹೊರತರುವುದು. ಇಂದು ಕನ್ನಡ ಸಾಹಿತ್ಯಲೋಕದಲ್ಲಿ ಎಲ್ಲಕ್ಕಿಂತ ಹೆಚ್ಚಿನ ಕೊರತೆ, ಅಗತ್ಯತೆ ಇರುವುದು ಅಂತಹ ಗ್ರಂಥಗಳಿಗೇ. ಈ ಕೊರತೆಯನ್ನು ತುಂಬಲು ಮೂಲ ಕನ್ನಡ ಕೃತಿಗಳ ಜೊತೆಗೆ ಇತರ ಭಾಷೆಗಳಿಂದಲೂ ಉತ್ತಮ ರಾಷ್ಟ್ರೀಯ ಸಾಹಿತ್ಯವನ್ನು ಕನ್ನಡಕ್ಕೆ ತರುವುದು.

* ನಿಜವಾದ ರಾಷ್ಟ್ರೀಯ ಇತಿಹಾಸದ ಗ್ರಂಥಗಳಿಗಂತೂ ಕನ್ನಡದಲ್ಲೇ ಏಕೆ, ಇಡೀ ದೇಶದಲ್ಲೇ ತೀವ್ರ ಕೊರತೆ ಇದೆ. ಇದುವರೆಗೆ ಪಾಶ್ಚಾತ್ಯ ವಿದ್ವಾಂಸರ ಗ್ರಂಥಗಳು, ಅವರ ದೃಷ್ಟಿ–ಧೋರಣೆಗಳ ಜಾಡಿನಲ್ಲೇ ನಮ್ಮ ಇತಿಹಾಸದ ಅಧ್ಯಯನ ಸಾಗಿದೆ. ಇನ್ನಾದರೂ ನಮ್ಮ ರಾಷ್ಟ್ರೀಯ ದೃಷ್ಟಿಯಿಂದ ಚರಿತ್ರೆಯನ್ನು ಬರೆಯುವ, ಓದುವ ಅಭ್ಯಾಸವಾಗುವಂತೆ ರಾಷ್ಟ್ರೀಯ ಇತಿಹಾಸಗ್ರಂಥಗಳಿಗೆ 'ರಾಷ್ಟ್ರೋತ್ಥಾನ ಸಾಹಿತ್ಯ'ದಲ್ಲಿ ಅಗ್ರಸ್ಥಾನ ಕೊಡುವುದು.

* ಸಮಾಜದಲ್ಲಿ ಸತ್ಸಂಸ್ಕಾರಗಳನ್ನು ಮೂಡಿಸುವ ಸದಭಿರುಚಿಯ ಸಾಹಿತ್ಯವನ್ನು ಪ್ರಕಟಿಸುವುದು.

* ಸರಳ ಹಾಗೂ ಉದ್ಬೋಧಕ ರೀತಿಯಲ್ಲಿ ವೈಚಾರಿಕ ಮತ್ತು ವಿಶ್ಲೇಷಣಾತ್ಮಕ ಪುಸ್ತಕಗಳನ್ನು ಪ್ರಕಟಿಸುವುದು.

ತಾಯಿ ಭಾರತೀಯ ದಿವ್ಯಮಂದಿರದಲ್ಲಿ ಹೊತ್ತಿರುವ ಈ ಜ್ಞಾನದ ಸೊಡರಿಗೆ ಜನರ ಒಲವು–ನೆರವುಗಳ ತೈಲಧಾರೆ ಹೀಗೆಯೇ ನಿರಂತರವಾಗಿ ಒದಗಿಬರಲಿ ಎಂಬುದು ನಮ್ಮ ಹೃದಯದಾಳದ ಹಾರೈಕೆ.

— ಪ್ರಕಾಶಕರು

# ಸೂಕ್ತಿ - ವ್ಯಾಪ್ತಿ

ದುಃಖೇ ದುಃಖಾಧಿಕಾನ್ ಪಶ್ಯೇತ್ ಸುಖೇ ಪಶ್ಯೇತ್ ಸುಖಾಧಿಕಾನ್ |
ಆತ್ಮಾನಂ ಸುಖದುಃಖಾಭ್ಯಾಂ ಶತ್ರುಭ್ಯಾಮಿವ ನಾರ್ಪಯೇತ್ || || ೧||

— ಸುಭಾಷಿತ ಸುಧಾನಿಧಿ

"ದುಃಖ ಬಂದಾಗ ತನಗಿಂತ ಹೆಚ್ಚು ದುಃಖಿತರಾದವರನ್ನು ನೋಡಬೇಕು. ಸುಖ ಬಂದಾಗ ತನಗಿಂತ ಹೆಚ್ಚು ಸುಖಿಗಳಾದವರನ್ನು ನೋಡಬೇಕು. ಹಗೆಗಳಿಗೆ ಹೇಗೋ ಹಾಗೆ ಶೋಕ ಸಂತೋಷ ಗಳೆರಡಕ್ಕೂ ತನ್ನನ್ನು ಒಪ್ಪಿಸಿಕೊಳ್ಳಬಾರದು."

ಸುಖ-ದುಃಖಗಳು ಹಗಲು-ರಾತ್ರಿಗಳಿದ್ದಂತೆ ತಪ್ಪದೆ ಬರುತ್ತವೆ. ಸುಖವೇ ಬೇಕು ದುಃಖ ಬೇಡವೆಂದರೆ ನಡೆಯದು. ಕಷ್ಟದಲ್ಲಿರತಕ್ಕವನಿಗೂ ಸುಖದ ಗಳಿಗೆ ಜೀವನದಲ್ಲಿ ಬರುತ್ತದೆ. 'ಏತಿ ಜೀವಂತಮಾನಂದೋ ನರಂ ವರ್ಷಶತಾದಪಿ : ಬದುಕಿದ್ದರೆ ನೂರು ವರ್ಷದಲ್ಲಾದರೂ ಆನಂದದ ಕಾಲ ಬರುತ್ತದೆ' ಎಂಬ ಗಾದೆಯನ್ನು ವಾಲ್ಮೀಕಿರಾಮಾಯಣದಲ್ಲಿ ಉದಾಹರಿಸಿದೆ. ಲಂಕೆಯಲ್ಲಿ ಶೋಕತಪ್ತಳಾಗಿದ್ದ ಸೀತೆ, ನಂದಿಗ್ರಾಮದಲ್ಲಿ ಕೊರಗುತ್ತಿದ್ದ ಭರತ, ಇಬ್ಬರೂ ಹನುಮಂತನಿಂದ ಶ್ರೀರಾಮನ ಕುಶಲವಾರ್ತೆಯನ್ನು ಕೇಳಿ ಈ ಗಾದೆಯನ್ನು ನೆನಪು ಮಾಡಿಕೊಳ್ಳುತ್ತಾರೆ.

ತನಗಿಂತ ಹೆಚ್ಚು ಕಷ್ಟದಲ್ಲಿರುವವರನ್ನು ನೋಡಿದಾಗ ತನ್ನ ಕಷ್ಟ ಹಗುರವೆನಿಸುತ್ತದೆ. ಕಷ್ಟದಲ್ಲಿರುವವರಿಗೆ ಹಿರಿಯರು ಸಮಾಧಾನ ಹೇಳುವ ಪದ್ಧತಿ ಹೀಗೆಯೇ. ಕಾಡಿನಲ್ಲಿ ತೊಳಲುತ್ತಿದ್ದ ಧರ್ಮರಾಯನಿಗೆ ಬೃಹದಶ್ವನು

ನಳನ ಕಥೆಯನ್ನು ಹೇಳಿ ಸಂತೈಸುತ್ತಾನೆ. ಧರ್ಮರಾಯನಿಗೆ ಜೊತೆಯಲ್ಲಿ ತಮ್ಮಂದಿರಿದ್ದರು, ಹೆಂಡತಿ ದ್ರೌಪದಿ ಇದ್ದಳು; ಅಲ್ಲದೆ, ವನವಾಸಕ್ಕೆ ಅವಧಿ ಇತ್ತು. ನಳರಾಜನು ದಮಯಂತಿಯನ್ನು ತೊರೆದು ಒಂಟಿಯಾದ. ಅವನ ತೊಳಲಾಟಕ್ಕೆ ಅವಧಿಯೇ ಇರಲಿಲ್ಲ.

ಯಾರು ಸುಖದಲ್ಲಿ ಹಿಗ್ಗುವುದಿಲ್ಲವೋ ಅವರಿಗೆ ದುಃಖದಲ್ಲಿ ಕುಗ್ಗದಿರುವ ಸಾಮರ್ಥ್ಯ ಬರುತ್ತದೆ. ಸುಖದಲ್ಲಿ ಹಿಗ್ಗುವುದು, ದುಃಖದಲ್ಲಿ ಕುಗ್ಗುವುದು – ಇವೆರಡೂ ಮನಸ್ಸಿನ ಸಮತೋಲನವನ್ನು ತಪ್ಪಿಸುತ್ತವೆ. ಮನಸ್ಸು ತಿಳಿನೀರಿನ ಕೊಳವಿದ್ದಂತೆ. ಹೊಸ ನೀರು ಹರಿದು ಬಂದರೂ ಕೊಳೆ, ಇರುವ ನೀರು ಬತ್ತಿದರೂ ಕೊಳೆ. ಬಡಕಲಾಗುವುದು ಹೇಗೆ ರೋಗವೋ ಹಾಗೆ ಬೊಜ್ಜು ಬೆಳೆಯುವುದೂ ರೋಗವೇ.

ಸುಖ–ದುಃಖಗಳನ್ನು ಸಮದೃಷ್ಟಿಯಿಂದ ಎದುರಿಸುವುದೇ ಮನಸ್ಸಿನ ಸ್ವಾಸ್ಥ್ಯ. 'ಸಮದುಃಖಸುಖಃ ಸ್ವಸ್ಥಃ', 'ಸುಖದುಃಖೇ ಸಮೇ ಕೃತ್ವಾ' ಎಂಬ ಹಿತನುಡಿ ಇದಕ್ಕಾಗಿ.

**ಅನಭಿಜ್ಞಾಯ ಶಾಸ್ತ್ರಾರ್ಥಾನ್ ಪುರುಷಾಃ ಪಶುಬುದ್ಧಯಃ |**
**ಪ್ರಾಗಲ್ಭ್ಯಾದ್ ವಕ್ತುಮಿಚ್ಛಂತಿ ಮಂತ್ರೇಷ್ವಭ್ಯಂತರೀಕೃತಾಃ || || ೨ ||**

**— ರಾಮಾಯಣ, ಯುದ್ಧಕಾಂಡ, ೬೩-೧೪**

"ಮಂತ್ರಿಗಳಲ್ಲಿ ಪಶುಬುದ್ಧಿಯ ಜನರೂ ಸೇರಿಕೊಂಡಿರುತ್ತಾರೆ. ಅವರು ಯಾವ ಶಾಸ್ತ್ರಾರ್ಥವನ್ನೂ ತಿಳಿಯದೆ ದುಡುಕಿನ ವಾಗ್ಜಾಲದಿಂದ ಮಾತಾಡಲು, ಸಲಹೆ ಕೊಡಲು ಬಯಸುತ್ತಾರೆ."

ಈ ಮಾತನ್ನು ಹೇಳಿದವನು ಕುಂಭಕರ್ಣ ! ಯುದ್ಧದಲ್ಲಿ ರಾಮನ ಕೈ ಮೇಲಾಗುತ್ತಾ ಬಂದಿತು. ರಾವಣನಿಗೆ ದಿಕ್ಕು ತೋರಲಿಲ್ಲ. ಮಲಗಿದ್ದ ಕುಂಭಕರ್ಣನನ್ನು ಎಬ್ಬಿಸಿ ರಾಜಸಭೆಗೆ ಬರಮಾಡಿಕೊಂಡು, ನಡೆದ ಸಂಗತಿಯನ್ನು ಅವನಿಗೆ ತಿಳಿಸಿ, ಆತನ ಸಹಾಯವನ್ನು ಕೋರುತ್ತಾನೆ. ಆಗ

ಕುಂಭಕರ್ಣನು ರಾವಣನಿಗೆ ಬುದ್ಧಿವಾದವನ್ನು ಹೇಳುತ್ತ ಹೀಗೆ ನುಡಿದಿದ್ದಾನೆ: ''ಅಣ್ಣ, ನೀನು ಸೀತೆಯನ್ನು ಅಪಹರಿಸಿದ್ದು ಮೊದಲನೆಯ ತಪ್ಪು. ಯಾರ ಸಲಹೆಯನ್ನು ಕೇಳಿ ಹಾಗೆ ಮಾಡಿದೆ ? ಯುದ್ಧವನ್ನು ಆರಂಭಿಸಿದ್ದು ಎರಡನೆಯ ತಪ್ಪು. ವಿಭೀಷಣನಿಗಿಂತ ನಿನಗೆ ಆಪ್ತನೂ ಬುದ್ಧಿಶಾಲಿಯೂ ಯಾರಿದ್ದಾರೆ ? ಅವನ ಮಾತನ್ನು ತಳ್ಳಿ ಪಶುಬುದ್ಧಿಗಳಾದ ಮಂತ್ರಿಗಳ ಸಲಹೆಯಂತೆ ನಡೆದಿದ್ದೀಯೆ. ಸೀತೆಯನ್ನು ಅಪಹರಿಸುವಾಗ ಇದು ಯುಕ್ತವೇ, ಅಯುಕ್ತವೇ ಎಂಬುದನ್ನು ಚಿಂತಿಸಲೇ ಇಲ್ಲ. ಅದರ ಪರಿಣಾಮವೇನಾದೀತೆಂಬುದನ್ನೂ ನೀನು ಆಲೋಚಿಸಲಿಲ್ಲ. ಬರಿಯ ವೀರ್ಯದರ್ಪದಿಂದ ಇದೆಲ್ಲವನ್ನೂ ನಡೆಸಿಬಿಟ್ಟಿದ್ದೀಯೆ. ನೀನಾಗಿ ಈ ಸಂಕಟವನ್ನು ತಂದುಕೊಂಡಿದ್ದೀಯೆ. ಈಗಲೂ ಕಾಲ ಮಿಂಚಿಲ್ಲ. ಸೀತೆಯನ್ನು ರಾಮನಿಗೆ ಒಪ್ಪಿಸಿಬಿಡು''

ದೇಶ ಕಾಲ ಪರಿಸ್ಥಿತಿಗಳು ಮಾರ್ಪಟ್ಟರೂ ಸತ್ಯವು ಮಾರ್ಪಡುವುದಿಲ್ಲ. ವಿಧಾನಸಭೆಗಾಗಲಿ, ಸಂಸತ್ತಿಗಾಗಲಿ ಸದಸ್ಯನಾಗಲು ವಿದ್ಯಾಮಟ್ಟ ಏನಿರಬೇಕೆಂಬುದನ್ನೇ ನಮ್ಮ ರಾಜ್ಯಾಂಗವು ಗೊತ್ತುಪಡಿಸಿಲ್ಲ. ಮಂತ್ರಿಯಾಗಲು ಕನಿಷ್ಠಾರ್ಹತೆ ಏನೆಂಬುದೇ ಇಲ್ಲ. ಮತದಾನಗಳಲ್ಲಿಯೂ ಹೇರಳವಾದ ಭ್ರಷ್ಟಾಚಾರ ನಡೆಯುತ್ತಿದೆ. ಹೀಗಿರುವಾಗ 'ಶಾಸ್ತ್ರಾರ್ಥ'ದ ಗಂಧವೂ ಇಲ್ಲದ 'ಪಶುಬುದ್ಧಿ'ಗಳು ಮಂತ್ರಿಸ್ಥಾನದಲ್ಲಿ ನುಸುಳಿದರೆ ಅಚ್ಚರಿಯೇನು ?

**ಏಕಂ ವಿಷರಸೋ ಹಂತಿ ಶಸ್ತ್ರೇಣೈಕಶ್ಚ ಹನ್ಯತೇ |**
**ಸಬಂಧುರಾಷ್ಟ್ರಂ ರಾಜಾನಂ ಹಂತ್ಯೇಕೋ ಮಂತ್ರವಿಪ್ಲವಃ ||** || ೩ ||

— ಯಶಸ್ತಿಲಕಚಂಪೂ

''ವಿಷವು ಒಬ್ಬನನ್ನು ಕೊಲ್ಲುತ್ತದೆ. ಆಯುಧದಿಂದ ಒಬ್ಬನು ಹತನಾಗುತ್ತಾನೆ. ಆದರೆ ಕೆಟ್ಟ ಮಂತ್ರಾಲೋಚನೆ ಬಂಧು–ರಾಷ್ಟ್ರಸಮೇತವಾಗಿ ರಾಜನನ್ನು ನಾಶಮಾಡುತ್ತದೆ.''

ವಿಷದಿಂದ, ಹರಿತವಾದ ಆಯುಧದಿಂದ ಆಗುವ ಅನರ್ಥಕ್ಕಿಂತ 'ಮಂತ್ರವಿಪ್ಲವ'ದಿಂದ ಆಗುವ ಅನರ್ಥ ಘೋರವಾದದ್ದು, ರಾಷ್ಟ್ರವ್ಯಾಪಿಯಾದದ್ದು. ರಾಷ್ಟ್ರದಲ್ಲಿರುವ ಪ್ರತಿಯೊಬ್ಬ ಪ್ರಜೆಗೂ ಅದರ ಬಿಸಿ ತಟ್ಟುತ್ತದೆ. ಮಂತ್ರಾಲೋಚನೆಯ ವಿಪ್ಲವ ಹೇಗೆ ರಾಷ್ಟ್ರದ ವಿಪತ್ತಿಗೆ ಕಾರಣವಾಗುತ್ತಿದೆಯೆಂಬುದನ್ನು ರಾಮಾಯಣ, ಮಹಾಭಾರತ ಕಥೆಗಳೂ ಇತಿಹಾಸವೂ ಸ್ಪಷ್ಟಪಡಿಸಿವೆ. ಯಾವ ಮಂತ್ರಾಲೋಚನೆಯಲ್ಲಿ ರಾಷ್ಟ್ರವ್ಯಾಪಿಯಾದ ಹಿತದೃಷ್ಟಿಯಿಲ್ಲವೋ, ಯಾವುದು ದೂರದೃಷ್ಟಿಯನ್ನು ಕಳೆದುಕೊಂಡು ಸ್ವಾರ್ಥದಿಂದ ಸಂಕುಚಿತವಾಗುವುದೋ ಅದು 'ಮಂತ್ರವಿಪ್ಲವ'. ನಿರಂಕುಶ ಪ್ರಭುತ್ವದ 'ಏಕರಾಜ' ವ್ಯವಸ್ಥೆಯಲ್ಲಿಯೇ 'ಮಂತ್ರವಿಪ್ಲವ'ದಿಂದಾಗುವ ಅನರ್ಥವನ್ನು ಹಿಂದಿನವರು ಕಂಡುಕೊಂಡಿದ್ದರು. ಆಗ ಮಂತ್ರಾಲೋಚನೆ ಹೇಳತಕ್ಕವರ ಸಂಖ್ಯೆ ಪರಿಮಿತವಾಗಿತ್ತು; ಅವರ ಆಸೆ ಆಮಿಷಗಳು ರಾಜಾನುಗ್ರಹಕ್ಕೆ ಮಾತ್ರ ಸೀಮಿತವಾಗಿತ್ತು. ಈ ಪ್ರಜಾಪ್ರಭುತ್ವ ಯುಗದಲ್ಲಾದರೋ ಮಂತ್ರಾಲೋಚನೆ ಮಾಡತಕ್ಕವರ ಸಂಖ್ಯೆ ಅಪರಿಮಿತ; ಆಸೆ ಆಮಿಷಗಳು ಅನಂತಮುಖಿ. ಹಿಂಬಾಲಕರ ಸಂಖ್ಯೆಗೆ ಅನುಗುಣವಾಗಿ ಮಂತ್ರಾಲೋಚನೆ ಪರಿಪುಷ್ಟವಾಗಿ ತೂಕವನ್ನು ಹೆಚ್ಚಿಸಿಕೊಳ್ಳುತ್ತದೆ. ಅದಕ್ಕೆ ಬರುವ ತೂಕ ಸಂಖ್ಯಾಬಲದಿಂದಲೇ ಹೊರತು ತೂಕವಾದ ವಿಚಾರದಿಂದಲ್ಲ. ಸಂಖ್ಯಾಬಲ ಬರುವುದು ಸ್ವಾರ್ಥಬಲದಿಂದ.

'ಸ್ವ' ಎಂದರೆ 'ನಾನು, ನನ್ನ ಬಂಧುಗಳು' ಎಂದಷ್ಟೇ ಆದರೆ ಅದು ಸ್ವಾರ್ಥಕಲುಷಿತ. ಅದೇ 'ಸ್ವ' ಎಂದರೆ 'ನಮ್ಮ ರಾಷ್ಟ್ರ' ಎಂದಾದಾಗ ಅಂತಹ ಸ್ವಾರ್ಥ ಪವಿತ್ರವಾದದ್ದು. ಈ ದೃಷ್ಟಿಯಿಂದಾದ ಮಂತ್ರಾಲೋಚನೆ ರಾಷ್ಟ್ರಕ್ಕೆ ಹಿತಕಾರಿ. ಈ ವಿಶಾಲಾರ್ಥದ ಸ್ವಾರ್ಥದಿಂದ ಪ್ರಚೋದಿತವಾದ ಮಂತ್ರಾಲೋಚನೆ ನಮಗೆ ಬೇಕಾದದ್ದು. ಸರಿಯಾಗಿ ಬಳಸಿದ ವಿಷ ಔಷಧವಾಗಿ ಅಮೃತವಾಗುತ್ತದೆ; ಆಯುಧವೂ ಲೋಕೋಪಕಾರಿಯಾಗುತ್ತದೆ.

**ವಾಕ್‌ಸಂಯಮೋ ಹಿ ನೃಪತೇ ಸುದುಷ್ಕರತಮೋ ಮತಃ |**
**ಅರ್ಥವಚ್ಚ ವಿಚಿತ್ರಂ ಚ ನ ಶಕ್ಯಂ ಬಹು ಭಾಷಿತುಮ್ || || ೪ ||**

— ವಿದುರನೀತಿ

"ರಾಜ, ಮಾತನ್ನು ಮಿತವಾಗಿ ಬಳಸುವುದು ಬಹಳ ಕಷ್ಟ. ಅರ್ಥವತ್ತಾಗಿಯೂ ನಾನಾ ಯುಕ್ತಿಗಳಿಂದಲೂ ನಿದರ್ಶನಗಳಿಂದಲೂ ಕೂಡಿ ವಿಚಿತ್ರವೆನಿಸುವಂತೆ ಹೆಚ್ಚು ಮಾತಾಡಲು ಸಾಧ್ಯವೂ ಇಲ್ಲ."

ನಮಗೆ ಯಾವುದರ ದುರ್ಭಿಕ್ಷವಾದರೂ ಮಾತುಗಳಿಗೆ ದುರ್ಭಿಕ್ಷವಿಲ್ಲ! ಮಾತಿನ ಸರಮಾಲೆಯನ್ನು ಜೋಡಿಸಿ ಭಾಷಣ ಬಿಗಿಯಬಲ್ಲೆವು. ಹಾಗೆಯೇ ಬರೆಯಲೂಬಲ್ಲೆವು. 'ಅಚ್ಚಿನಾ ಮೊಳೆಯುಂಟು, ವೆಚ್ಚಕ್ಕೆ ಹೊನ್ನುಂಟು.' ಅದು ಸಂಗತವಾಗಿದೆಯೋ ಅಸಂಗತವಾಗಿದೆಯೋ, ಜನರಿಗೆ ಬೇಕಾದದ್ದೋ ಬೇಡವಾದ್ದೋ ಎಂದು ಯಾರೂ ಮನಸ್ಸಿಗೆ ತಂದುಕೊಳ್ಳುವುದಿಲ್ಲ. ನಾವು ಮಾತಿನ ಮಲ್ಲರು. ಸರ್ಕಾರ ಅದಕ್ಕೆ ತೆರಿಗೆ ಹಾಕಿದರೆ ಲೇಸೆನಿಸುತ್ತದೆ ! ವಾಕ್‌ಚಪಲವು ಮನುಷ್ಯನು ಗೆಲ್ಲಲಾರದ ಒಂದು ಚಟ.

'ಮಾತನಾಡಿದರೆ ಮುತ್ತು ಚೆಲ್ಲುವಂತಿರಬೇಕು' ಎನ್ನುವುದು ದೊಡ್ಡವರ ಹಿತ ನುಡಿ. ಮಾತಾಡುವುದು ಮನುಷ್ಯನಿಗೆ ದೈವದತ್ತವಾದ ಒಂದು ಶಕ್ತಿ. ಆ ಶಕ್ತಿ ಮುತ್ತಿನ ಬೆಲೆಯುಳ್ಳದ್ದು. 'ಮಹೀಯಾಂಸಃ ಪ್ರಕೃತ್ಯಾ ಮಿತಭಾಷಿಣಃ' ('ದೊಡ್ಡವರು ಸಹಜವಾಗಿ ಮಿತಭಾಷಿಗಳು') ಎನ್ನುತ್ತದೆ ಒಂದು ಸುಭಾಷಿತ.

ಸತ್ಯವನ್ನು ನುಡಿಯಲು ಹೆಚ್ಚು ಮಾತುಗಳು ಬೇಕಿಲ್ಲ. ಏಕೆಂದರೆ, ಸತ್ಯದ ಸ್ವರೂಪ ಒಂದೇ ಆಗಿರುತ್ತದೆ. ಪ್ರಜೆಗಳಿಗೆ ಬೇಕಾದ್ದು ಸುಖ-ನೆಮ್ಮದಿ. ಅದೊಂದರ ವಿಷಯವಾಗಿ ನಮ್ಮ ರಾಜಕೀಯಸ್ಥರು ಮಾಡುವ ಭಾಷಣಗಳಿಂದ ಆಕಾಶ ಪ್ರತಿಧ್ವನಿತವಾಗಿದೆ. ಅವರಾಡುವ ಮಾತು ಗಾಳಿಯಲ್ಲಿ ಇಂಗಿಹೋಗುವುದರಿಂದ ಎಷ್ಟು ಮಾತಾಡಿದರೂ ಆಕಾಶ ಹಿಡಿಸುತ್ತದೆ ! ಕಲ್ಲುಹರಳುಗಳಂತೆ ಅವು ಉಳಿದುಕೊಂಡಿದ್ದರೆ ಆಕಾಶ ತುಂಬಿಹೋಗಿ ಮುಂದಿನ ಮಾತುಗಳಿಗೆ ಸ್ಥಳ ಇರುತ್ತಿರಲಿಲ್ಲ.

ಹೆಚ್ಚು ಮಾತಾಡುವುದು 'ವಾಚೋ ವಿಗ್ಲಾಪನಮ್'. ಅದು ವಾಗ್ದೇವಿಯನ್ನು ಬಳಲಿಸುವುದು; ವಾಕ್‌ಶಕ್ತಿಯ ದುರುಪಯೋಗ. ನಮಗಿರುವುದು ವಾಕ್‌ಶಕ್ತಿಯ ಕೊರತೆಯಲ್ಲ, ಕ್ರಿಯಾಶಕ್ತಿಯ ಕೊರತೆ.

**ಪರಿವರ್ತಿನಿ ಸಂಸಾರೇ ಮೃತಃ ಕೋವಾ ನ ಜಾಯತೇ |**
**ಸ ಜಾತೋ ಯೇನ ಜಾತೇನ ಯಾತಿ ವಂಶಃ ಸಮುನ್ನತಿಮ್ || || ೫ ||**

— **ನೀತಿಶತಕ**

"ಸುತ್ತುತ್ತಿರುವ ಈ ಸಂಸಾರದಲ್ಲಿ ಸತ್ತವನು ಯಾವನು ತಾನೇ ಮತ್ತೆ ಹುಟ್ಟುವುದಿಲ್ಲ ? ಹುಟ್ಟಿದ ಯಾವನಿಂದ ವಂಶವು ಉನ್ನತ ಸ್ಥಾನಕ್ಕೇರುವುದೋ ಅವನೇ ನಿಜವಾಗಿ ಹುಟ್ಟಿದವನು (ಅವನ ಜನ್ಮ ಸಾರ್ಥಕ)."

ಸಂಸಾರಚಕ್ರ ಅನಾದಿಯೆನ್ನುತ್ತಾರೆ. ಇದರಲ್ಲಿ ಮನುಷ್ಯ ಲೆಕ್ಕವಿಲ್ಲದಷ್ಟು ಹುಟ್ಟು-ಸಾವುಗಳನ್ನು ಪಡೆದಿದ್ದಾನೆ. ಜಗತ್ತಿಗೆ ಯಾವನೂ ಹೊಸಬನಲ್ಲ. "ಜಾತಸ್ಯ ಹಿ ಧ್ರುವೋ ಮೃತ್ಯುಃ, ಧ್ರುವಂ ಜನ್ಮ ಮೃತಸ್ಯ ಚ." ಆದರೂ ಮಗನು ಹುಟ್ಟಿದನೆಂದರೆ ತಾಯಿತಂದೆಗಳಿಗೆ ಸಂಭ್ರಮ. ಪ್ರತಿವರ್ಷ ಅವನ ಹುಟ್ಟುಹಬ್ಬ ನಡೆಯುತ್ತದೆ. ಸಕಲ ಪ್ರಾಣಿಗಳೂ ಸತ್ತಮೇಲೆ ಹುಟ್ಟುವರೆಂದಾಗ ಹುಟ್ಟುವುದು ಸಹಜವಾಯಿತು.

ನಮ್ಮವರು ಕುಲ, ವಂಶ, ಮನೆತನ, ಇವುಗಳಿಗೆ ಬಹಳ ಪ್ರಾಮುಖ್ಯವನ್ನು ಕೊಡುತ್ತಿದ್ದರು. 'ನನ್ನಿಂದ ನನ್ನ ವಂಶ ವಿಖ್ಯಾತವಾಗಬೇಕು, ಅದಾಗದಿದ್ದರೆ ಅದಕ್ಕೆ ನನ್ನಿಂದ ಕಳಂಕವಾದರೂ ಸಂಭವಿಸಬಾರದು' ಎಂಬುದು ಅವರ ಮನೀಷೆಯಾಗಿತ್ತು. ವಸಿಷ್ಠಗೋತ್ರ, ವಿಶ್ವಾಮಿತ್ರಗೋತ್ರ, ಸೂರ್ಯವಂಶ, ಚಂದ್ರವಂಶ ಎಂದೆಲ್ಲ ಸ್ಮರಿಸಿಕೊಳ್ಳುವ ಉದ್ದೇಶವೇ ಅದು. ವಂಶೀಯರು ಸಾಧಿಸಿದ ಮಹತ್ತರ ಕಾರ್ಯವನ್ನು ನೆನೆದು ನವಸ್ಫೂರ್ತಿಯನ್ನು ಪಡೆಯುವ ತವಕ ಈ ಸ್ಮರಣೆಯಲ್ಲಿದೆ.

ರಾಮಾಯಣದಲ್ಲಿ ಶ್ರೀರಾಮಚಂದ್ರನಿಗೆ ಸಂಬಂಧಿಸಿದಂತೆ 'ಕುಲಂ ವ್ಯಪದಿಶನ್ ಮಹತ್' ಎಂಬ ನುಡಿ ಹಲವೆಡೆ ಬರುತ್ತದೆ. ಆತನು, "ಕೀರ್ತಿಶಾಲಿಯಾದ ಸೂರ್ಯವಂಶದಲ್ಲಿ ದಶರಥನಿಗೆ ಮಗನಾಗಿ ಹುಟ್ಟಿದ ನಾನು ತಂದೆಯ ಮಾತನ್ನು ಮೀರಲೆ ? ಎರಡು ನುಡಿಯಲೆ ? ಇನ್ನೊಬ್ಬರನ್ನು ಯಾಚಿಸಲೆ ? ಯುದ್ಧದಿಂದ ಸರಿಯಲೆ ?" – ಎನ್ನುತ್ತಾನೆ. ಸೀತೆಯೂ ಸಹ "ಜನಕರಾಜನಿಗೆ ಮಗಳಾಗಿ, ದಶರಥನಿಗೆ ಸೊಸೆಯಾಗಿ, ಶ್ರೀರಾಮನಿಗೆ ಪತ್ನಿಯಾಗಿ – ಹುಟ್ಟಿದ ಕುಲಕ್ಕೆ, ಸೇರಿದ ಕುಲಕ್ಕೆ–ಕಳಂಕವನ್ನು ತಂದೇನೆ ?" –ಎಂದು ರಾವಣನಿಗೆ ಮಾರುತ್ತರ ಕೊಡುತ್ತಾಳೆ.

ಆತ್ಮಾಭಿಮಾನ ಎಂಬಲ್ಲಿ ಆತ್ಮವು ಹಲವಾರು ಭಾವನೆಗಳ ಮೂಟೆ. ಇದರಲ್ಲಿ ಕುಲದ ಕಾಣಿಕೆ ದೊಡ್ಡದು. ಕುಲಾಭಿಮಾನದಿಂದ ಚಿಗುರಿದುದು ಆತ್ಮಾಭಿಮಾನ. ಇದು ಇನ್ನೂ ವಿಸ್ತೃತವಾದರೆ ದೇಶಾಭಿಮಾನವಾಗುತ್ತದೆ. ದೇಶಾಭಿಮಾನಿಯು ತನ್ನ ಜನ್ಮದಿಂದ ದೇಶದ ಕೀರ್ತಿ ಹೆಚ್ಚಬೇಕೆಂದು ಬಯಸುತ್ತಾನೆ. ದೇಶಾಭಿಮಾನದ ವಿಸ್ತೃತರೂಪ ವಿಶ್ವಾಭಿಮಾನ. ಅದು ಯಾರಿಗಿದೆಯೋ ಅವನು ವಿಶ್ವಕುಟುಂಬಿ. ತನ್ನ ಹುಟ್ಟಿನಿಂದ ವಿಶ್ವಕ್ಕೆ ಒಂದು ಕಾಣಿಕೆ ಸಂದಾಯವಾಗಲೆಂದು ಅವನು ಆಶಿಸುತ್ತಾನೆ.

ಭಾರಸ್ಯೋದ್ವಾಹನಾರ್ಥಂ ಚ ರಥಾಕ್ಷೋಽಭ್ಯಜ್ಯತೇ ಯಥಾ |
ಭೋಜನಂ ಪ್ರಾಣಯಾತ್ರಾರ್ಥಂ ತದ್ವದ್ ವಿದ್ವಾನ್ನಿಷೇವತೇ || || ೬ ||

"ಭಾರವನ್ನೆಳೆಯಲು ಸೌಕರ್ಯವಾಗಲೆಂದು ರಥದ ಅಚ್ಚಿಗೆ ಎಣ್ಣೆಯನ್ನು ಲೇಪಿಸುತ್ತಾರೆ. ಹಾಗೆಯೇ ಪ್ರಾಣಯಾತ್ರೆ ಸಾಗಲೆಂದು ವಿದ್ವಾಂಸನು ಆಹಾರವನ್ನು ಸೇವಿಸುತ್ತಾನೆ."

ಗಾಡಿಯ ಅಚ್ಚಿಗೆ ಎಣ್ಣೆ ಹಾಕುವ ಉದ್ದೇಶ ಗಾಲಿ ಚೆನ್ನಾಗಿ ತಿರುಗಲಿ, ಭಾರ ಮುಂದಕ್ಕೆ ಸಾಗಲಿ ಎಂದು. ಎಣ್ಣೆ ಇದೆಯೆಂದು ಡಬ್ಬಗಟ್ಟಲೆ ಯಾರೂ ಅದಕ್ಕೆ ಸುರಿಯುವುದಿಲ್ಲ. ಸುರಿದರೆ ಎಣ್ಣೆಯೂ ಹಾಳು, ಗಾಲಿಯೂ ಹಾಳು.

ಆದು ನಯವಾಗಿ ತಿರುಗಲೂ ಆಗದು. ಹಾಗೆಯೇ ಮನುಷ್ಯನಿಗೆ ಪ್ರಾಣ ಯಾತ್ರೆ ಸಾಗಲೆಂಬುದು ಊಟದ ಉದ್ದೇಶ. ತಿನ್ನುವುದೇ ಉದ್ದೇಶವಲ್ಲ. ಹೆಚ್ಚಾಗಿ ತಿಂದರೆ ಆಹಾರವು ಹಾಳಾಗುವುದರ ಜೊತೆಗೆ ಆರೋಗ್ಯಕ್ಕೂ ಕೆ ಡು.

'ಬದುಕುವುದಕ್ಕಾಗಿ ತಿನ್ನು, ತಿನ್ನುವುದಕ್ಕಾಗಿ ಬದುಕಬೇಡ' ಎಂಬ ಗಾದೆಯುಂಟು. 'ದೇಹಕ್ಕೆ ಬೇಕಾದ್ದಕ್ಕಿಂತ ಹೆಚ್ಚಾಗಿ ತಿನ್ನುವುದು ಇನ್ನೊಬ್ಬರ ಅನ್ನವನ್ನು ಕಿತ್ತುಕೊಂಡಂತೆ. ಅದು ಪಾಪ' ಎಂದು ಮಹಾತ್ಮಾ ಗಾಂಧಿಯವರು ಹೇಳುತ್ತಿದ್ದರು.

ಊಟ, ಧಾನ್ಯ, ಧನ–ಎಲ್ಲ ಒಂದೇ. ಇವು ಭೋಗಸಾಮಗ್ರಿಯ ನಾನಾರೂಪ. ಅಧಿಕವಾಗಿ ಕೂಡಿಹಾಕುವುದು ನೀತಿಯಲ್ಲ ಎಂಬುದೇ ಮೂಲತತ್ತ್ವ. ಅಧಿಕವೆಂದರೆ ಎಷ್ಟು? ತನ್ನ ಸುತ್ತಮುತ್ತ ತನ್ನ ಊರಲ್ಲಿ, ತನ್ನ ದೇಶದಲ್ಲಿ ಇರತಕ್ಕ ಜನಸಾಮಾನ್ಯರ ಸುಖಸಾಮಗ್ರಿಗಿಂತ ಅಧಿಕ. ಅವರಿಗಿಂತ ಹೆಚ್ಚಾಗಿ ಕೂಡಿಹಾಕಿ, ಅವರು ಹೊಟ್ಟೆಗಿಲ್ಲದೆ ನವೆಯುತ್ತಿರುವಾಗ ತಾನು ಸುಖದಲ್ಲಿ ಓಲಾಡುವುದು ಸಲ್ಲದು. ಬಡಜನರೆದುರಿಗೆ ಶ್ರೀಮಂತಿಕೆಯನ್ನು ತೋರಿಸುವುದು ಬಡಜನತೆಯನ್ನು ಹಂಗಿಸಿದಂತೆ, ಅಣಕವಾಡಿದಂತೆ.

ಇನ್ನೊಂದು ನೀತಿಶ್ಲೋಕ ಹೀಗೆನ್ನುತ್ತದೆ : "ನಿನ್ನಲ್ಲಿ ನೂರು ಹಸುಗಳು ಇರಬಹುದು. ನೀನು ಕುಡಿಯುವುದು ಒಂದು ಹಸುವಿನ ಹಾಲಿನಲ್ಲಿ ಒಂದು ಪಾವನ್ನು ಮಾತ್ರ. ಒಂದು ಖಂಡುಗ ಅಕ್ಕಿ ಇರಬಹುದು. ನಿನಗೆ ಬೇಕಾದ್ದು ಒಂದು ಪಾವು ಅಕ್ಕಿ. ದೊಡ್ಡ ಬಂಗಲೆಯೇ ನಿನ್ನದಿರಬಹುದು. ನೀನು ಮಲಗುವುದು ಒಂದು ಕೋಣೆಯ, ಒಂದು ಮಂಚದ ಒಂದು ಮಗ್ಗುಲಲ್ಲಿ! ಉಳಿದುದೆಲ್ಲ ಪರರಿಗೆ ಸೇರಿದ್ದು

'ಅತಿ ಆಸೆ, ಗತಿಗೇಡು' ಎನ್ನುವುದು ಇದಕ್ಕಾಗಿ. ಇದು ನಿರಾಶಾ ವಾದವಲ್ಲ. 'ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು' ಎಂಬುದರ ತಿರುಳು ಈ ನುಡಿಯಲ್ಲಿದೆ.

**ದಾನಂ ಭೋಗೋ ನಾಶಸ್ತಿಸ್ರೋ ಗತಯೋ ಭವಂತಿ ವಿತ್ತಸ್ಯ |**
**ಯೋ ನ ದದಾತಿ ನ ಭುಂಕ್ತೇ ತಸ್ಯ ತೃತೀಯಾ ಗತಿರ್ಭವತಿ || || ೭ ||**

**— ನೀತಿಶತಕ**

"ದಾನ, ಭೋಗ, ನಾಶ – ಎಂದು ಹಣಕ್ಕೆ ಮೂರು ಗತಿಗಳುಂಟು. ಯಾವನು ದಾನ ಮಾಡುವುದಿಲ್ಲವೋ ತಾನೂ ಭೋಗಿಸುವುದಿಲ್ಲವೋ ಅವನ ಹಣಕ್ಕೆ ಮೂರನೆಯ ಗತಿ, ಎಂದರೆ ನಾಶ ಉಂಟಾಗುತ್ತದೆ."

ಹಣವಿರುವುದು ಚಲಾವಣೆಗಾಗಿ. ಚಲಾವಣೆಯೆಂದರೆ ಕೊಳ್ಳುವುದು ಅಥವಾ ಕೊಡುವುದು. ಕೊಳ್ಳುವುದು ತನಗಾಗಿ, ಕೊಡುವುದು ಪರರಿಗಾಗಿ. ಕೊಳ್ಳುವುದು ಸ್ವಾರ್ಥವೆನಿಸಿದರೂ ಪರಿಣಾಮದಲ್ಲಿ ಪರಾರ್ಥವೂ ಆಗುತ್ತದೆ. ಯಾರೂ ಹಣವನ್ನೇ ತಿನ್ನುವುದಿಲ್ಲ; ಅನ್ನಕ್ಕಾಗಿ, ಬಟ್ಟೆಗಾಗಿ ಖರ್ಚು ಮಾಡುತ್ತಾರೆ. ಪರಿಣಾಮದಲ್ಲಿ ಆ ಹಣ ರೈತನಿಗಷ್ಟು, ನೇಕಾರನಿಗಷ್ಟು ಸೇರಿಹೋಗುತ್ತದೆ. ಹೀಗೆ ಭೋಗದಲ್ಲಿಯೂ ಒಂದಂಶದ ತ್ಯಾಗ ಉಂಟು. ಆದರೆ ಉದ್ದೇಶ ಸ್ವಾರ್ಥವಾದ್ದರಿಂದ ಸ್ವಾರ್ಥದ ಲೇಪನ ಉಂಟು. ಇದು ರಾಜಸ.

ಬಡಬಗ್ಗರಿಗಾಗಿ ಕೊಡುವುದು ದಾನ. ಆಸ್ಪತ್ರೆ, ವಿದ್ಯಾಶಾಲೆಗಳ ನಿರ್ಮಾಣ ಮೊದಲಾದವು ದಾನದ ವಿವಿಧ ಮುಖಗಳು. ಪರಾರ್ಥವೇ ಉದ್ದೇಶವಾದರೆ ಈ ದಾನ ಸಾತ್ತ್ವಿಕ. ಹೆಸರಿಗಾಗಿ, ಕಳ್ಳಹಣವನ್ನು ದಕ್ಕಿಸಿಕೊಳ್ಳುವುದಕ್ಕಾಗಿ ಆದರೆ, ಆಗ ಆ ದಾನ ರಾಜಸ.

ಧನ ಶಬ್ದದಿಂದ ಧಾನ್ಯ ಶಬ್ದ ಹುಟ್ಟಿದೆ, ಒಂದು ಕಾಲದಲ್ಲಿ ಧಾನ್ಯವೇ ಧನವೆನಿಸಿತ್ತು. ಧಾನ್ಯವನ್ನು ಬಹುಕಾಲ ಕೂಡಿಹಾಕಲಾಗುತ್ತಿರಲಿಲ್ಲ. ಆದರ ವಿನಿಯೋಗ ನಡೆಯುತ್ತಲೇ ಇರಬೇಕಾಗಿತ್ತು. ಧಾನ್ಯವನ್ನು ತಿನ್ನಬೇಕು, ಇಲ್ಲವೆ, ತಿನ್ನಲಿಲ್ಲದವರಿಗೆ ಕೊಡಬೇಕು. ಇಂಥ ಧನವುಳ್ಳವನು ಧನ್ಯನೆನಿಸಿದ್ದ. ದ್ರವ್ಯವೂ ಧನವೇ.

ದ್ರವ್ಯಯಜ್ಞವು ಹಲವಾರು ಯಜ್ಞಗಳಲ್ಲೊಂದು. 'ಯಜಃ ದೇವಪೂಜಾ-ಸಂಗತಿಕರಣದಾನೇಷು' ಎಂದು ಧಾತ್ವರ್ಥ. ದೇವತಾಪೂಜೆ, ಅಧಿಕವಾಗಿರು

ವುದರ ಸಮನ್ವಿತ ವಿತರಣೆ, ಬಡಬಗ್ಗರಿಗೆ ದಾನ – ಇವಿಷ್ಟು 'ಯಜ್ಞ' ಶಬ್ದಾರ್ಥ. ಒಂದು ವರ್ಷಕ್ಕಿಂತ ಹೆಚ್ಚಾಗುವಷ್ಟು ದ್ರವ್ಯ ಉಳ್ಳವನು ಯಜ್ಞ ಮಾಡಬೇಕೆಂದು ವಿಧಿಸುತ್ತದೆ ಶಾಸ್ತ್ರ.

ಗಾಳಿ ಸ್ವಚ್ಛವಾಗಿರಬೇಕಾದರೆ ಬೀಸುತ್ತಿರಬೇಕು. ನೀರು ಶುದ್ಧವಾಗಿರಬೇಕಾದರೆ ಹರಿಯುತ್ತಿರಬೇಕು. ಹಣದ ವಿನಿಯೋಗವಾಗುತ್ತಿದ್ದರೆ ಮಾತ್ರ ಅದಕ್ಕೆ ನೈರ್ಮಲ್ಯ.

ಹೂ, ಹಣ್ಣು, ಹಣ – ಇವುಗಳಿಗೆ ಭೋಗ, ದಾನ ಎರಡೇ ಸರಿಯಾದ ಗತಿ. ಇಲ್ಲದಿದ್ದರೆ ಹೂ ಬಾಡುತ್ತದೆ, ಹಣ್ಣು ಕೊಳೆಯುತ್ತದೆ. ಹಣ ಕಂಡವರ ಪಾಲಾಗಿ ಹಾಳಾಗುತ್ತದೆ.

ಶಾಸ್ತ್ರಕಾರರು ಪ್ರತಿಯೊಂದು ಪದಾರ್ಥಕ್ಕೂ ಆರು ವಿಕಾರಗಳಿವೆ ಎಂದು ಗೊತ್ತುಮಾಡಿದ್ದಾರೆ. ಜಾಯತೇ, ಅಸ್ತಿ, ವರ್ಧತೇ, ವಿಪರಿಣಮತೇ, ಕ್ಷೀಯತೇ, ನಶ್ಯತಿ – ಎಂಬಿವು ಆರು ಭಾವವಿಕಾರಗಳು. ಉದಾಹರಣೆಗೆ ನಮ್ಮ ದೇಹವನ್ನೇ ತೆಗೆದುಕೊಳ್ಳಬಹುದು. ಇದು ಮೊದಲು ಹುಟ್ಟಿತು ಎನ್ನುತ್ತೇವೆ. ವಿಶಿಷ್ಟರೂಪವನ್ನು ತಳೆದು ಇಲ್ಲಿದೆ, ಅಲ್ಲಿದೆ, ಈ ಆಕೃತಿಯಲ್ಲಿ ಇಷ್ಟು ಪ್ರಮಾಣದಲ್ಲಿದೆ ಎಂಬ ವ್ಯವಹಾರಕ್ಕೆ ಗೋಚರವಾಗುವುದು 'ಅಸ್ತಿ'. ಅನಂತರ ಆಹಾರವನ್ನು ತನ್ನಲ್ಲಿ ಅಳವಡಿಸಿಕೊಂಡು ದೇಹ ವರ್ಧಿಸುತ್ತದೆ. ಬೆಳವಣಿಗೆ ನಿಂತ ಮೇಲೆ ವಿಪರಿಣಾಮ. ಕೂದಲು ಬೆಳ್ಳಗಾಗುವುದು, ಚರ್ಮ ಮೂಳೆ ಮಾಂಸಖಂಡಗಳು ಬೆಳವಣಿಗೆಯನ್ನು ನಿಲ್ಲಿಸಿ ಬೇರೆ ಬೇರೆ ರೂಪವನ್ನು ತಳೆಯುವುದು ವಿಪರಿಣಾಮ. ಆಮೇಲೆ ದೇಹದ ಕ್ಷೀಣತೆ, ಅನಂತರ ನಾಶ – ಮರಣ.

ಹೀಗೆ ಆರು ವಿಕಾರಗಳಿಗೆ ಒಳಪಟ್ಟ ಹಣಕ್ಕೂ ಮೂರು ಗತಿಗಳನ್ನು ವ್ಯಾವಹಾರಿಕವಾಗಿ ನೀತಿಶಾಸ್ತ್ರಕಾರನು ಹೇಳಿದ್ದಾನೆ. ಹಣವನ್ನು ಸಂಪಾದಿಸುವುದು ತಮ್ಮ ಭೋಗಕ್ಕಾಗಿ ಎಂಬುದನ್ನು ಸಕಲರೂ ಬಲ್ಲರು. ಈ 'ಸ್ವಾರ್ಥ'ದಲ್ಲಿ **ಮಡದಿ ಮಕ್ಕಳ ಸುಖ** ಎಂಬ 'ಸ್ವಕೀಯಾರ್ಥ'ವೂ ಸೇರಿ ಹೋಗುತ್ತದೆ. ವಿಚಾರ ಮಾಡಿದಾಗ ತನಗಾಗಿಯೇ ಅಲ್ಲವೆ ತನ್ನವರೆ ಎಂಬ ಅಭಿಮಾನ ?

ಯಾರು ಹಣದ ಅಭಾವದಿಂದ ತತ್ತರಿಸುತ್ತಿದ್ದಾರೋ ಅವರಿಗೆ ಕೊಡುವುದು ದಾನ. ಅದನ್ನು ಸತ್ಪಾತ್ರರಿಗೆ ಕೊಡಬೇಕೆಂಬುದು ಸರ್ವಸಂಮತ ವಾದ ನೀತಿ.

ತಾನೂ ತಿನ್ನಬೇಕು, ಹಸಿದವರಿಗೂ ತಿನ್ನಿಸಬೇಕು ಎಂಬುದೇ ಮೂಲತತ್ತ್ವ. ದಾನ, ಭೋಗ – ಎಂಬ ಎರಡು ಗತಿಗಳು ಧನಕ್ಕೆ ದೊರೆಯದೆ ಹೋದಾಗ ನಾಶ ಎಂಬ ಮೂರನೆಯ ಗತಿ ಅದಕ್ಕೆ ಕಟ್ಟಿಟ್ಟದ್ದು. ಅದು ತನ್ನ ಪಾಲಿಗೆ ಇಲ್ಲ ಎಂಬುದೇ ನಾಶ. ಭೋಗದಿಂದಾದ ಸುಖವಾಗಲಿ, ದಾನದಿಂದಾಗುವ ಪುಣ್ಯವಾಗಲಿ ಅವನ ಪಾಲಿಗೆ ಇಲ್ಲ. ತಾನೂ ತಿನ್ನ, ಪರರಿಗೂ ಕೊಡ – ಎಂಬ ಕಡುಲೋಭಿ ಈ ನೀತಿಯಿಂದ ಏನಾದರೂ ಕಲಿತರೆ ಅವನಿಗೇ ಒಳ್ಳೆಯದು. ಭಾಗವತದಲ್ಲಿ ಈ ನೀತಿಯನ್ನೇ ವಿಸ್ತರಿಸಿ "ಮನುಷ್ಯನು ಹಣವನ್ನು ಧರ್ಮಕ್ಕಾಗಿ, ಕೀರ್ತಿಗಾಗಿ, (ಉದ್ಯೋಗದಲ್ಲಿ ತೊಡಗಿಸಿ) ಮತ್ತೆ ಧನಾರ್ಜನೆಗಾಗಿ, ತನ್ನ ಭೋಗಕ್ಕಾಗಿ, ಸ್ವಜನರಿಗಾಗಿ ಹಂಚಬೇಕು" – ಎಂದು ಹೇಳಿದೆ (೮-೧೯-೩೭). ಸ್ವಾರ್ಥವನ್ನು ಗೌಣವಾಗಿಸಿ ಪರಾರ್ಥವಾಗಿ ದುಡಿಯಬೇಕೆಂಬುದು ನೀತಿಶಾಸ್ತ್ರಕಾರನ ಹೃದಯ. ಆದ್ದರಿಂದ "ದಾನಂ ಭೋಗೋ ನಾಶಃ...." ಎಂಬಲ್ಲಿ ದಾನವನ್ನೇ ಮೊದಲು ಹೇಳಿದ್ದಾರೆ.

**ಅಹಂ ಮಮಾಭಿಮಾನೋತ್ಥೈಃ ಕಾಮಲೋಭಾದಿಭಿರ್ಮಲೈಃ |**
**ವೀತಂ ಯದಾ ಮನಃ ಶುದ್ಧಮದುಃಖಮಸುಖಂ ಸಮಂ || || ೮ ||**

— ಭಾಗವತ

" 'ನಾನು–ನನ್ನದು' ಎಂಬ ಅಭಿಮಾನದಿಂದ ಹುಟ್ಟಿದ ಕಾಮ, ಲೋಭ ಮುಂತಾದವು ಮನಸ್ಸನ್ನು ಮಲಿನಗೊಳಿಸುತ್ತವೆ. ಈ ಕೊಳೆಯಿಂದ ಮನಸ್ಸು ಯಾವಾಗ ಪರಿಶುದ್ಧವಾಗುವುದೋ ಆಗ ಸುಖವಾಗಲಿ ದುಃಖವಾಗಲಿ ಸಮವೆನಿಸುತ್ತದೆ."

ನಾನು ಬಲ್ಲೆ, ನಾನು ಮಾಡುತ್ತೇನೆ – ಎಂದು ಮನುಷ್ಯನು ಎದೆಮುಟ್ಟಿ ಕೊಳ್ಳುವುದು ಯಾವುದಕ್ಕೆ ಸೂಚನೆ ? ಎದೆಯಲ್ಲಿ ನೆಲೆಸಿದ ಆತ್ಮನಿಗೋ,

ದೇಹಕ್ಕೋ ? ಆತ್ಮ, ದೇಹ ಎರಡನ್ನೂ ಕಲಸುಮೇಲೋಗರವಾಗಿ 'ನಾನು' ಎನ್ನುತ್ತಾನೆ ಮನುಷ್ಯ. ಇದೇ ಅಹಂಕಾರ. ನಾನು ಎಂಬ ಅಭಿಮಾನ. ನಾನು ಎಂಬುದೇ ನನ್ನದು ಎಂಬ ಮಮಕಾರಕ್ಕೆ ಮೂಲ. ಈ ಅಹಂಕಾರ ಮಮಕಾರಗಳೇ ಸುಖದುಃಖಗಳ ಬೇರು.

ಸುಖವನ್ನು ಅರಸುತ್ತ ಹೊರಟೆವೋ, ದುಃಖವು ನೆರಳಿನಂತೆ ಜೊತೆಯಲ್ಲಿಯೇ ಬಂದಿರುತ್ತದೆ. ಸುಖವನ್ನು ಅರಸುವುದನ್ನು ಮನುಷ್ಯ ಬಿಡಲಿಲ್ಲ; ದುಃಖವನ್ನು ಅನುಭವಿಸುವುದನ್ನು ತಪ್ಪಿಸಿಕೊಳ್ಳಲಿಲ್ಲ. 'ಸುಖದುಃಖೇ ಸಮೇ ಕೃತ್ವಾ', 'ಸಮದುಃಖಸುಖಃ ಸ್ವಸ್ಥಃ' ಎಂದ, ಶ್ರೀಕೃಷ್ಣ. ಇದರ ರಹಸ್ಯವೇನು ? ಇದನ್ನು ಸಮನಾಗಿ ಮಾಡಿಕೊಳ್ಳುವುದು ಹೇಗೆ ?

ಅಹಂಕಾರ ಮಮಕಾರಗಳನ್ನು ತ್ಯಜಿಸುವುದು ನಮ್ಮಂಥವರಿಗೆ ಸಾಧ್ಯವಲ್ಲದ್ದು. ಜಗತ್ತಿನ ವ್ಯವಹಾರವೆಲ್ಲ ಇವುಗಳಿಂದ ನಡೆಯುತ್ತದೆ. ಇವೇ ಮನುಷ್ಯನ ಸಕಲ ಕಾರ್ಯಗಳಿಗೂ, ಉತ್ಸಾಹ ಸ್ಫೂರ್ತಿಗಳಿಗೂ ಮೂಲ. ತ್ಯಜಿಸಬೇಕಾದ್ದು ಅಹಂಕಾರ ಮಮಕಾರಗಳನ್ನಲ್ಲ, ಕಾಮಲೋಭಾದಿ ದುರ್ಗುಣಗಳನ್ನು.

ಬೆಂಕಿಗೆ ಕೆಟ್ಟವಸ್ತುವನ್ನು ಸುರಿದರೆ ಕೆಟ್ಟ ನಾತ ಹರಡುತ್ತದೆ; ಶ್ರೀಗಂಧವನ್ನು ಹಾಕಿದರೆ ಸುಗಂಧ ಹರಡುತ್ತದೆ. ಹಾಗೆ ಈ ಅಹಂಕಾರ ಮಮಕಾರಗಳು ಬೆಂಕಿ ಇದ್ದಂತೆ. ಅವಕ್ಕೆ ರಜೋಗುಣ, ತಮೋಗುಣಗಳನ್ನು ಸೇರಿಸಿದಾಗ ಕಾಮಲೋಭಾದಿಗಳು ಚಿಮ್ಮುತ್ತವೆ. ಸತ್ತ್ವಗುಣವನ್ನು ಸೇರಿಸಿದರೆ ಸತ್ಯ, ದಯೆ, ಲೋಕೋಪಕಾರ ಬುದ್ಧಿ — ಮುಂತಾದ ಸದ್ಗುಣಗಳ ಸುಗಂಧ ಹರಡುತ್ತದೆ. ಕಾಲಿಗೆ ಚುಚ್ಚುವುದೆಂದು ರಸ್ತೆಯಲ್ಲಿರುವ ಕಲ್ಲು ಮುಳ್ಳುಗಳನ್ನೆಲ್ಲ ತೆಗೆದೆಸೆಯುತ್ತ ಸಾಗುವುದು ನಮ್ಮಿಂದಾಗದು. ಹಾಗಾದರೆ ರಸ್ತೆಯಲ್ಲಿ ನಡೆಯುವುದು ಹೇಗೆ ? ಬುದ್ಧಿಶಾಲಿ ಕಾಲಿಗೆ ಚಪ್ಪಲಿ ಹಾಕಿಕೊಳ್ಳುತ್ತಾನೆ. ದಾರಿಯೆಲ್ಲ ಅವನಿಗೆ ಸಮನಾಗಿಯೇ ಇರುತ್ತದೆ.

ಹಾಗೆ ವಿವೇಕಿಯಾದವನು ತನ್ನ ಅಹಂಕಾರ ಮಮಕಾರಗಳಿಗೆ ಸತ್ತ್ವಗುಣದ ಹೊದಿಕೆಯನ್ನು ತೊಡಿಸುತ್ತಾನೆ.

ದಾನೇ ತಪಸಿ ಸತ್ಯೇ ವಾ ಯಸ್ಯ ನೋಚ್ಚರಿತಂ ಯಶಃ |
ವಿದ್ಯಾಯಾಮರ್ಥಲಾಭೇ ವಾ ಮಾತುರುಚ್ಚಾರ ಏವ ಸಃ || || ೯ ||

– ಮಹಾಭಾರತ

"ದಾನ, ತಪಸ್ಸು, ಸತ್ಯ, ವಿದ್ಯೆ, ಧನಾರ್ಜನೆ – ಇವುಗಳಲ್ಲಿ ಯಾವುದಾದರೊಂದರಲ್ಲಾದರೂ ಯಾವಾತನ ಕೀರ್ತಿ ಹರಡಿಲ್ಲವೋ ಆತನು ತಾಯಿಯ ಮಲವೇ ಸರಿ."

ಮನುಷ್ಯನ ಜೀವನಕ್ಕೆ ಒಂದು ಉದ್ದೇಶ, ಗುರಿ ಬೇಕು : ಬಾಳಿಗೊಂದು ನಂಬಿಕೆ. ಈ ನಂಬಿಕೆಯೇ ಇತರ ಪ್ರಾಣಿಗಳಿಗಿಂತ ಮನುಷ್ಯನಲ್ಲಿರುವ ಹೆಚ್ಚುಗಾರಿಕೆ. ಜೀವನದುದ್ದಕ್ಕೂ ಒಂದಾನೊಂದು ನಂಬಿಕೆಯನ್ನು ಗಟ್ಟಿಯಾಗಿ ಹಿಡಿದು ಸಾಧನೆಯಲ್ಲಿ ತೊಡಗುವುದು ಮನುಷ್ಯಲಕ್ಷಣ.

ನಂಬಿಕೆಯನ್ನು ಶ್ರದ್ಧೆಯೆಂದು ವ್ಯವಹರಿಸುತ್ತಿದೆ ವೇದವಾಣಿ. 'ಶ್ರದ್ಧಯಾ ಹಿ ಪುರುಷಃ.' ಶ್ರದ್ಧೆಯಿಂದಲೇ ಮನುಷ್ಯನೆನಿಸಿಕೊಳ್ಳುತ್ತಾನೆ. ಶ್ರದ್ಧೆಯನ್ನು ಇಡಬೇಕಾದ ವಿಷಯ ಮುಖ್ಯವಾಗಿ ನಾಲ್ಕು ಎನ್ನುತ್ತದೆ ಮೇಲ್ಕಂಡ ನೀತಿಶ್ಲೋಕ. ಮೊದಲನೆಯದು ದಾನ. 'ಒಬ್ಬನಲ್ಲಿ ಧನಸಂಚಯ ಉಳಿಯಬಾರದು. ಅದು ಬಡವರಲ್ಲಿ ಹಂಚಿಹೋಗುತ್ತಿರಬೇಕು' ಎಂಬುದು ದಾನದ ಉದ್ದೇಶ. ಇದಕ್ಕಾಗಿಯೇ ನಮ್ಮ ಹಿಂದಿನ ಗ್ರಂಥಗಳಲ್ಲಿ ದಾನದ ಪ್ರಶಂಸೆ ಅಧಿಕ. 'ಶ್ರದ್ಧಯಾ ದೇಯಂ, ಅಶ್ರದ್ಧಯಾ ಅದೇಯಂ' ಎನ್ನುತ್ತದೆ ಉಪನಿಷತ್ತು. ಉಳ್ಳವನು ಕೊಡಬಹುದು. ಕೊಡಲು ಏನೂ ಇಲ್ಲದಿದ್ದರೆ? ತಪಸ್ಸು ಮಾಡು. ತಪಸ್ಸಿನಿಂದ ಲೋಕಕಲ್ಯಾಣವನ್ನು ಸಾಧಿಸು. ಇಲ್ಲವೇ ಸತ್ಯಾನ್ವೇಷಣೆ ಬಾಳಿನ ಧ್ಯೇಯವಾಗಿರಲಿ. ಸತ್ಯಕ್ಕಾಗಿ ಹೋರಾಡು.

ದಾನ, ತಪಸ್ಸು, ಸತ್ಯ – ಇವು ಮೂರೂ ತ್ಯಾಗಬುದ್ಧಿಯನ್ನು ಅಪೇಕ್ಷಿಸುತ್ತವೆ. ದಾನದಲ್ಲಿ ಧನತ್ಯಾಗ, ತಪಃಸತ್ಯಗಳಲ್ಲಿ ಸುಖತ್ಯಾಗ. ಯಾರಿಗೆ ತ್ಯಾಗಬುದ್ಧಿಯಿಲ್ಲವೋ ಅವರಿಗೆ ಆರ್ಜನಾಬುದ್ಧಿ ಇರಲಿ. ಯಾವುದರಲ್ಲಿ ? ವಿದ್ಯೆಯಲ್ಲಿ, ಧನದಲ್ಲಿ. ವಿದ್ಯಾರ್ಜನೆ ಬಾಳಿನ ಧ್ಯೇಯವಾಗಿರಬೇಕು. ಯಾವುದಾದರೊಂದು ವಿದ್ಯೆಯಲ್ಲಿ ಉತ್ತುಂಗ ಶಿಖರವನ್ನಡರು

ವುದು ಗುರಿಯಾಗಿರಬೇಕು. ಹಾಗೆ ಸಂಪಾದಿಸಿದ ವಿದ್ಯೆ ಒಂದಲ್ಲ ಒಂದು ಬಗೆಯಲ್ಲಿ ರಾಷ್ಟ್ರದ ಹಿತಕ್ಕೇ ವಿನಿಯೋಗವಾಗುತ್ತದೆ. ಯಾರಿಗೆ ವಿದ್ಯೆಯ ಗಳಿಕೆ ಸಾಧ್ಯವಿಲ್ಲವೋ ಅವರು ಧನಸಂಪಾದನೆಯಲ್ಲಿ ತೊಡಗಲಿ. ಅದು ಧರ್ಮಮಾರ್ಗದಿಂದ ನಡೆಯತಕ್ಕದ್ದು. ಅದರಲ್ಲಿ ಸ್ವಾರ್ಥವಿದ್ದರೂ ಕೈಗಾರಿಕೆಗಳೂ ವಾಣಿಜ್ಯವೂ ವೃದ್ಧಿಹೊಂದಿ ದೇಶದ ಸಂಪತ್ತು ಬೆಳೆಯುತ್ತದೆ. ಹಲವರಿಗೆ ಉದ್ಯೋಗಾವಕಾಶ ದೊರೆಯುತ್ತದೆ. ಹೀಗೆ ವಿದ್ಯಾರ್ಜನೆಯಾಗಲಿ ಧನಸಂಗ್ರಹವಾಗಲಿ ಪ್ರಕಾರಾಂತರದಿಂದ ತ್ಯಾಗದಲ್ಲಿಯೇ ಪರ್ಯವಸಾನ ಗೊಳ್ಳಬೇಕು. ಇದು ನಮ್ಮ ಹಿರಿಯರು ತೋರಿಸಿಕೊಟ್ಟಿರುವ ದಾರಿ. ಈ ಧ್ಯೇಯಕ್ಕಾಗಿ ಯಾವನು ಶ್ರದ್ಧೆಯಿಂದ ಆತ್ಮಾರ್ಪಣೆ ಮಾಡಿಕೊಳ್ಳುವು ದಿಲ್ಲವೋ ಅವನು ತಾಯಿಗೆ ಮಗನಲ್ಲ, ಅವನು ತಾಯಿಯ ಮಲ.

ಶ್ರೂಯತಾಂ ಧರ್ಮಸರ್ವಸ್ವಂ ಶ್ರುತ್ವಾ ಚೈವಾವಧಾರ್ಯತಾಮ್ ।
ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ॥ ॥ ೧೦ ॥

— ಪಂಚತಂತ್ರ

"ಧರ್ಮದ ಸರ್ವಸ್ವವು, ಜೀವಾಳವು ಯಾವುದೆಂಬುದನ್ನು ಕೇಳಿರಿ. ಕೇಳಿ ನೆನಪಿನಲ್ಲಿಟ್ಟುಕೊಳ್ಳಿರಿ. ತನಗೆ ಯಾವುದು ಪ್ರತಿಕೂಲವೆನಿಸು ವುದೋ ಅದನ್ನು ಇತರರ ವಿಷಯದಲ್ಲಿ ಆಚರಿಸಬಾರದು."

ಧರ್ಮ ಇಬ್ಬಗೆಯಾದದ್ದು. ಒಂದು ವಿಧಿರೂಪ; ಇನ್ನೊಂದು ನಿಷೇಧ ರೂಪ. ಹಸಿದು ಬಂದವರಿಗೆ ಅಶನವೀಯಲುಬೇಕು, ದಯೆಯೇ ಧರ್ಮದ ಮೂಲವಯ್ಯ, ಸತ್ಯವನ್ನೇ ನುಡಿಯಬೇಕು – ಇವು ವಿಧಿರೂಪ. ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ – ಇವು ನಿಷೇಧರೂಪ. ತನಗೆ ಪ್ರತಿಕೂಲವಾದ್ದನ್ನು ಇನ್ನೊಬ್ಬರಿಗೆ ಮಾಡಬಾರದು. ಎಂದರೆ ತನಗೆ ಹಿತವಾದ್ದನ್ನು ಇನ್ನೊಬ್ಬರಿಗೂ ಮಾಡಬೇಕು ಎಂಬ ಅರ್ಥ ಸೇರಿಕೊಳ್ಳುತ್ತದೆ. ಈ ವಿಧಿ–ನಿಷೇಧಗಳು ಒಂದೇ ನಾಣ್ಯದ ಎರಡು ಮುಖಗಳು. ತನ್ನಂತೆ ಪರರು ಎಂದು ಬಗೆಯುವುದೇ ನೀತಿಯ ತಿರುಳು. ಸರ್ವಸಮತೆ, ಸೋದರ

ಭಾವ, ವಸುಧೈವ ಕುಟುಂಬಕಂ – ಎಂಬುದರ ಮೂಲತತ್ತ್ವ ಇದೇ. ಮರ್ಯಾದೆಯನ್ನು ಕೊಟ್ಟು ಮರ್ಯಾದೆಯನ್ನು ತೆಗೆದುಕೊ ಎನ್ನುವುದುಂಟು. ಎಲ್ಲರೂ ನಮ್ಮನ್ನು ಗೌರವದಿಂದ ಕಾಣಬೇಕೆಂದು ಬಯಸುತ್ತೇವೆ, ಇನ್ನೊಬ್ಬರ ವಿಷಯವಾಗಿ ಮರೆಯುತ್ತೇವೆ. ನಮ್ಮ ಕಷ್ಟದಲ್ಲಿ ಅನ್ಯರ ಸಹಾನುಭೂತಿಯನ್ನು ಕೋರುತ್ತೇವೆ, ಇನ್ನೊಬ್ಬರ ಕಷ್ಟದಲ್ಲಿ ಅದನ್ನು ದೂರವಿರಿಸುತ್ತೇವೆ. ನೆರೆಮನೆಯವರು ರೇಡಿಯೋವನ್ನು ದೊಡ್ಡದಾಗಿ ಕೂಗಿಸಿದಾಗ ನಮಗೆ ತೊಂದರೆಯೆನ್ನುತ್ತೇವೆ. ನಮ್ಮ ರೇಡಿಯೋ ಕೂಗಾಟ ದೊಡ್ಡದಾದಾಗ ಅದು ಮರೆತುಹೋಗುತ್ತದೆ.

ಅಶೋಕವನದಲ್ಲಿ ರಾವಣನು ಸೀತೆಯನ್ನು ಕಾಡಿಸುವಾಗ ಪರಸ್ತ್ರೀಹರಣ ರಾಕ್ಷಸರಿಗೆ 'ಸ್ವಧರ್ಮ' ಎನ್ನುತ್ತಾನೆ. ಅದಕ್ಕೆ ಸೀತೆ ರಾವಣನ ಕೆನ್ನೆಗೆ ಹೊಡೆದಂತೆ –

ಯಥಾ ತವ ತಥಾಽನ್ಯೇಷಾಂ ದಾರಾ ರಕ್ಷ್ಯಾ ನಿಶಾಚರ |
ಸ್ವಾತ್ಮಾನಮುಪಮಾಂ ಕೃತ್ವಾ ಸ್ವೇಷು ದಾರೇಷು ರಮ್ಯತಾಮ್ ||

– ಎಂದು ಉತ್ತರಿಸುತ್ತಾಳೆ. "ನಿನ್ನ ಮಡದಿಯನ್ನು ಹೇಗೋ ಹಾಗೆ ಅನ್ಯರ ಮಡದಿಯರನ್ನೂ ಮಾನಭಂಗವಾಗದಂತೆ ರಕ್ಷಿಸಬೇಕು. ನಿನ್ನಂತೆ ಅನ್ಯರು ಎಂದು ತಿಳಿದು ನಿನ್ನ ಪತ್ನಿಯರಲ್ಲಿ ಸಂತುಷ್ಟನಾಗು."

ಪರಸ್ತ್ರೀಹರಣ ರಾವಣನಿಗೆ ಸ್ವಧರ್ಮವಂತೆ. ಅವನ ಹೆಂಡತಿ ಮಂಡೋದರಿಯನ್ನು ಇನ್ನೊಬ್ಬ ರಾಕ್ಷಸ ಅಪಹರಿಸಿದ್ದರೆ ? ಅದು ಅವನಿಗೆ ಸ್ವಧರ್ಮ ಎಂದು ಸುಮ್ಮನಾಗುತ್ತಿದ್ದನೇನೋ !

ಹತಂ ಜ್ಞಾನಂ ಕ್ರಿಯಾಶೂನ್ಯಂ ಹತಾ ಚಾಜ್ಞಾನಿನಃ ಕ್ರಿಯಾ |
ಧಾವನ್ನಪ್ಯಂಧಕೋ ನಷ್ಟಃ ಪಶ್ಯನ್ನಪಿ ಚ ಪಂಗುಕಃ || || ೧೧

– ಯಶಸ್ತಿಲಕಚಂಪೂ

"ಕ್ರಿಯೆಯಿಲ್ಲದ ತಿಳಿವು ನಷ್ಟವಾದಂತೆ ವ್ಯರ್ಥ. ತಿಳಿವಿಲ್ಲದವನ ಕ್ರಿಯೆಯೂ ವ್ಯರ್ಥವೇ. ಕುರುಡನು ಓಡಿದರೂ ನಷ್ಟನಾಗುತ್ತಾನೆ. ಕುಂಟನು ನೋಡುತ್ತಿದ್ದರೂ ಫಲವಿಲ್ಲದೆ ನಷ್ಟನಾಗುತ್ತಾನೆ."

ಸೂರ್ಯನು ಹುಟ್ಟಿದಾಗ ಜನರು ಕೆಲಸದಲ್ಲಿ ತೊಡಗುತ್ತಾರೆ. ಸೂರ್ಯನ ಬೆಳಕು ಕೆಲಸಕ್ಕೆ ಪ್ರೇರಕ. ಬೆಳಕಿನ ಉದ್ದೇಶವೂ ಬೆಳಕಿನ ಫಲವೂ ಕ್ರಿಯೆಯೇ. ರಾತ್ರಿ ಕೋಣೆಯಲ್ಲಿ ದೀಪ ಉರಿಯುವಾಗ ಓದುವ, ಬರೆಯುವ ಮತ್ತಿತರ ಕೆಲಸಗಳು ಜರುಗುತ್ತವೆ. ಯಾವ ಕೆಲಸವೂ ನಡೆಯದಿದ್ದಾಗ ಕೋಣೆಯ ದೀಪ ವ್ಯರ್ಥ. ಅದನ್ನು ಆರಿಸಬೇಕು. ಬೆಳಕಿಲ್ಲದೆ ಬರೆಯುವುದು ಅಸಾಧ್ಯ. ಒಂದು ವೇಳೆ ಸಾಧ್ಯವಾದರೂ ನಿಷ್ಫಲ, ಅನರ್ಥಕಾರಿಯೂ ಆದೀತು.

ವಿವೇಕಪೂರ್ಣವಾದ ಜ್ಞಾನ ಬಾಳಿನ ಬೆಳಕು. ದೀಪದ ಬೆಳಕು ಬಹಿರಂಗಕ್ಕೆ, ಜ್ಞಾನದ ಬೆಳಕು ಅಂತರಂಗಕ್ಕೆ. ಅಂತರಂಗದ ಬೆಳಕಿಲ್ಲದವನಿಗೆ ಬಹಿರಂಗದ ಬೆಳಕು ಏನೂ ಮಾಡಲಾರದು. ಅದು ಅವನ ಪಾಲಿಗೆ ಕತ್ತೆಗೆ ಕತ್ತುರಿ ಇದ್ದಂತೆ. ಕುರುಡನಿಗೆ ಕನ್ನಡಿ ಇದ್ದಂತೆ, ಕಿವುಡನಿಗೆ ಸಂಗೀತವಿದ್ದಂತೆ. ಅಜ್ಞಾನಿ ಕಣ್ಣಿದ್ದರೂ ಕುರುಡ, ಕಾಲಿದ್ದರೂ ಹೆಳವ.

ಕಾಳ್ಗಿಚ್ಚು ಆವರಿಸಿದಾಗ ಕುರುಡ ಓಡಿದರೂ ಅಪಾಯದಿಂದ ತಪ್ಪಿಸಿಕೊಳ್ಳಲಾರ. ಓಡಿದರೆ ಬಿದ್ದು ಹಲ್ಲು ಮುರಿದುಕೊಳ್ಳುತ್ತಾನೆ, ಇಲ್ಲವೆ ಕಿಚ್ಚಿಗೆ ಅಭಿಮುಖವಾಗಿ ಓಡಿ ಸುಟ್ಟುಹೋಗುತ್ತಾನೆ. ಕುಂಟನು ಕಿಚ್ಚನ್ನು ಕಂಡರೂ ಓಡಲಾರದೆ ಬೆಂಕಿಗೆ ಬಲಿಯಾಗುತ್ತಾನೆ.

ರಾಜಕೀಯದಲ್ಲಿ ಪ್ರಜೆಗಳ ಪರಿಸ್ಥಿತಿಯೂ ಇಂತಹುದೇ. ನಮ್ಮಲ್ಲಿ ಜ್ಞಾನಿಗಳಿದ್ದಾರೆ, ವಿವೇಕಿಗಳಿದ್ದಾರೆ. ಅವರಲ್ಲಿ ಬಹುಮಂದಿ ಜನರಿಗೆ ತಿಳಿವಳಿಕೆ ನೀಡಿ ಮಾರ್ಗದರ್ಶನ ಮಾಡಲು ಮುಂದೆ ಬರುವುದಿಲ್ಲ. ನಿಷ್ಕ್ರಿಯವಾದ ಅವರ ಜ್ಞಾನ ಪಾಠ ಹೇಳದ ಉಪಾಧ್ಯಾಯನ ವಿದ್ಯೆಯಿದ್ದಂತೆ; ಯಾರಿಗೂ ಉಪಯೋಗವಾಗದ ಕುಂಟೆಯ ನೀರಿನಂತೆ, ಕಾಡಿನಲ್ಲಿ ತಾನಾಗಿ ಉದುರಿಹೋಗುವ ಹೂವಿನಂತೆ, ಹಣ್ಣಿನಂತೆ. ಅವರ ಮೌನ ಹೆಳವನ ನೋಟವಿದ್ದಂತೆ ವ್ಯರ್ಥ. ಮತಗಟ್ಟೆಗೆ ಹೋಗಿ ಮತನೀಡದ ಅವರ ಜ್ಞಾನ ಕ್ರಿಯಾಶೂನ್ಯ. ಹಾಗೆಯೇ ಅಜ್ಞಾನಿಗಳ ಆರ್ಭಟಸಹಿತವಾದ ಕ್ರಿಯೆ ಕುರುಡನ ಓಟವಿದ್ದಂತೆ ಅನರ್ಥಕಾರಿ. ಆದರೆ ಕಾಳ್ಗಿಚ್ಚಿನ ಉರಿ ಇಬ್ಬರಿಗೂ ಸಮಾನ. ಕ್ರಿಯಾಶೀಲನಾದ ಕುರುಡನಂತೆ ನಿಷ್ಕ್ರಿಯನಾದ ಕುಂಟನೂ ಉರಿಯ ಝಳದಿಂದ ತಪ್ಪಿಸಿಕೊಳ್ಳಲಾರ.

**ಪ್ರಿಯವಾಕ್ಯಪ್ರದಾನೇನ ಸರ್ವೇ ತುಷ್ಯಂತಿ ಜಂತವಃ |**
**ತಸ್ಮಾತ್ತದೇವ ವಕ್ತವ್ಯಂ ವಚನೇ ಕಾ ದರಿದ್ರತಾ || || ೧೨ ||**

— ಸುಭಾಷಿತರತ್ನಭಾಂಡಾಗಾರ

"ಪ್ರಿಯವಾದ ಮಾತನ್ನಾಡುವುದರಿಂದ ಎಲ್ಲರೂ ಸಂತೋಷ ಪಡುತ್ತಾರೆ. ಆದ್ದರಿಂದ ಪ್ರಿಯವಾದ ಮಾತನ್ನೇ ನುಡಿಯಬೇಕು. ಮಾತಿಗೆ ಬಡತನವಾದರೂ ಏನು ?"

ವಾಲ್ಮೀಕಿಮುನಿಗಳು ಶ್ರೀರಾಮನನ್ನು "ಮೃದುವಾಗಿ ಮಾತಾಡತಕ್ಕವನು. ಪ್ರಿಯಂವದಃ – ನಗುನಗುತ್ತ ಮಾತಾಡುತ್ತಾನೆ, ಪರುಷವಾದ ಮಾತನ್ನಾಡುವುದೇ ಇಲ್ಲ" ಎಂದು ವರ್ಣಿಸುತ್ತಾರೆ. ಪಂಪಾತೀರದಲ್ಲಾದ ಪ್ರಥಮ ಸಂದರ್ಶನದಲ್ಲಿ ಹನುಮಂತನ ಮಾತನ್ನು ಕೇಳಿದ ಶ್ರೀರಾಮನು ಲಕ್ಷ್ಮಣನೊಡನೆ "ಲಕ್ಷ್ಮಣ, ಈತನು ಎಷ್ಟು ಮಧುರವಾಗಿ ಮಾತಾಡುತ್ತಾನೆ! ಮಾತಿನ ಶೈಲಿ ಚೇತೋಹಾರಿಯಾಗಿದೆ. ಇಂತಹ ವಾಣಿ ಯಾರನ್ನು ಆನಂದಗೊಳಿಸದು ? ಕತ್ತಿಯನ್ನು ಹಿರಿದ ಶತ್ರುವಿನ ಚಿತ್ತವನ್ನು ಸಹ ಇಂತಹ ಮಾತು ಪ್ರಸನ್ನಗೊಳಿಸುವುದು" – ಎಂದು ಪ್ರಶಂಸೆ ಮಾಡುತ್ತಾನೆ. ಅತಿಥಿಯು ಮನೆಗೆ ಬಂದಾಗ ಅವನನ್ನು ಉಪಚರಿಸಲು ಎಂತಹ ಬಡವನಿಗೂ 'ಸೂನೃತಾ ವಾಕ್' – ಪ್ರಿಯವೂ ಹಿತವೂ ಆದ ಮಾತಿಗೆ ಕೊರತೆ ಇರುವುದಿಲ್ಲವೆಂದು ಆಪಸ್ತಂಬರು ಹೇಳಿದ್ದಾರೆ.

ಮಾತಾಡುವ ಶಕ್ತಿ ಮನುಷ್ಯರಿಗೆ ದೇವರು ಕೊಟ್ಟಿರುವ ಸರ್ವಶ್ರೇಷ್ಠವಾದ ವರ. ಬಡವ–ಬಲ್ಲಿದ ಎಂಬ ಭೇದವಿಲ್ಲದೆ ಎಲ್ಲರಿಗೂ ಅದನ್ನು ಸಮವಾಗಿ ಹಂಚಿದ್ದಾನೆ. "ಮಹಾದೇವೋ ಮರ್ತ್ಯಾನ್ ಆವಿವೇಶ – ಮಹಾದೇವನು ಮಾತಿನ ರೂಪದಿಂದ ಮನುಷ್ಯರಲ್ಲಿ ಆವಿಷ್ಟನಾದನು" ಎನ್ನುತ್ತದೆ ವೇದ. 'ಮಾತು ಎಂಬುದು ಕಾಮಧೇನು; ಅದನ್ನು ಶ್ರದ್ಧೆಯಿಂದ ಸೇವಿಸಬೇಕು', 'ವಾಚಂ ಧೇನುಮುಪಾಸೀತ' ಎಂಬುದು ವೇದವಾಣಿ. ಸಕಲೈಶ್ವರ್ಯಗಳೂ ತೊಡೆದುಹೋಗಬಹುದು. ಬಂಧುಮಿತ್ರರು ಅಗಲಬಹುದು. ಗೆಳತಿಯಾದ ವಾಣಿ ಕಡೆಯವರೆಗೂ ಮನುಷ್ಯನನ್ನು ಅಗಲುವುದಿಲ್ಲ.

ವಾಕ್‌ಶಕ್ತಿ ವಿದ್ಯುಚ್ಛಕ್ತಿ ಇದ್ದಂತೆ. ಉಪಾಯವಾಗಿ ಕ್ರಮವರಿತು ಬಳಸಿದರೆ ದೊಡ್ಡ ಉಪಕಾರಿ. ಕ್ರಮತಪ್ಪಿದರೆ ಅದಕ್ಕಿಂತ ಅಪಕಾರ ಇನ್ನೊಂದಿಲ್ಲ. ಮಾತು ತೀಕ್ಷ್ಣವಾದರೆ ಕತ್ತಿಗಿಂತ ಕ್ರೂರ. ಕತ್ತಿಯಿಂದಾದ ಗಾಯ ಮಾಯುತ್ತದೆ. ಮಾತಿನಿಂದಾದ ಗಾಯ ಮಾಯದು. ಮಾತಿನಿಂದ ಮಿತ್ರನು ಶತ್ರುವಾಗುತ್ತಾನೆ, ಶತ್ರು ಮಿತ್ರನಾಗುತ್ತಾನೆ. ಒಳ್ಳೆಯ ಮಾತಾಡಲು ನಾವು ಖರ್ಚುಮಾಡಬೇಕಾದ್ದೇನೂ ಇಲ್ಲ. ಅದರಿಂದಾಗುವ ಲಾಭ ಮಾತ್ರ ಅಪರಿಮಿತ.

''ಮಾತು ಆಡಿದರೆ ಹೋಯಿತು, ಮುತ್ತು ಒಡೆದರೆ ಹೋಯಿತು.'' ''ಮಾತಾಡಿದರೆ ಮುತ್ತು ಸುರಿದಂತಿರಬೇಕು.'' ''ಮಾತು ಬಲ್ಲವಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ.'' ''ಮಾತಿನಿಂದಲೆ ಸ್ವರ್ಗ, ಮಾತಿನಿಂದಲೆ ನರಕ.'' ''ಬಾಯಿ ಇದ್ದರೆ ತಾಯಿ ಇದ್ದಂತೆ.''

**ಪ್ರಭೂತವಯಸಃ ಪುಂಸೋ ಧಿಯಃ ಪಾಕಃ ಪ್ರವರ್ತತೇ |**
**ಜೀರ್ಣಸ್ಯ ಚಂದನತರೋರಾಮೋದ ಉಪಜಾಯತೇ || || ೧೩ ||**

**— ದೃಷ್ಟಾಂತಕಲಿಕಾ**

''ಮನುಷ್ಯನಿಗೆ ಹೆಚ್ಚು ವಯಸ್ಸಾದಾಗ ಅವನ ಬುದ್ಧಿಗೆ ಒಂದು ಪರಿಪಾಕ ಉಂಟಾಗುತ್ತದೆ. ಶ್ರೀಗಂಧದ ಮರವು ಹಳೆಯದಾದಾಗ ಅದರಲ್ಲಿ ಒಳ್ಳೆಯ ಪರಿಮಳ ಉಂಟಾಗುತ್ತದೆ.''

ವಯಸ್ಸಾದ ಹಿರಿಯರಿಗೆ ಮರ್ಯಾದೆಯನ್ನು ಕೊಡುವ ಪದ್ಧತಿ ಪ್ರಾಯಶಃ ಎಲ್ಲ ದೇಶಗಳಲ್ಲಿಯೂ ರೂಢಿಯಲ್ಲಿದೆ. ವಯಸ್ಸು ಲೋಕಾನುಭವಗಳಿಂದ ಒಂದು ಹೆಚ್ಚುಗಾರಿಕೆಯನ್ನು ಪಡೆದು ಬುದ್ಧಿಗೆ ಒಂದು ಪರಿಪಕ್ವದಶೆಯನ್ನು ಉಂಟುಮಾಡುವುದೆಂದೂ, ಹಿರಿಯರ ತೀರ್ಮಾನದಲ್ಲಿ ತೂಕ-ಹಿಡಿತಗಳಿರುವುವೆಂದೂ ಅವರು ದುಡುಕುವುದಿಲ್ಲವೆಂದೂ ಸಮಾಜ ನಂಬಿದೆ. ಜಾತಿ, ವಿದ್ಯೆ, ವಿತ್ತ, ಅಧಿಕಾರ, ಬಂಧುತ್ವಗಳಿಗಿಂತ ವಯಸ್ಸು

ಹೆಚ್ಚು ಮಾನ್ಯವೆಂದು ಬೋಧಾಯನ ಧರ್ಮಸೂತ್ರ ಹೇಳುತ್ತದೆ. ಪುಸ್ತಕವಿದ್ಯೆಗಿಂತ ಲೋಕಾನುಭವವೇ ಹೆಚ್ಚಿನದು. ''ವೃದ್ಧನು ಬಂದಾಗ ಯುವಕನು ಎದ್ದುನಿಂತು ಗೌರವಿಸದಿದ್ದರೆ ಯುವಕನ ತೇಜಸ್ಸು ಮಲಿನವಾಗುವುದು'' ಎನ್ನುತ್ತಾನೆ ಮನು. ವೃದ್ಧರಿಲ್ಲದ ಸಭೆ ಸಭೆಯೇ ಅಲ್ಲವೆನ್ನುತ್ತದೆ ಭಾರತ.

ಕರ್ಣನಿಂದ ಪೆಟ್ಟುತಿಂದ ಧರ್ಮರಾಯ ನೊಂದು ಅರ್ಜುನನನ್ನು ಹಂಗಿಸುತ್ತಾನೆ. ಅವನ ಗಾಂಡೀವಧನುಸ್ಸು ವ್ಯರ್ಥವೆಂದು ಹೀಯಾಳಿಸುತ್ತಾನೆ. ಅರ್ಜುನನು ಕೋಪದಿಂದ ಧರ್ಮರಾಯನನ್ನು ಕೊಲ್ಲಲು ಕತ್ತಿಹಿರಿಯುತ್ತಾನೆ. ಶ್ರೀಕೃಷ್ಣನು ಅವನನ್ನು ತಡೆದು ''ಅರ್ಜುನ, ನಿನಗೆ ಧರ್ಮದ ತತ್ತ್ವ ಗೊತ್ತಿಲ್ಲ. 'ನ ವೃದ್ಧಾಃ ಸೇವಿತಾಸ್ತ್ವಯಾ'–ಹಿರಿಯರನ್ನು ನೀನು ಸೇವಿಸಿಲ್ಲ'' ಎಂದು ಬುದ್ಧಿವಾದ ಹೇಳುತ್ತಾನೆ. ರಾಷ್ಟ್ರಾಧ್ಯಕ್ಷತೆಯೇ ಮೊದಲಾದ ಕೆಲವು ದೊಡ್ಡ ಸ್ಥಾನಗಳಿಗೆ ಸಂವಿಧಾನಗಳು ವಯೋಮಿತಿಯನ್ನು ಗೊತ್ತು ಮಾಡಿರುತ್ತವೆ. ಇತರ ಎಲ್ಲ ಅರ್ಹತೆಗಳಿದ್ದರೂ ವಯಸ್ಸಿನ ಒಂದು ಹೆಚ್ಚುಗಾರಿಕೆಯನ್ನೂ ಸಂವಿಧಾನಕರ್ತರು ಕಂಡುಕೊಂಡಿದ್ದಾರೆ. ಲೋಕಾನುಭವದಿಂದ ರೂಪಗೊಂಡ ಈ ವಯೋಮಿತಿಯ ತತ್ತ್ವ ಲೋಕ ಸೇವಕರೆನಿಸಿದ ಎಲ್ಲ ಮಂತ್ರಿಗಳಿಗೂ ಶಾಸಕರಿಗೂ ಮತ್ತು ಮತದಾರರಿಗೂ ಅನ್ವಯಿಸಬೇಕಾದದ್ದು. ಈಗ ಮತದಾರರ ವಯಸ್ಸನ್ನು ಇನ್ನೂ ಕಿರಿದುಗೊಳಿಸುವ ಪ್ರಯತ್ನ ನಡೆದಿದೆ. ಇದರ ದುಷ್ಫಲ ಮುಂದೆ ಕಂಡೀತು.

ಉಟ್ಠಾನಕಾಲಮ್ಹಿ ಅನುಟ್ಠಹಾನೋ
ಯುವಾ ಬಲೀ ಆಲಸಿಯಂ ಉಪೇತೋ |
ಸಂಸನ್ನಸಂಕಪ್ಪಮನೋ ಕುಸೀತೋ
ಪಞ್ಞಾ ಯ ಮಗ್ಗಂ ಅಲಸೋ ನ ವಿಂದತಿ || || ೧೪ ||

– ಧರ್ಮಪದ, ೨೦-೮

(ಉಟ್ಠಾನಕಾಲಮ್ಹಿ = ಉತ್ಥಾನಕಾಲೇ. ಪಞ್ಞಾಯ ಮಗ್ಗಂ = ಪ್ರಜ್ಞಾಯಾಃ ಮಾರ್ಗಂ)

"ಯಾವನು ಬಲಿಷ್ಠನಾದ ಯುವಕನಾಗಿದ್ದರೂ ಉತ್ಥಾನಕಾಲದಲ್ಲಿ ಮೇಲೇಳದೆ ಮೈಗಳ್ಳನಾಗಿರುತ್ತಾನೋ ಅವನ ಸಂಕಲ್ಪ, ಮನಸ್ಸು ಗಳೆರಡೂ ಕುಸಿದುಹೋಗಿರುವುದರಿಂದ 'ಕುಸೀದ'ನೆನಿಸುತ್ತಾನೆ. ಅವನು ಹೊಣೆಗೇಡಿ; ಪ್ರಮಾದಿ. ಅಂಥ ಆಲಸನು ವಿವೇಕದ ಮಾರ್ಗವನ್ನು ಸೇರುವುದಿಲ್ಲ."

"ಉತ್ತಿಷ್ಠತ, ಜಾಗ್ರತ, ಪ್ರಾಪ್ಯ ವರಾನ್ ನಿಬೋಧತ" ಎಂಬ ಉಪನಿಷದ್ ಘೋಷದ ಪ್ರತಿಧ್ವನಿ ಭಗವಾನ್ ಬುದ್ಧನ ಈ ವಾಣಿಯಲ್ಲಿದೆ. ಉತ್ಥಾನವೆಂದರೆ ಮೇಲೇಳುವುದು, ಕರ್ತವ್ಯನಿರತನಾಗುವುದು, ಪೌರುಷ, ಹೋರಾಟ, ದಕ್ಷತೆ, ಆತ್ಮಶಕ್ತಿ ಎಂದರ್ಥ. ಸತ್ಯ ಧರ್ಮ ಶೀಲಗಳ ರಕ್ಷಣೆಗಾಗಿ, ಅಸತ್ಯ ಅಧರ್ಮ ದುಃಶೀಲಗಳ ಪ್ರತಿಭಟನೆಗಾಗಿ ಸೊಂಟಕಟ್ಟಿ ನಿಲ್ಲಬೇಕಾದ ಕಾಲ ಉತ್ಥಾನಕಾಲ. ವ್ಯಕ್ತಿಜೀವನದಲ್ಲಿ ಮನುಷ್ಯನಿಗೂ ರಾಷ್ಟ್ರಜೀವನದಲ್ಲಿ ಪ್ರಜೆಗಳಿಗೂ ಉತ್ಥಾನಕಾಲ ಬರುತ್ತದೆ. ಅಂಥ ಸಮಯದಲ್ಲಿ ಯಾವನು ಕಣ್ಮುಚ್ಚಿ ಕೂಡುವನೋ ಅವನು ಆತ್ಮಶ್ರೇಯಸ್ಸಿನಿಂದ, ರಾಷ್ಟ್ರಕ್ಕೆ ಸಲ್ಲಿಸಬೇಕಾದ ಹೊಣೆಗಾರಿಕೆಯಿಂದ ವಂಚಿತನಾಗುತ್ತಾನೆ. ಅವನು ಎಚ್ಚೆತ್ತು ಬಂದಾಗ ಕಣ್ಣುಮುಚ್ಚತಕ್ಕವನು; ನೀರು ಹರಿದುಹೋದ ಮೇಲೆ ಅಡ್ಡಗಟ್ಟೆ ಹಾಕತಕ್ಕವನು.

ವಿದ್ಯಾರಣ್ಯರ ವಿಜಯನಗರ ಸ್ಥಾಪನೆ, ಶಿವಾಜಿಯ ಸಾಮ್ರಾಜ್ಯ ನಿರ್ಮಾಣ, ಝಾನ್ಸಿರಾಣಿಯ ಸ್ವಾತಂತ್ರ್ಯಸಮರ, ಮಹಾತ್ಮಾಗಾಂಧಿಯವರ ಚಳವಳಿ – ಇವು ರಾಜಕೀಯ ಉತ್ಥಾನಗಳು. ಬೌದ್ಧರ ಮತ್ತು ವೈದಿಕರ ಧಾರ್ಮಿಕ ಉತ್ಥಾನಗಳನ್ನು ಇತಿಹಾಸ ಗುರುತಿಸಿದೆ. ರಾಜಕೀಯದಲ್ಲಾಗಲಿ, ಧಾರ್ಮಿಕ ಭಾವನೆಯಲ್ಲಾಗಲಿ 'ಅತಿ'ಯನ್ನೂ 'ವಿಪರೀತ'ವನ್ನೂ ಗುರುತಿಸಿ 'ಉತ್ಥಾನ'ಗೊಳ್ಳುವುದು ರಾಷ್ಟ್ರದ ಬದುಕಿನಲ್ಲಿ ಅನಿವಾರ್ಯ. ಅದು ರಾಷ್ಟ್ರೀಯ ಪ್ರಜ್ಞೆಯುಳ್ಳ ಪ್ರತಿಯೊಬ್ಬನ ಕರ್ತವ್ಯ.

'ಕುಸೀದ' ಎಂದರೆ ಬಡ್ಡಿಯಿಂದ ಸಾಗಿಸುವ ಜೀವನ ಎಂದೂ ಅರ್ಥವಿದೆ. ಇನ್ನೊಬ್ಬರ ಪರಿಶ್ರಮದಿಂದ ತನಗೆ ಆಯಾಸವಿಲ್ಲದೆ ಗಳಿಸುವ ಹಣ ಬಡ್ಡಿ. ಬಡ್ಡಿಯಿಂದ ಜೀವಿಸುವುದನ್ನು ಧರ್ಮಶಾಸ್ತ್ರವು ನಿಷೇಧಿಸುತ್ತದೆ. ಕುಸೀದ

ವೃತ್ತಿಯವನ ಸಂಕಲ್ಪ, ಮನಸ್ಸುಗಳು ಕಲುಷಿತವಾದವು. ಅವನು ಕೊಳ್ಳೆಯಿಂದ ಬಳ್ಳ ತುಂಬಿಕೊಳ್ಳತಕ್ಕವನು.

ಬಲಾದ್ದತ್ತಂ ಬಲಾದ್ಭುಕ್ತಂ ಬಲಾದ್ಯಚ್ಚಾಪಿ ಲೇಖಿತಂ ।
ಸರ್ವಾನ್ ಬಲಕೃತಾನರ್ಥಾನ್ ಅಕೃತಾನ್ ಮನುರಬ್ರವೀತ್ ॥ ॥ ೧೫ ॥

– ಮನುಸ್ಮೃತಿ, ೮-೧೬೮

"ಇನ್ನೊಬ್ಬರ ಬಲಾತ್ಕಾರಕ್ಕೆ ಮಣಿದು ಕೊಟ್ಟದ್ದು, ತಿಂದದ್ದು, ಬರೆಸಲ್ಪಟ್ಟದ್ದು – ಹೀಗೆಯೇ ಒತ್ತಾಯಕ್ಕಾಗಿ ಮಾಡಿದ ಎಲ್ಲ ಕಾರ್ಯಗಳೂ ಕಾರ್ಯಗಳೇ ಅಲ್ಲ. ಅವನ್ನು ಮಾಡಿಲ್ಲವೆಂದೇ ತಿಳಿಯಬೇಕು."

ಒಬ್ಬರ ಒತ್ತಾಯಕ್ಕೆ ತಲೆಬಾಗಿಯೋ, ಬೇರೊಂದು ತೊಂದರೆಯನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದಲೋ ಜನರು ದಾನಮಾಡುವುದುಂಟು. ಅದು ಸದ್ಭಾವನೆಯಿಂದ ಪ್ರೇರಿತವಾದ್ದಲ್ಲ. ಅಂತಹ ದಾನ ದಾನವೇ ಅಲ್ಲ. 'ಶ್ರದ್ಧಯಾ ದೇಯಂ, ಅಶ್ರದ್ಧಯಾ ಅದೇಯಂ' ಎನ್ನುತ್ತದೆ ಉಪನಿಷತ್ತು. ಶ್ರದ್ಧೆಯಿಂದ ಕೊಡಬೇಕು. ಅಶ್ರದ್ಧೆಯಿಂದ ಕೊಡಬಾರದು. ಪ್ರೀತಿಯಿಂದ ಯೋಗ್ಯವಾದ ಪಾತ್ರಕ್ಕೆ ಕೊಟ್ಟ ದಾನ ಸಾರ್ಥಕ. "ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀ ಎರಡರಿಂ ಸಂಹರಣವಹುದಾರ್ಜಿಸಿದ ಬಲುಧನವರಸ ಕೇಳೆಂದ" ಎಂದು ವಿದುರನೀತಿಯನ್ನು ಕನ್ನಡಿಸಿದ್ದಾನೆ ಕುಮಾರವ್ಯಾಸ.

ಶ್ರೀಕೃಷ್ಣನು ಸಂಧಾನಕ್ಕಾಗಿ ಕೌರವಸಭೆಗೆ ಬಂದಾಗ ದುರ್ಯೋಧನ ಒಂದು ಸತ್ಕಾರಕೂಟವನ್ನು ಏರ್ಪಡಿಸಿದ. ಅದು ಸದ್ಭಾವನೆಯಿಂದ ಏರ್ಪಡಿಸಿದ್ದಲ್ಲವೆಂದು ಶ್ರೀಕೃಷ್ಣನಿಗೆ ಗೊತ್ತು. ಅವನು ನೇರವಾಗಿ ವಿದುರನ ಮನೆಗೆ ಹೋಗಿ ಊಟ ಮಾಡಿದ. ಅದಕ್ಕೆ ದುರ್ಯೋಧನನು ಆಕ್ಷೇಪಿಸಿದಾಗ ಶ್ರೀಕೃಷ್ಣನು "ರಾಜ–ದುರ್ಯೋಧನ, ಪ್ರೀತಿಯಿಂದ ನೀಡಿದ್ದನ್ನು ತಿನ್ನಬಹುದು; ಆಪತ್ಕಾಲದಲ್ಲಿಯೂ ಪರಾನ್ನವನ್ನು ಭುಂಜಿಸಬಹುದು. ನೀನು

ಪ್ರೀತಿಯಿಂದ ಕರೆಯಲೂ ಇಲ್ಲ. ನಾನು ಆಪತ್ತಿನಲ್ಲಿ ಸಿಕ್ಕಿಕೊಂಡೂ ಇಲ್ಲ!'' ಎಂದು ಮಾರ್ಮಿಕವಾಗಿ ಉತ್ತರಿಸುತ್ತಾನೆ.

ಬೇರೊಬ್ಬರು ಹಾಕಿದ ನಿಯಮಗಳ ಚೌಕಟ್ಟಿನಲ್ಲಿ ಹಣದ ಆಮಿಷಕ್ಕಾಗಿ ಬರೆದ ಪುಸ್ತಕಗಳ ತಾತ್ತ್ವಿಕ ಮೌಲ್ಯವೇನೆಂಬುದನ್ನು ಹೇಳಬೇಕಾದ್ದೇ ಇಲ್ಲ. ಸರ್ಕಾರವು ಬರೆಸುವ ಪಠ್ಯಪುಸ್ತಕಗಳು ಇದಕ್ಕೆ ಪ್ರಥಮೋದಾಹರಣೆ. ಸಾಹಿತ್ಯ ಅಕಾಡೆಮಿಗಳ, ಸಂಘಸಂಸ್ಥೆಗಳ ಪಾರಿತೋಷಿಕವನ್ನು ಗಿಟ್ಟಿಸುವ ಗ್ರಂಥಗಳಲ್ಲಿ ಎಷ್ಟು ನಿಜವಾಗಿಯೂ ಅರ್ಹತೆಯನ್ನು ಪಡೆದಿರುತ್ತವೆ ಎಂಬುದನ್ನು ಪರಿಶೀಲಿಸಬಹುದು. ಹೃದಯಸ್ಪಂದನವಿಲ್ಲದೆ ಗೀಚಿದ ಬರಹದಲ್ಲಿ ತಿರುಳನ್ನು ಅರಸುವುದು ಹೇಗೆ ? ಆಶ್ಚರ್ಯದ ಮಾತೆಂದರೆ, ಮನುವಿನ ಕಣ್ಣಿಗೂ ಈ 'ಬಲಾಲ್ಲೇಖಿತ'ವು ಗೋಚರಿಸಿತ್ತು ಎಂಬುದು !

ಒತ್ತಾಯದ ಸಕಲ ಕಾರ್ಯಗಳೂ ಬಲವಂತದ ಮಾಘಸ್ನಾನಗಳೇ. ಸೋಗಿನ ಧರ್ಮಾಚರಣೆ, ಫಲಾಪೇಕ್ಷೆಯ ರಾಷ್ಟ್ರಭಕ್ತಿ, ಕೀರ್ತಿಕಾಮನೆಯ ಭಾಷಾಭಿಮಾನ, ಅಗ್ಗದ ಪ್ರಚಾರದ ರಾಷ್ಟ್ರೀಯ ಯೋಜನೆ, ಜಾತೀಯತೆಯ ಮತದಾನ – ಇವೆಲ್ಲ ಈ ಗುಂಪಿಗೇ ಸೇರತಕ್ಕವು. ವಿಶೇಷವೇನೆಂದರೆ, ಇವು ನಿರರ್ಥಕಗಳು ಮಾತ್ರವಲ್ಲ, ಅನರ್ಥಕಾರಿಗಳೂ ಆಗುತ್ತವೆ.

**ಉಪಾರ್ಜಿತಾನಾಂ ವಿತ್ತಾನಾಂ ತ್ಯಾಗ ಏವ ಹಿ ರಕ್ಷಣಂ |**
**ತಡಾಗೋದರಸಂಸ್ಥಾನಾಂ ಪರೀವಾಹ ಇವಾಂಭಸಾಂ || || ೧೬ ||**

– ಹಿತೋಪದೇಶ, ಮಿತ್ರಲಾಭ-೧೧೮

''ಸಂಪಾದಿಸಿದ ಹಣಕ್ಕೆ ತ್ಯಾಗವೇ ರಕ್ಷಣೆ. ಕೆರೆಯಲ್ಲಿ ತುಂಬಿದ ನೀರಿಗೆ ಅದರ ಕೋಡಿ ಹೇಗೆ ರಕ್ಷಣೆಯೋ ಹಾಗೆ.''

ಸಂಪತ್ತನ್ನು ಗಳಿಸುವುದು ಹೇಗೆ ಕಷ್ಟವೋ ಹಾಗೆಯೇ ಅದನ್ನು ರಕ್ಷಿಸುವುದೂ ಕಷ್ಟ. ಅನುಭವಶಾಲಿಗಳು ತಮ್ಮ ಅನುಭವವನ್ನು ಹೇಳಿದರು –ತ್ಯಾಗವೇ ರಕ್ಷಣೆಯ ಉಪಾಯ ಎಂದು. ಇದೇನು ವಿರೋಧಾಭಾಸ ?

ಕೆರೆಯನ್ನು ನೋಡಿ. ಮಳೆಗಾಲದಲ್ಲಿ ತುಂಬಿದ ನೀರು ಹರಿದು ಹೋಗಲು ಕೋಡಿಯನ್ನು ಮಾಡಿದ್ದಾರೆ. ತುಂಬಿದ ನೀರು ಹರಿದು ಹೋದಷ್ಟೂ ಕೆರೆ ಸುಭದ್ರ. ಇರುವ ನೀರು ಸ್ವಚ್ಛ. ಕೋಡಿ ಇಲ್ಲದಿದ್ದರೆ ಕಟ್ಟೆ ಒಡೆಯುತ್ತದೆ. ಇರುವ ನೀರೂ ತೊಡೆದುಹೋಗುತ್ತದೆ.

ಶರೀರವು ತಾನು ಬಯಸುವ ಆಹಾರ ಪಾನೀಯಗಳಲ್ಲಿ ಹಿತಮಿತವಾದಷ್ಟನ್ನು ಬಳಸಿ ಉಳಿದದ್ದನ್ನು ವಿಸರ್ಜಿಸಿಬಿಡುತ್ತದೆ. ಹಾಗಲ್ಲದೆ ತಿಂದದ್ದನ್ನೂ ಕುಡಿದದ್ದನ್ನೂ ಶರೀರವೇ ಉಳಿಸಿಕೊಂಡರೆ, ಅದಕ್ಕೆ ಕುತ್ತು ತಪ್ಪಿದ್ದಲ್ಲ. ಸಂಪಾದಿಸಿದ ವಿದ್ಯೆಗೆ ಶಿಷ್ಯರಲ್ಲಿ ವಿನಿಯೋಗವೇ ರಕ್ಷಣೆ. ಖರ್ಚು ಮಾಡಿದಷ್ಟೂ ಅದು ಹೆಚ್ಚುತ್ತಲೇ ಹೋಗುವುದು, 'ವ್ಯಯೇ ಕೃತೇ ವರ್ಧತ ಏವ ನಿತ್ಯಂ'. ಇದು ಪ್ರಕೃತಿ ನಿಯಮ. ''ತ್ಯಾಗೇನೈಕೇ ಅಮೃತತ್ವಮಾನಶುಃ – ತ್ಯಾಗದಿಂದ ವಿದ್ವಾಂಸರು ಅಮೃತತ್ವವನ್ನು ಪಡೆದರು.'' ''ತೇನ ತ್ಯಕ್ತೇನ ಭುಂಜೀಥಾಃ–ತ್ಯಾಗದಿಂದ ಭೋಗಿಸು'' ಎನ್ನುತ್ತದೆ ಉಪನಿಷದ್ವಾಣಿ. ಕಾಳಿದಾಸನು ರಘುಕುಲರಾಜರನ್ನು ಬಣ್ಣಿಸುವಾಗ ''ತ್ಯಾಗಾಯ ಸಂಭೃತಾರ್ಥಾನಾಂ'' ಎಂದು ಹೇಳಿ, ಅವರು ತ್ಯಾಗಕ್ಕಾಗಿ ಹಣವನ್ನು ಸಂಪಾದಿಸುತ್ತಿದ್ದರು ಎಂದು ತಿಳಿಸಿದ್ದಾನೆ. ಮತ್ತೆ ''ಪ್ರಜೆಗಳ ಹಿತಕ್ಕಾಗಿಯೇ ದಿಲೀಪನು ಕಂದಾಯವನ್ನು ವಸೂಲು ಮಾಡುತ್ತಿದ್ದನು. ಸೂರ್ಯನು ಭೂಮಿಯ ನೀರನ್ನು ಹೀರುವುದು ಸಾವಿರಪಟ್ಟಾಗಿ ಹಿಂದಿರುಗಿಸುವುದಕ್ಕಾಗಿಯೇ ಅಲ್ಲವೆ ?'' ಎಂದಿದ್ದಾನೆ. ತೆರಿಗೆಯ ಹಣವನ್ನು ಸರ್ಕಾರ ಪ್ರಜಾಹಿತ ಕಾರ್ಯಕ್ಕಾಗಿ ವಿನಿಯೋಗಿಸಿದರೆ ಅದು ದ್ವಿಗುಣಿತವಾಗಿ ಸರ್ಕಾರಕ್ಕೇ ಹಿಂದಿರುಗುವುದೆಂಬುದು ಆರ್ಥಿಕನೀತಿ. ತೆರಿಗೆಯ ಹಣ ಚಿನ್ನದ ಗಟ್ಟಿಯಾಗಿ ಖಜಾನೆಯಲ್ಲಿ ಕುಳಿತರೆ, ಅಥವಾ ಕೆಲವರ ಕಿಸೆ ಸೇರಿದರೆ, ರಾಷ್ಟ್ರದ ಪಾಡು ಏನಾಗುವುದೆಂದು ಇತಿಹಾಸ ವರ್ಣಿಸಿದೆ. ಇದೇ ನ್ಯಾಯ ವ್ಯಕ್ತಿಗೂ ಅನ್ವಯಿಸುತ್ತದೆ. ಹಣ ಇರುವುದು ವಿನಿಯೋಗಕ್ಕಾಗಿಯೇ. ವಿನಿಯೋಗವು ದಾನರೂಪದಲ್ಲಾಗಬಹುದು. ವಿದ್ಯಾಶಾಲೆ, ಕಾರ್ಖಾನೆಗಳ ಸ್ಥಾಪನೆ – ಮೊದಲಾದ್ದೂ ವಿನಿಯೋಗಮಾರ್ಗವೇ. ಹಣಕ್ಕೆ ಗತಿ ಮೂರೇ – ದಾನ, ಭೋಗ, ನಾಶ. 'ತಾನೂ ತಿನ್ನ, ಪರರಿಗೂ ಕೊಡ' ಆದರೆ

ಮೂರನೆಯ ಗತಿ ನಿಶ್ಚಿತ. ಕೊಟ್ಟದ್ದು ತನಗೆ, ಬೈತಿಟ್ಟದ್ದು ಪರರಿಗೆ– ಎನ್ನುವುದು ದೊಡ್ಡಮಾತು. ತ್ಯಾಗವು ತನ್ನ ಉಪಕಾರಕ್ಕಾಗಿ ಎಂಬುದು ಮಹಾತ್ಮರ ನುಡಿ. ಅದು ಪರೋಪಕಾರಕ್ಕಾಗಿ ಎಂಬುದು ಅಲ್ಪರ ನುಡಿ.

ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕಿತಾ ।
ಏಕೈಕಮಪ್ಯನರ್ಥಾಯ ಕಿಮು ಯತ್ರ ಚತುಷ್ಟಯಮ್ ॥ ॥ ೧೭ ॥

– ಹಿತೋಪದೇಶ, ೧-೧೧

"ತಾರುಣ್ಯ, ಹಣ, ಒಡೆತನ ಅಥವಾ ಅಧಿಕಾರ, ಅವಿವೇಕ – ಇವುಗಳಲ್ಲಿ ಒಂದೊಂದೂ ಅನರ್ಥಕ್ಕೆ ಕಾರಣ. ಇವು ನಾಲ್ಕೂ ಒಂದೆಡೆ ಸೇರಿದರೆ ಹೇಳಬೇಕಾದ್ದೇನು !"

'ಮೀಸೆ ಬರುವಾಗ ದೇಶ ಕಾಣಿಸದು' ಎಂದು ಗಾದೆ ಇದೆ. ತಾರುಣ್ಯದ ಹೊಸ ಹುರುಪು ಯಾರನ್ನೂ ಅಡ್ಡದಾರಿಗೆ ತಿರುಗಿಸಬಲ್ಲದು. ೧೬ ರಿಂದ ೨೫ ವರ್ಷದವರೆಗೆ ಮನುಷ್ಯನ ನಡತೆ ರೂಪುಗೊಳ್ಳುವುದಂತೆ. ಈ ವಯಸ್ಸಿನಲ್ಲಿ ಕೆಟ್ಟ ಹವ್ಯಾಸವಾಗದಂತೆ ನೋಡಿಕೊಂಡರೆ ಮುಂದೆ ಭಯವಿಲ್ಲ. ಬೆಳೆಯುವ ಮರ ಒಂದು ಮಿತಿಯಲ್ಲಿ ನೇರವಾಗಿ ಬೆಳೆದಾಗ ಮುಂದೆ ಅಂಕುಡೊಂಕಾಗುವ ಸಂಭವವಿಲ್ಲ.

ಧನಮದವೆಂಬುದು ಮದ್ಯದ ಮದಕ್ಕಿಂತ ಅಪಾಯಕಾರಿ. ಮದ್ಯದ ಅಮಲು ಸ್ವಲ್ಪ ಹೊತ್ತಿನಲ್ಲಿ ಇಳಿದೀತು. ಹಣದ ಅಮಲು ಇಳಿಯುವುದೇ ಇಲ್ಲ. ಭ್ರಷ್ಟಾಚಾರ, ಹಿಂಸಾಚಾರಗಳಿಗೆ ಅದು ತವರುಮನೆ. 'ಅರ್ಥಮನರ್ಥಂ ಭಾವಯನಿತ್ಯಂ' ಎಂಬುದು ಬೈರಾಗಿಯ ಬರಿಯ ಉದ್ಗಾರವಲ್ಲ; ಮಾನವ ಸಮಾಜಕ್ಕೇ ಹೇಳಿದ ಹಿತನುಡಿ. 'ಲಕ್ಷ್ಮಿ ತಿರ್‍ರನೆ ತಿರಿವಳ್ !'

ಅಧಿಕಾರ ಹೋರಿಗೆ ಕೊಂಬುಗಳಿದ್ದಂತೆ. ಯಾರನ್ನು ತಿವಿದೇನು ಎಂದು ಅದು ಕಾದಿರುತ್ತದೆ. ಅಧಿಕಾರವು ಆಡದ ಆಟವಿಲ್ಲ. ಮೇಲಿನವರನ್ನು

ಕೆಳಗಿಳಿಸುತ್ತದೆ; ಕೆಳಗಿನವರನ್ನು ಮೇಲೇರಿಸುತ್ತದೆ. ಪ್ರಜೆಗಳನ್ನೇ ಅದು ಬೇಟೆಯಾಡಬಲ್ಲದು. ಜೊತೆಗೆ ಹಣವೂ ಸೇರಿದರೆ ಕೇಳಬೇಕಾದ್ದೇ ಇಲ್ಲ.

**ಪೊಡೆದುದು ಗರ, ಅತಿಕೋಪದೆ**
**ಪಿಡಿದುದು ಪುಲಿ, ಗಾಳಿ ಸೋಂಕಿದತ್ತು ಪಿಶಾಚಂ |**
**ತೊಡರ್ದುದು, ಭೂತಂ ಬನ್ನಂ**
**ಬಡಿಸಿದುದನೆ ಸಿರಿಯೊಳರಸುಗಳ್ ಮೆಯ್ಮರಿಯರ್ ||** – ನಾಗವರ್ಮ

ಅವಿವೇಕದ ಮಡದಿ ದುರ್ಬುದ್ಧಿ. ಇದೊಂದೇ ಎಲ್ಲ ಅನರ್ಥ ಪರಂಪರೆಯನ್ನು ತಂದೀತು. ಉಳಿದ ಮೂರಕ್ಕಿಂತ ಇದು ಪ್ರಬಲ.

''ಮೊದಲೇ ಕಪಿ; ಅದು ಹೆಂಡವನ್ನು ಕುಡಿಯಿತಂತೆ. ಆಮೇಲೆ ಭೂತಾವೇಶವಾಯಿತು. ಅಷ್ಟರಲ್ಲಿ ಅದನ್ನು ಚೇಳು ಕುಟುಕಿತು. ಆಗ ಕಪಿಚೇಷ್ಟೆಯನ್ನು ಏನು ಹೇಳೋಣ !'' – ಎನ್ನುತ್ತಾನೆ ಒಬ್ಬ ನೀತಿಶಾಸ್ತ್ರಕಾರ.

ಅನರ್ಥ ಯಾರಿಗೆ? ತನಗೋ ಪರರಿಗೋ? ಉಭಯರಿಗೂ ಅನರ್ಥವೇ. ಬೆಂಕಿಯನ್ನು 'ಆಶ್ರಯಾಶ' ಎನ್ನುತ್ತಾರೆ. ಅದು ತನಗೆ ಆಶ್ರಯವಾದ ಗುಡಿಸಲನ್ನೂ ಸುಟ್ಟು, ಕೇರಿಯನ್ನೂ ಸುಟ್ಟು, ತಾನೂ ನಿರ್ನಾಮವಾಗುತ್ತದೆ. ಹಾಗೆ ಯೌವನಾದಿಗಳು ಆಶ್ರಯಾಶಗಳು. ಇದಕ್ಕೆ ನಿದರ್ಶನ ಸರ್ವಕಾಲದಲ್ಲಿಯೂ ದೊರಕುತ್ತದೆ. ಇತಿಹಾಸದ ಪುಟಗಳನ್ನು ತಿರುವಿಹಾಕ ಬೇಕಾದದ್ದಿಲ್ಲ.

**ಯಶ್ಚ ದಿಷ್ಟಪರೋ ಲೋಕೇ ಯಶ್ಚಾಪಿ ಹಠವಾದಿಕಃ |**
**ಉಭಾವಪಿ ಶಠಾವೇತೌ ಕರ್ಮಬುದ್ಧಿಃ ಪ್ರಶಸ್ಯತೇ ||** || ೧೮ |

– ಮಹಾಭಾರತ, ವನಪರ್ವ, ೩೨-೧೩

''ಈ ಲೋಕದಲ್ಲಿ ಒಬ್ಬನು ದೈವವನ್ನೇ ನಂಬಿರುತ್ತಾನೆ. ಇನ್ನೊಬ್ಬನು ಹಠವಾದಿಯಾಗಿ ಪೌರುಷವನ್ನೇ ಅವಲಂಬಿಸಿರುತ್ತಾನೆ. ಇವರಿಬ್ಬರೂ

ಶಠರು – ಮೊಂಡರು. ಕರ್ತವ್ಯಬುದ್ಧಿಯನ್ನಿಟ್ಟು ಕೆಲಸ ಮಾಡತಕ್ಕವನು ಪ್ರಶಂಸೆಗೆ ಅರ್ಹ, ಶ್ರೇಷ್ಠ.''

ಅದೃಷ್ಟವನ್ನೇ ನಂಬಿ ಕೈಕಟ್ಟಿ ಕುಳಿತವರು ಕೆಲವರು. ಎಲ್ಲವನ್ನೂ ದೈವಕ್ಕೆ ಅರ್ಪಿಸಿ ''ನಮ್ಮ ಅದೃಷ್ಟವಿದ್ದಂತಾಗುತ್ತದೆ'' ಎನ್ನುತ್ತಾರೆ. ವಿಧಿಯನ್ನು ಮೀರಲು ಅಶಕ್ಯವೆಂದೂ ಅದೇ ಎಲ್ಲ ಶುಭಫಲವನ್ನೂ ತಾನಾಗಿ ಒದಗಿಸುವುದೆಂದೂ ಇವರ ನಂಬಿಕೆ. 'ಕುರು ಕರ್ಮೈವ ತಸ್ಮಾತ್ತ್ವಮ್ – ಆದ್ದರಿಂದ ನೀನು ಕರ್ತವ್ಯವನ್ನು ಮಾಡು' ಎಂಬ ಭಗವದುಕ್ತಿಯ ಮರ್ಮವನ್ನು ಇವರು ಮನಸ್ಸಿಗೆ ತಂದುಕೊಂಡವರಲ್ಲ. ಸಿಂಹವು ಬೇಟೆಯಾಡದೆ ಬಾಯ್ದೆಗೆದು ಮಲಗಿದ್ದರೆ, ಅದೃಷ್ಟವಿದ್ದಲ್ಲಿ ಜಿಂಕೆ ತಾನಾಗಿ ಬಂದು ಬಾಯಲ್ಲಿ ನುಗ್ಗುವುದೆಂದು ಈ ಜನರು ತಿಳಿದಿರಬೇಕು. ಮರದಲ್ಲಿ ಹಣ್ಣು ಬಿಡುವುದು ದೈವಯತ್ನವೇ ಆಗಿದ್ದರೂ, ಮರ ಬೆಳೆಸುವುದೂ, ಮರಹತ್ತಿ ಹಣ್ಣು ಕೀಳುವುದೂ ಮನುಷ್ಯಯತ್ನವಲ್ಲವೆ ?

ಇನ್ನು ಕೆಲವರು ತಮ್ಮ ಪ್ರಯತ್ನಕ್ಕೆ ಸರ್ವವೂ ಸಾಧ್ಯವೆಂದು ನಂಬಿದ್ದಾರೆ. ನಮ್ಮ ಇಷ್ಟದಂತೆ ಫಲ ದೊರಕುವುದಾದರೆ, ಈ ಜಗತ್ತಿನಲ್ಲಿ ದಾರಿದ್ರ್ಯ, ಅಜ್ಞಾನಗಳೇ ಇರುತ್ತಿರಲಿಲ್ಲ ! ಈ ಪಕ್ಷದಲ್ಲಿ ನಮ್ಮನ್ನು ಹಿಡಿಯುವವರು ಯಾರು ? ಮಹಾ ಸಾಹಸಿಯಾದ ಹಿಟ್ಲರನ ಸರ್ವಪ್ರಯತ್ನ ಗಳೂ ನಿಷ್ಫಲವಾದವೇಕೆ ?

ದೈವ-ಪೌರುಷ ಇವೆರಡೂ ಹಕ್ಕಿಗೆ ಎರಡು ರೆಕ್ಕೆಗಳಿದ್ದಂತೆ. ಕಾರ್ಯಸಿದ್ಧಿಗೆ ದೈವ–ಪೌರುಷ ಎರಡೂ ಬೇಕು. ಬೀಜವನ್ನು ಬಿತ್ತುವುದು ಪೌರುಷ, ನಮ್ಮ ಅಧೀನ. ಮಳೆ ಬರುವುದು ದೈವಾಧೀನ. ಬಿತ್ತನೆ ಮಾಡದಿದ್ದರೆ ಮಳೆ ಬಂದರೂ ಬೆಳೆ ಇಲ್ಲ; ಬಿತ್ತಿದಾಗ ಮಳೆ ಬರದಿದ್ದರೂ ಬೆಳೆ ಇಲ್ಲ. ದೈವ–ಪೌರುಷಗಳೆರಡರಿಂದ ಕಾರ್ಯಸಿದ್ಧಿ.

ದೈವವನ್ನು ಅದೃಷ್ಟ ಎನ್ನುತ್ತಾರೆ. ಅದು ಕಣ್ಣಿಗೆ ಕಾಣಿಸತಕ್ಕದ್ದಲ್ಲ. ಕಾಣಿಸತಕ್ಕದ್ದು ನಮ್ಮ ಯತ್ನ ಒಂದೇ. ದೈವದ ಹಿಮ್ಮೇಳವನ್ನು ನಂಬಿ 'ಇದು ನನ್ನ ಕರ್ತವ್ಯ' ಎಂದು ಲೋಪದೋಷಗಳಿಲ್ಲದಂತೆ ಕೆಲಸ

ಮಾಡತಕ್ಕವನು 'ಕರ್ಮಬುದ್ಧಿ' ಎನಿಸುತ್ತಾನೆ. ಫಲಿಸದಿದ್ದರೆ ನನ್ನ ತಪ್ಪೇನೂ ಇಲ್ಲ ಎಂಬ ಮನಃಶಾಂತಿ ಅವನಿಗುಂಟು.

'ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ' ಎಂದು ಪೌರುಷವನ್ನು ಹೊಗಳಿದ ನೀತಿಶಾಸ್ತ್ರಕಾರನೇ ಮರು ಉಸಿರಿನಲ್ಲಿ 'ಯತ್ನೇ ಕೃತೇ ಯದಿ ನ ಸಿಧ್ಯತಿ ಕೋऽತ್ರ ದೋಷಃ' ಎಂದು ನುಡಿದು ಪೌರುಷವು ಸದಾ ಫಲಿಸುವುದಿಲ್ಲವೆಂದೂ ಅದಕ್ಕೆ ದೈವದ ಬಲ ಬೇಕೆಂದೂ ಸೂಚಿಸಿದ್ದಾನೆ.

**ಯೇ ಚ ಮೂಢತಮಾ ಲೋಕೇ ಯೇ ಚ ಬುದ್ಧೇಃ ಪರಂಗತಾಃ |**
**ತೇ ನರಾಃ ಸುಖಮೇಧಂತೇ ಕ್ಲಿಶ್ಯತ್ಯಂತರಿತೋ ಜನಃ || || ೧೯||**

**– ಮಹಾಭಾರತ, ಮೋಕ್ಷಧರ್ಮ, ೧-೩೩**

"ಲೋಕದಲ್ಲಿ ಯಾರು ಅತ್ಯಂತ ಮೂಢರೋ ಮತ್ತು ಯಾರು ಮಹಾ ಬುದ್ಧಿಶಾಲಿಗಳೋ ಅವರು ಸುಖವಾಗಿ ಏಳ್ಗೆಹೊಂದುತ್ತಾರೆ. ಮಧ್ಯಮರು ಮಾತ್ರ ಕಷ್ಟಪಡುತ್ತಾರೆ."

ತತ್ತ್ವಸಾಕ್ಷಾತ್ಕಾರವನ್ನು ಪಡೆದ ಜ್ಞಾನಿಗೆ ಸುಖ–ದುಃಖಗಳೆಂಬ ಭೇದವಿಲ್ಲ. ಮಾನ–ಅವಮಾನ, ಶೀತ–ಉಷ್ಣ ಇತ್ಯಾದಿ ದ್ವಂದ್ವಗಳ ಪೀಡೆ ಇಲ್ಲ. ಪ್ರಕೃತಿಯ ಗೋಜನ್ನು ಅವನು ಮೀರಿರುವುದರಿಂದ 'ಗುಣಾ ಗುಣೇಷು ವರ್ತಂತೇ' ಎಂದು ತಿಳಿದು ಮನಸ್ಸಿನ ತೂಕವನ್ನು ಕಳೆದುಕೊಳ್ಳದೆ ಸ್ಥಿತಪ್ರಜ್ಞನಾಗಿರುತ್ತಾನೆ. ತತ್ತ್ವದ ವಿಚಾರವೇ ಗೊತ್ತಿಲ್ಲದ ಮೂಢನಾದರೂ ಹಾಗೆಯೇ ಮಾನಾವಮಾನಗಳ ಲೇಪವಿಲ್ಲದೆ ಪಶುಪಕ್ಷಿಗಳಿಗೆ ಸಮವಾಗಿ ಜೀವನವನ್ನು ಸಾಗಿಸುತ್ತಿರುತ್ತಾನೆ. ಮಧ್ಯಸ್ಥನಿಗೇ ಕಷ್ಟ. ಯಾವುದು ಸರಿ, ಯಾವುದು ತಪ್ಪು, ಹೇಗೆ ನಡೆದುಕೊಳ್ಳಬೇಕು – ಎಂಬುದನ್ನರಿಯಲಾರದೆ ಪರದಾಡುತ್ತಾನೆ. ಇದು ಪರಮಾರ್ಥದ ವಿಷಯವಾಗಿ ಹೇಳಿದ ಉಕ್ತಿ ಯಾದರೂ, ಲೋಕಜೀವನದ ಎಲ್ಲ ಪದರಗಳಿಗೂ ಅನ್ವಯಿಸುತ್ತದೆ.

ಶ್ರೀಮಂತನಿಗೆ ಬೆಲೆಯೇರಿಕೆಯಿಂದ ತೊಂದರೆಯಿಲ್ಲ. ಸಕ್ಕರೆ, ಕಾಳು, ಬೇಳೆಗಳ ಬೆಲೆ ಎಷ್ಟಾದರೇನು ? ಅವನ ಲಕ್ಷ್ಯಕ್ಕೇ ಅದು ಬರುವುದಿಲ್ಲ. ತಿರಿದು ತಿನ್ನತಕ್ಕ ದಿನಗೂಲಿಯಿಂದ ಆ ದಿನದ ಪಾಡನ್ನು ನೀಗಿಕೊಳ್ಳತಕ್ಕ ಬಡವನಿಗೂ ಅದರ ಪರಿವೆಯಿಲ್ಲ. ಅವನು ಜೀವನದಲ್ಲಿ ಏರುಪೇರನ್ನು ಕಂಡವನೇ ಅಲ್ಲ. ಸಕ್ಕರೆಯನ್ನೇ ಬಳಸದವನಿಗೆ ಅದರ ಬೆಲೆಯೇರಿಕೆಯಿಂದ ನಷ್ಟವಿಲ್ಲ. ಬೀದಿಯ ಅಂಚಿನಲ್ಲಿ ಮಲಗತಕ್ಕವನಿಗೆ ಮನೆಬಾಡಿಗೆ ಎಷ್ಟಾದರೇನು ? ಕಷ್ಟವೇನಿದ್ದರೂ ಮಧ್ಯಸ್ಥನಿಗೇ.

'ಧನ್ಯೋ ಜನಃ ಪ್ರಾಕೃತಃ' ಎಂಬ ಮಾತೊಂದು ಉಂಟು. ಪ್ರಾಕೃತನೆಂದರೆ ಜಡ, ಮೂಢ. ಸಮಾಜದಲ್ಲಿ ಯಾವ ಗಣನೆಯೂ ಇಲ್ಲದವ. ಅವನೇ ಧನ್ಯ ! ಅವನಿಗೆ ವಿದ್ಯೆಯ ಚಿಂತೆಯಿಲ್ಲ. ತನ್ನ ಅಜ್ಞತೆಗಾಗಿ ದುಃಖವಿಲ್ಲ. ಬಂದವರಿಗೆ ಉಪಚರಿಸಲಾರದೆ ಹೋದೆ ಎಂಬ ಪಶ್ಚಾತ್ತಾಪವಿಲ್ಲ. ಅವನು ಸುಖವಾಗಿ ನಿದ್ರಿಸುತ್ತಾನೆ. ಇಂತಹ ಜಡನಿಗೂ ಜ್ಞಾನಿಗೂ ಬಾಹ್ಯಾಚರಣೆಯಲ್ಲಿ ಭೇದವಿಲ್ಲ.

ರಾಜಕೀಯದಲ್ಲಾದರೂ ಅಷ್ಟೆ. ಪ್ರಬಲವಾದ ಶ್ರೀಮಂತರಾಷ್ಟ್ರಕ್ಕೆ ಲೋಕದ ಕಷ್ಟ ತಟ್ಟುವುದಿಲ್ಲ. ತುಂಬ ಹಿಂದುಳಿದ ದೇಶಕ್ಕೆ ಪರರಾಷ್ಟ್ರದ ಭೀತಿ ಇಲ್ಲ. ಮಧ್ಯಸ್ಥ ದೇಶಗಳೇ ಸದಾ ಬಿಕ್ಕಟ್ಟುಗಳನ್ನೆದುರಿಸುತ್ತವೆ. ಬುದ್ಧಿಶಾಲಿಯಾದ ಪುಢಾರಿ ಹೇಗೋ ತನ್ನ ಕಾರ್ಯವನ್ನು ಸಾಧಿಸಿಕೊಂಡು ಸುಖವಾಗಿರುತ್ತಾನೆ. ಬುದ್ಧಿಯೂ ಇಲ್ಲದ ಕೈಲಾಗದವನಿಗೆ ಆಶೋತ್ತರಗಳೇ ಇಲ್ಲವಾದ್ದರಿಂದ ಸಂತೃಪ್ತಿ. ಮಧ್ಯಸ್ಥನಾದವನು ಸದಾ ಮೈ ಪರಚಿಕೊಳ್ಳುತ್ತಿರುತ್ತಾನೆ. ಬುದ್ಧಿ, ಹಣ, ಅಧಿಕಾರ – ಇವು ಅಧಿಕವಾಗಿದ್ದವರೂ ಇದು ಯಾವುದೂ ಇಲ್ಲದವರೂ ಸುಖಿಗಳು. ಮಧ್ಯಮಶ್ರೇಣಿಯ ಜನರಿಗೆ ಕ್ಲೇಶ ತಪ್ಪಿದ್ದಲ್ಲ.

ಅವ್ಯಾಕರಣಮಧೀತಂ ಭಿನ್ನದ್ರೋಣ್ಯಾಂ ತರಂಗಿಣೀತರಣಂ |
ಭೇಷಜಮಪಥ್ಯಸಹಿತಂ ತ್ರಯಮಿದಮಕೃತಂ ವರಂ ನ ಕೃತಂ || || ೨೦ ||

– ಸುಭಾಷಿತ ಸಂಗ್ರಹ

"ವ್ಯಾಕರಣವಿಲ್ಲದ ಓದು, ಒಡಕುದೋಣಿಯಲ್ಲಿ ಹೊಳೆ ದಾಟುವುದು, ಪಥ್ಯವಿಲ್ಲದೆ ಔಷಧ ಸೇವನೆ – ಇವು ಮೂರನ್ನು ಮಾಡದೆ ಇರುವುದು ಒಳ್ಳೆಯದು, ಮಾಡುವುದು ಒಳ್ಳೆಯದಲ್ಲ."

ಪ್ರತಿಯೊಂದು ಭಾಷೆಗೂ ವ್ಯಾಕರಣವೇ ಬೀಗದಕ್ಕೈ ಇದ್ದಂತೆ. ಅದಿಲ್ಲದೆ ಭಾಷೆ ಸ್ವಾಧೀನವಾಗದು. ವ್ಯಾಕರಣವಿಲ್ಲದ ಅಧ್ಯಯನ ವ್ಯರ್ಥವೇ. ಹರಕುಮುರುಕಾಗಿ ಕಲಿತ ಭಾಷೆ ಅಪಹಾಸ್ಯಕ್ಕೆ ಕಾರಣ. ಕೆಲವು ವೇಳೆ ಅನರ್ಥವೂ ಆದೀತು. ಅದು ತೂತಿನ ಮಡಕೆಯಲ್ಲಿ ನೀರು ತುಂಬಿದಂತೆ ಶ್ರಮದಾಯಕವೇ ಹೊರತು ಫಲದಾಯಕವಲ್ಲ. ವ್ಯಾಕರಣವಿಲ್ಲದ ಓದು ತಳಹದಿಯಿಲ್ಲದೆ ಕಟ್ಟಡ ಕಟ್ಟಿದಂತೆ ಬಹುಬೇಗನೆ ಕುಸಿದು ಬೀಳುತ್ತದೆ. ಅದು ಬೆನ್ನೆಲುಬಿಲ್ಲದ ದೇಹವಿದ್ದಂತೆ.

ನಮ್ಮ ಅಭಿಪ್ರಾಯವನ್ನು ಪರರಿಗೆ ತಿಳಿಸುವುದಕ್ಕಾಗಿ ಭಾಷೆ ಬೇಕು. ಭಾಷೆಯ ಉದ್ದೇಶವೇ ಅದು. ವ್ಯಾಕರಣವಿಲ್ಲದೆಯೇ ಆ ಉದ್ದೇಶ ನಡೆಯುವುದಿಲ್ಲವೇ ? – ಎಂಬ ಪ್ರಶ್ನೆ ಉಂಟು. ಅದೇನೋ ಸರಿ. ಆದರೆ ವ್ಯಾಕರಣವಿಲ್ಲದೆ ಭಾಷೆ ಒಲಿಯುತ್ತದೆಯೆ ? ತಾಯ್ನುಡಿಯಾದರೆ ವ್ಯವಹಾರ ಬಲದಿಂದ ಹಾಗೂ ಹೀಗೂ ಸಾಧ್ಯವಾದೀತು. ಪರಭಾಷೆಯಾದರೆ ? ತಾಯ್ನುಡಿಯಲ್ಲಿಯೂ ತನ್ನ ಸೂಕ್ಷ್ಮ ಭಾವನೆಗಳನ್ನು ಭಾಷಾ ಪರಿಣತನಲ್ಲದವನು ತಿಳಿಸಲಾರ.

ಬಟ್ಟೆ ಇರುವುದು ತೊಡುವುದಕ್ಕೆ. ಮಾನ ಮುಚ್ಚಿಕೊಳ್ಳುವುದೂ, ಚಳಿಗಾಳಿಯಿಂದ ರಕ್ಷಿಸಿಕೊಳ್ಳುವುದೂ ಉದ್ದೇಶ. ಈ ಉದ್ದೇಶ ಯಾವ ಬಟ್ಟೆಯನ್ನು ಹೇಗೆ ಸುತ್ತಿಕೊಂಡರೂ ನಡೆದೀತು. ಈ ಬಣ್ಣ, ಈ ಹೊಲಿಗೆ, ಈ ಅಕೃತಿ – ಎಂಬ ನಾಜೂಕು ಏಕೆ ? ಬಾಯಲ್ಲಿ ಅಡಗಿರುವ ಹಲ್ಲುಗಳಿಗೆ ಅಂದ ಬೇಕು. ಬಾಯಿಂದ ಹೊರಟು ನೂರಾರು ಜನರ ಕಿವಿಗಳಿಗೆ ಹೋಗಿ ಸೇರುವ ಶಬ್ದಗಳಿಗೆ ಯಾವ ಅಂದವೂ ಬೇಡವೇನು? ಭಾಷೆಗೆ ಈ ಅಂದವನ್ನು ಕೊಡತಕ್ಕದ್ದು ವ್ಯಾಕರಣ.

ಆಹಾರ, ನಿದ್ರೆ, ವ್ಯಾಯಾಮ, ಸ್ನಾನ – ಇವೆಲ್ಲವೂ ರೋಗಿಯ ಉಪಚಾರಕ್ಕೆ ಬೇಕಾದವು. ಇತ್ತ ಔಷಧವನ್ನು ಕುಡಿಯುತ್ತ ಅತ್ತ ಅಪಥ್ಯವನ್ನು

ಮಾಡುತ್ತಿದ್ದರೆ, ರೋಗ ಗುಣವಾಗುವುದಕ್ಕೆ ಬದಲು ಹೆಚ್ಚುತ್ತದೆ. ಟೈಫಾಯಿಡ್ ರೋಗಿ ಔಷಧವನ್ನು ಕುಡಿಯುತ್ತ ಕೋಡಬಳೆಯನ್ನು ಮೆಲ್ಲುತ್ತಿದ್ದರೆ ಏನಾಗುತ್ತದೆ ?

ಈ ಎರಡು ನೀತಿಗಳನ್ನು ಹೇಳುವುದು ಮೇಲ್ಕಂಡ ಶ್ಲೋಕದ ಉದ್ದೇಶ. ಒಡಕುದೋಣಿಯಲ್ಲಿ ಹೊಳೆ ದಾಟುವುದರ ಫಲ ಎಲ್ಲರಿಗೂ ಗೊತ್ತಿರುವುದೇ. ಹೊಳೆಯಲ್ಲಿ ಮುಳುಗುವುದಕ್ಕಿಂತ ದಡದಲ್ಲಿ ನಿಂತಿರುವುದು ಉತ್ತಮ – ಎಂದು ಎಲ್ಲರಿಗೂ ತಿಳಿದದ್ದೇ. ಇದು ಮೇಲಿನ ಎರಡು ನೀತಿಗಳಿಗೆ ಪ್ರತ್ಯಕ್ಷ ನಿದರ್ಶನವೆಂದು ತಿಳಿಯಬೇಕು.

ಹೀಗೆಯೇ ಸ್ವಯಂ ಆಚಾರವಿಲ್ಲದ ಪರೋಪದೇಶ, ಇಂಜಿನಿಯರಿಂಗ್ ಶಾಸ್ತ್ರಕ್ಕೆ ವಿರುದ್ಧವಾಗಿ ಕಟ್ಟಡದ ನಿರ್ಮಾಣ, ಭ್ರಷ್ಟಾಚಾರಕ್ಕೆ ಅವಕಾಶ ಮಾಡಿಕೊಡುವ ಕಾನೂನು, ನಡತೆಯನ್ನು ಕಲಿಸದ ವಿದ್ಯಾಭ್ಯಾಸ – ಇವು ಇರುವುದಕ್ಕಿಂತ ಇಲ್ಲದೆಹೋಗುವುದು ಒಳ್ಳೆಯದು.

**ನ ಕಶ್ಚಿತ್ ಕಸ್ಯಚಿನ್ಮಿತ್ರಂ ನ ಕಶ್ಚಿತ್ ಕಸ್ಯಚಿದ್ ರಿಪುಃ |**
**ಅರ್ಥತಸ್ತು ನಿಬಧ್ಯಂತೇ ಮಿತ್ರಾಣಿ ರಿಪವಸ್ತಥಾ || || ೨೧ ||**

– ಮಹಾಭಾರತ

"ಯಾವನೊಬ್ಬನೂ ಸಹಜವಾಗಿ ಇನ್ನೊಬ್ಬನಿಗೆ ಮಿತ್ರನೂ ಆಗುವುದಿಲ್ಲ, ಶತ್ರುವೂ ಆಗುವುದಿಲ್ಲ. ಮಿತ್ರರೂ ಶತ್ರುಗಳೂ ಯಾವುದೋ ಕಾರ್ಯನಿಮಿತ್ತದಿಂದ ಆಗುತ್ತಾರೆ."

ಉಪಕಾರಿಯನ್ನು ಮಿತ್ರನೆಂದೂ ಅಪಕಾರಿಯನ್ನು ಶತ್ರುವೆಂದೂ ಲೋಕ ತಿಳಿದಿದೆ. ಉಪಕಾರವನ್ನಾಗಲಿ ಅಪಕಾರವನ್ನಾಗಲಿ ಜನರು ಏಕೆ ಮಾಡುತ್ತಾರೆ? ಒಂದಾನೊಂದು ಅರ್ಥದಿಂದ ಮಾಡುತ್ತಾರೆ. ಆ ಅರ್ಥ ಯಾವುದೆಂದರೆ ಸ್ವಾರ್ಥ ! ಸ್ವಾರ್ಥಕ್ಕೆ ಉಪಯೋಗಿಯಾದರೆ ಉಪಕಾರವನ್ನೂ ವಿರೋಧಿಸಿ

ಅಪಕಾರವನ್ನೂ ಎಸಗುತ್ತಾರೆ. ಸ್ವಾರ್ಥಕ್ಕೆ ವಿರೋಧಿಯಾದ್ದರಿಂದ ವಾಲಿಗೆ ಸುಗ್ರೀವ ವೈರಿ. ಸುಗ್ರೀವನ ಸ್ವಾರ್ಥಕ್ಕೆ ಅನುಕೂಲನಾದ್ದರಿಂದ ರಾಮನು ಸುಗ್ರೀವನಿಗೆ ಮಿತ್ರ. ದುರ್ಯೋಧನ ತನ್ನ ಸ್ವಾರ್ಥಕ್ಕಾಗಿ ಕರ್ಣನಿಗೆ ಉಪಕಾರಮಾಡಿದ. ಇಬ್ಬರೂ ಸ್ವಾರ್ಥಕ್ಕಾಗಿ ಪಾಂಡವರಿಗೆ ಅಪಕಾರ ಮಾಡಿದರು. ಮತಗಳ ಕಲಹಕ್ಕೆ; ರಾಷ್ಟ್ರಗಳ ಯುದ್ಧಕ್ಕೆ ಅವುಗಳ ಸ್ನೇಹಕ್ಕೆ ಬುಡದಲ್ಲಿ ಸ್ವಾರ್ಥವೇ ಪ್ರಚೋದಕತತ್ತ್ವವಾಗಿ ನಿಂತಿರುತ್ತದೆ.

ಎಲ್ಲವೂ ಸ್ವಾರ್ಥಮಯವಾದರೆ ಲೋಕವು ಯಾರನ್ನು ಮಹಾತ್ಮರೆಂದು ಕೊಂಡಾಡುತ್ತದೆ ? ಸ್ವಾರ್ಥವು ಸಾತ್ತ್ವಿಕ, ರಾಜಸ, ತಾಮಸ ಎಂದು ಮೂರು ತೆರ. ಪರರ ಕಷ್ಟಗಳನ್ನು ಕಂಡು ಕೆಲವರ ಹೃದಯ ಕರಗುತ್ತದೆ. ಮಾನಸಿಕವಾಗಿ ಅದೊಂದು ತಡೆಯಲಾರದ ನೋವು. ಇಂತಹ ನೋವು ಯಾರಿಗಾಗುವುದೋ ಅವರು ಮಹಾತ್ಮರು. ತಮ್ಮ ಮಾನಸ ಪೀಡೆಯನ್ನು ಹಿಂಗಿಸಿಕೊಳ್ಳಲು ಅವರು ದೀನರ ನೆರವಿಗೆ ಧಾವಿಸುತ್ತಾರೆ. ಇದು ಸಾತ್ತ್ವಿಕವಾದ ಸ್ವಾರ್ಥ. ಹೊನ್ನು, ಮಣ್ಣು, ಅಧಿಕಾರ, ಕೀರ್ತಿಗಳಿಗಾಗಿ ಉಪಕಾರ ಅಪಕಾರಗಳೆರಡೂ ನಡೆಯಬಹುದು. ಇದು ರಾಜಸ ಸ್ವಾರ್ಥದಿಂದ. ಈ ಸ್ವಾರ್ಥ ಲೋಕಪ್ರಸಿದ್ಧವಾದದ್ದು. "ರಾಜಕೀಯದಲ್ಲಿ ಮಿತ್ರರಾರು ಶತ್ರುಗಳಾರು ?" ಎಂದು ಗಣ್ಯವ್ಯಕ್ತಿ ಉದ್ಗಾರ ಮಾಡಿದರಂತೆ. ಇದರ ಸತ್ಯತೆಯನ್ನು ಎಲ್ಲರೂ ಬಲ್ಲರು.

ಕೆಲವರು ತಮಗೆ ಪ್ರಯೋಜನವಿಲ್ಲದಿದ್ದರೂ ಇನ್ನೊಬ್ಬರಿಗೆ ತೊಂದರೆ ಕೊಡುತ್ತಾರೆಂದು ಮೇಲ್ನೋಟಕ್ಕೆ ಕಾಣುತ್ತದೆ. "ಯೇ ತು ಘ್ನಂತಿ ನಿರರ್ಥಕಂ ಪರಹಿತಂ ತೇ ಕೇ ನ ಜಾನೀಮಹೇ" ಎನ್ನುತ್ತಾನೆ ಭರ್ತೃಹರಿ. ವಿಚಾರ ಮಾಡಿದಾಗ ಅಲ್ಲಿಯೂ ಸ್ವಾರ್ಥವನ್ನು ಕಾಣಬಹುದು. ಅಸೂಯೆ — ಹೊಟ್ಟೆಕಿಚ್ಚು ಎಂಬುದೊಂದು ತಾಮಸ ಸ್ವಭಾವ. ಈ ಕಿಚ್ಚಿನ ಶಾಂತಿಗಾಗಿ ಮನುಷ್ಯನು ಪರಹಿತವನ್ನು ಕೆಡಿಸುತ್ತಾನೆ. ಸ್ವಾರ್ಥದ ಈಡೇರಿಕೆ ಆಗಲೆಂಬ ಆಸೆಯಿಂದಲೇ ಸಕಲ ಪ್ರಾಣಿವರ್ಗದ ಪ್ರವೃತ್ತಿ.

**ದೃಷ್ಟಿಪೂತಂ ನ್ಯಸೇತ್ ಪಾದಂ ವಸ್ತ್ರಪೂತಂ ಪಿಬೇಜ್ಜಲಂ |**
**ಶಾಸ್ತ್ರಪೂತಾಂ ವದೇದ್ವಾಚಂ ಮನಃಪೂತಂ ಸಮಾಚರೇತ್ || || ೨೨||**

– ನ್ಯಾಯರತ್ನಾಕರ

''ಕಣ್ಣಿಂದ ನೋಡಿ ದೋಷರಹಿತವಾದ ಹೆಜ್ಜೆಯನ್ನಿಡಬೇಕು. ವಸ್ತ್ರದಿಂದ ಶೋಧಿಸಿದ ನೀರನ್ನು ಕುಡಿಯಬೇಕು. ಶಾಸ್ತ್ರಸಂಮತವಾದ ಮಾತನ್ನಾಡಬೇಕು. ಮನಸ್ಸಿಗೆ ಶುದ್ಧವೆನಿಸಿದ್ದನ್ನು ಆಚರಿಸಬೇಕು.''

ಕಣ್ಣಿಂದ ಮುಂದೆ ನೋಡದೆ ಹೆಜ್ಜೆಯಿಟ್ಟರೆ ಉರುಳಿ ಬೀಳುತ್ತಾನೆ. ಅಶುದ್ಧವಾದ ನೀರನ್ನು ಕುಡಿದರೆ ಆರೋಗ್ಯ ಕೆಡುತ್ತದೆ. ಇದು ಎಲ್ಲರಿಗೂ ಗೊತ್ತಿರುವ ಸಂಗತಿಯಾದದ್ದರಿಂದ ಮೇಲ್ಕಂಡ ಶ್ಲೋಕದ ಪೂರ್ವಾರ್ಧವು ದೃಷ್ಟಾಂತವಾಗುತ್ತದೆ, ಉತ್ತರಾರ್ಧವು ದಾರ್ಷ್ಟಾಂತಿಕ. ನಾವು ಆಡುವ ಮಾತು ಶಾಸ್ತ್ರಸಂಮತವಾಗಿರಬೇಕು. ಶಾಸ್ತ್ರವು ಅನುಭವಿಗಳ ನುಡಿ. ಬಹುಕಾಲ ಅದು ಪರೀಕ್ಷಿತವಾಗಿ ಅದರ ತಿರುಳು ನಿರ್ಬಾಧವೆಂದು ನೆಲೆಗೊಂಡಿರುತ್ತದೆ. ಅನುಭವದ ಒರೆಗಲ್ಲಿಗೆ ಉಜ್ಜಿದ ಆಪ್ತವಾಕ್ಯವೇ ಶಾಸ್ತ್ರ. 'ಋಷೀಣಾಮಪಿ ಯಜ್ಜ್ಞಾನಂ ತದಪ್ಯಾಗಮಪೂರ್ವಕಂ' ಎನ್ನುತ್ತಾನೆ ಭರ್ತೃಹರಿ. 'ಋಷಿಗಳ ಜ್ಞಾನವೂ ಸಹ ವೇದಶಾಸ್ತ್ರಗಳಿಂದ ಬಂದದ್ದು.' ಆದ್ದರಿಂದಲೇ ಋಷಿವಾಕ್ಯಕ್ಕೆ ಗೌರವ. ತುಂಬಿದ ಸಭೆಯಲ್ಲಿ ದ್ರೌಪದಿಯ ಸೀರೆಯನ್ನೆಳೆದಾಗ, ಅವಳನ್ನು ಪಣವಾಗಿರಿಸುವ ಅಧಿಕಾರ ಧರ್ಮರಾಯನಿಗೆ ಇತ್ತೇ ಇಲ್ಲವೇ ? – ಎಂಬ ಪ್ರಶ್ನೆಗೆ ಭೀಷ್ಮನು ಉತ್ತರವನ್ನು ನಿರ್ಣಯಿಸಲಾರದೆ ಹೋದನು. ಮನಸ್ಸಿಗೆ ತೋರಿದ ಉತ್ತರವನ್ನು ಹೇಳುವುದಕ್ಕೆ ಅವನಿಗೇನೂ ಗಂಟಲು ಕಟ್ಟಿರಲಿಲ್ಲ. ಧರ್ಮರಾಯನೂ ಮಾತಾಡಲಾರದೆ ಬೆಪ್ಪಾದನು. 'ಶಾಸ್ತ್ರಪೂತಾಂ ವದೇದ್ವಾಚಂ' ಎಂಬುದೇ ಅದಕ್ಕೆ ನಿಮಿತ್ತ.

ಇನ್ನು ಮನಸ್ಸಿಗೆ ತೋರಿದ್ದನ್ನು ಆಚರಿಸಬಹುದಾದರೆ, ಶಾಸ್ತ್ರವೇಕೆ ? – ಎಂಬ ಪ್ರಶ್ನೆ ಹುಟ್ಟುತ್ತದೆ. ಎರಡು ವಿಧಿಗಳಲ್ಲಿ ಯಾವುದು ಕರ್ತವ್ಯವೆಂಬ ಧರ್ಮಸಂಕಟವು ಎಲ್ಲಿ ತಲೆದೋರುವುದೋ ಅಲ್ಲಿ 'ಮನಃಪೂತಂ ಸಮಾಚರೇತ್.' ಶಾಸ್ತ್ರಪೂತವಾದ್ದರಲ್ಲಿಯೇ ಯಾವುದು ಮನಃಪೂತವೋ

ಅದನ್ನು ಆಚರಿಸಬೇಕು. ಯಾವಾತನಿಗೆ ಧರ್ಮದಲ್ಲಿ ನಿಷ್ಠೆಯಿದೆಯೋ ಅತನ ಮನಸ್ಸು ತಪ್ಪನ್ನು ಎಂದಿಗೂ ಆರಿಸಿಕೊಳ್ಳುವುದಿಲ್ಲ. ಶ್ರೀರಾಮನು ವನವಾಸ ಮಾಡಬಾರದೆಂದು ಕೌಸಲ್ಯೆಯ ಆಜ್ಞೆ, ಜಾಬಾಲಿ ಮೊದಲಾದವರ ಉಪದೇಶ, ಭರತನ ಪ್ರಾರ್ಥನೆ. ಆದರೆ ಆ ಧರ್ಮಾತ್ಮನಿಗೆ ತಂದೆಯ ಆಜ್ಞೆಯಂತೆ ವನವಾಸವೇ 'ಮನಃಪೂತ'ವಾಯಿತು. ಏಕೆಂದರೆ, ಅದು ಸ್ವಾರ್ಥಕಳಂಕಿತ ವಾಗಿರಲಿಲ್ಲ.

ಶಕುಂತಲೆಯಲ್ಲಿ ತನಗೆ ಹುಟ್ಟಿದ ಪ್ರೇಮವು ಶಾಸ್ತ್ರದೂಷಿತವೆ ? – ಎಂದು ಪರೀಕ್ಷಿಸುವುದಕ್ಕಾಗಿ ದುಷ್ಯಂತನು 'ಆರ್ಯ'ವಾದ ತನ್ನ ಮನಸ್ಸಿನ ಸಾಕ್ಷ್ಯವನ್ನು ಬಯಸಿದ. ಇಲ್ಲಿ 'ಆರ್ಯ' ಎಂಬುದು ಬಹು ಮುಖ್ಯವಾದದ್ದು. ಧರ್ಮನಿಷ್ಠವೂ ಆಚಾರ್ಯೋಪದೇಶಪರಿಷ್ಕೃತವೂ ಆದ ಮನಸ್ಸು ಆರ್ಯ. ಇಂದು ತುಂಬ ಗಂಭೀರವಾದ ವಿಷಯದಲ್ಲಿಯೂ ನಮ್ಮ ಜನರು 'ಇದು ನನ್ನ ಅನಿಸಿಕೆ' ಎಂದು ತೀರ್ಪು ಹೇಳಿಬಿಡುತ್ತಿದ್ದಾರೆ. ಅಂಥವರು ತಮ್ಮ ಮನಸ್ಸು ಎಷ್ಟು 'ಆರ್ಯ' ಎಂಬುದನ್ನು ಮತ್ತೊಮ್ಮೆ ಚಿಂತಿಸುವುದು ಒಳಿತು.

**ಕವಿಃ ಕರೋತಿ ಕಾವ್ಯಾನಿ ರಸಂ ಜಾನಾತಿ ಪಂಡಿತಃ |**
**ತರುಃ ಸೃಜತಿ ಪುಷ್ಪಾಣಿ ಮರುದ್ ವಹತಿ ಸೌರಭಮ್ ||** || ೨೩ ||

— ಸುಭಾಷಿತಮಂಜರಿ

''ಕವಿಯು ಕಾವ್ಯಗಳನ್ನು ರಚಿಸುತ್ತಾನೆ. ಪಂಡಿತನು ಅದರ ರಸವನ್ನು ಸವಿಯುತ್ತಾನೆ. ಮರವು ಹೂಗಳನ್ನು ಬಿಡುತ್ತದೆ. ಗಾಳಿ ಹೂಗಳ ಸುಗಂಧವನ್ನು ಒಯ್ಯುತ್ತದೆ.''

ಕಾವ್ಯರಚನೆ ಸುಲಭವಲ್ಲ. ಬರೆದದ್ದೆಲ್ಲ ಕವಿತೆಯಲ್ಲ. ಕವಿಗೆ ಆಳವಾದ ಲೋಕಾನುಭವ ಬೇಕು. ಅವನು ಜನರ ಹೃದಯದ ಮಿಡಿತವನ್ನರಿತಿರಬೇಕು. ಊಹಾಪೋಹ ಶಕ್ತಿ ಬೇಕು. ಹಲವಾರು ಶಾಸ್ತ್ರಗಳ ಪರಿಚಯವೂ, ಎಲ್ಲಕ್ಕೂ ಮಿಗಿಲಾಗಿ ಪ್ರತಿಭೆಯೂ ಆವಶ್ಯಕ. ಶಬ್ದಗಳ ಮೇಲೆ ಪ್ರಭುತ್ವ ಕವಿಗೆ

ಅನಿವಾರ್ಯ. ಕವಿಯ ಕಷ್ಟವನ್ನು ಕವಿಯೊಬ್ಬನೇ ಬಲ್ಲ. ಅವನ ಕಷ್ಟದ ಫಲವನ್ನುಂಡು ಆನಂದಿಸತಕ್ಕವನು ಇನ್ನೊಬ್ಬ! ಚಳಿಗಾಳಿ ಬಿಸಿಲಿಗೆ ತಲೆಯೊಡ್ಡಿ ಪ್ರತಿಮಾಯೋಗದಲ್ಲಿ ನಿಂತು ಮರವು ಸೌರಭವನ್ನು ಬೀರುವ ಹೂಗಳನ್ನರಳಿಸುತ್ತದೆ. ಆದರ ಸೌರಭವನ್ನು ಹೊತ್ತುಕೊಂಡೋಡುತ್ತದೆ ಗಾಳಿ!

ಬೇಕು–ಬೇಡಗಳು ನೀತಿಯೆಂಬ ನಾಣ್ಯದ ಎರಡು ಮುಖ. ನಮ್ಮ ಕರ್ತವ್ಯ ನಾವು ಮಾಡತಕ್ಕದ್ದು ಸರಿ. ಫಲವು ನಮಗೇ ದೊರೆಯಲೆಂಬ ಲೋಭ ಸರಿಯಲ್ಲ. ಅದು ಪರರಿಗೆ ದೊರಕಿಬಿಡುವುದೆಂಬ ಕೊರಗು ತರವಲ್ಲ. ಒಬ್ಬನ ಸುಖ ಇನ್ನೊಬ್ಬನ ಶ್ರಮದಿಂದ ಬಂದದ್ದೆನ್ನುವುದು ಲೋಕಸಿದ್ಧವಾಗಿದೆ.

ಉಣ್ಣುವವರೆಲ್ಲ ರೈತರಾಗಿ ಕಾಳು ಬೆಳೆದವರಲ್ಲ. ತೊಡುವವರೆಲ್ಲ ಹತ್ತಿಯನ್ನು ಬೆಳೆದಿಲ್ಲ, ಬಟ್ಟೆಯನ್ನು ನೇಯ್ದಿಲ್ಲ. ಹಿಂದಿನವರು ನೆಟ್ಟ ಮರದ ಹಣ್ಣನ್ನು ನಾವು ತಿನ್ನುವುದಾದರೆ, ಆ ಋಣವನ್ನು ತೀರಿಸಲು ಮುಂದಿನವರಿಗಾಗಿ ಮರ ನೆಡುವುದು ನಮ್ಮ ಕರ್ತವ್ಯವೇ ಆಯಿತು. ಕಡಲಿಂದ ನೀರನ್ನು ಹೊತ್ತು ಮೋಡ ತಂದು ಮಳೆ ಸುರಿಸುವುದು ತನಗಾಗಿ ಅಲ್ಲ. ಪರಿಸರವನ್ನು ಸ್ವಚ್ಛಗೊಳಿಸುತ್ತ ಬಿಡುವಿಲ್ಲದೆ ಬೀಸುವ ಗಾಳಿಗೆ ಸ್ವಂತ ಪ್ರಯೋಜನವಿಲ್ಲ.

ಪರೋಪಕಾರದ ದುರ್ಲಾಭವನ್ನು ಪಡೆಯತಕ್ಕವನು ಪರೋಪಜೀವಿ. ಮರಗಳ ಮೇಲಿನ ಬಂದಳಿಕೆಯಂತೆ, ಪಶುಗಳ ಮೈಯಲ್ಲಿರುವ ಉಣಗಿನಂತೆ (ಉಣ್ಣಿ), ತಲೆಯಲ್ಲಿ ಇರುವ ಹೇನಿನಂತೆ ತಾನು ದುಡಿಯದೆ ಇನ್ನೊಬ್ಬರ ಅನ್ನವನ್ನು ಕಿತ್ತುಕೊಳ್ಳತಕ್ಕವನು ಇವನು. ಈ ಪರೋಪಜೀವಿ ಬಡವರಿಂದ ದುಡಿಸಿ ತಾನು ಶ್ರೀಮಂತನಾಗುತ್ತಾನೆ. ಪ್ರಜೆಗಳನ್ನು ದಣಿಸಿ ರಾಜಕೀಯ ಸೂತ್ರಧಾರನು ಸುಪ್ಪತ್ತಿಗೆಯಲ್ಲಿ ಕುಳಿತಿರುತ್ತಾನೆ. ಮಹಾತ್ಮಗಾಂಧಿಯಂಥವರು ಪರೋಪಕಾರಿಗಳು. ರಾಜಕೀಯ ತಾಂತ್ರಿಕರು ಪರೋಪಜೀವಿಗಳು. ಒಂದು ಬೇಕು, ಇನ್ನೊಂದು ಬೇಡ; ಈ ಬೇಕು–ಬೇಡಗಳ ಸೆಣಸಾಟವೇ ಲೋಕಸ್ವಭಾವ.

ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯನಿಗ್ರಹಃ |
ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮಲಕ್ಷಣಮ್ || || ೨೪ ||

-- ಮನುಸ್ಮೃತಿ, ೬೯೨

"ಧೃತಿ, ತಾಳ್ಮೆ, ಮನೋವಿಕಾರದ ನಿಗ್ರಹ, ಅಸ್ತೇಯ, ಶುಚಿತ್ವ, ಇಂದ್ರಿಯನಿಗ್ರಹ, ಶಾಸ್ತ್ರಜ್ಞಾನ, ಅಧ್ಯಾತ್ಮವಿಚಾರ, ಸತ್ಯ, ಅಕ್ರೋಧ -- ಹೀಗೆ ಧರ್ಮದ ಸ್ವರೂಪ ಹತ್ತು ವಿಧ."

ರಾಗದ್ವೇಷಗಳಿಲ್ಲದಿರುವ ವಿದ್ವಾಂಸರಾದ ಸಜ್ಜನರು ಹೃತ್ಪೂರ್ವಕವಾಗಿ ಯಾವುದನ್ನು ಒಪ್ಪಿದ್ದಾರೋ ಅದು ಧರ್ಮವೆಂದು ಮನು ಮಹಾಶಯನು ತಿಳಿಸಿ, ಅದರ ಹತ್ತು ಮುಖಗಳನ್ನು ಮೇಲ್ಕಂಡ ಶ್ಲೋಕದಲ್ಲಿ ಹೇಳಿದ್ದಾನೆ. ಧೃತಿ ಎಂದರೆ ಸಂತೋಷ, ತೃಪ್ತಿ. ಆಶಾಪಾಶವು ಎಳೆದ ಕಡೆಗೆ ಓಡದೆ, ಇದ್ದುದರಲ್ಲಿ ಮನಃಶಾಂತಿಯನ್ನು ಪಡೆಯುವುದು ಧೃತಿ. ಸ್ತೇಯವೆಂದರೆ ಕಳ್ಳತನ ಮಾತ್ರವಲ್ಲ; ಲಂಚ ವಂಚನೆಗಳಿಂದ, ಸುಳ್ಳಿನ ವ್ಯಾಪಾರದಿಂದ, ಅನ್ಯಾಯವಾಗಿ ಸಂಪಾದಿಸುವುದೆಲ್ಲ ಸ್ತೇಯವೇ. ಅದನ್ನು ತೊರೆಯುವುದು ಅಸ್ತೇಯ. ಮನಸ್ಸು, ಮಾತು, ದೇಹ – ಈ ಮೂರರ ಶುದ್ಧಿಯೇ ಶೌಚ. ಕೆಟ್ಟದ್ದನ್ನು ಕಾಣುವ, ಕೇಳುವ, ತಿನ್ನುವ ಹಂಬಲವನ್ನು ತೊರೆಯುವುದು ಇಂದ್ರಿಯನಿಗ್ರಹ. ಯಾವುದಾದರೊಂದು ಶಾಸ್ತ್ರದಲ್ಲಿ ಪರಿಚಯ, ಅಧ್ಯಾತ್ಮವಿಚಾರದಲ್ಲಿ ಕುತೂಹಲ, ಸತ್ಯವನ್ನೇ ನುಡಿಯುವುದು, ಸಿಟ್ಟಿನ ಸಂದರ್ಭದಲ್ಲಿಯೂ ಉದ್ವೇಗವನ್ನು ತಡೆಹಿಡಿಯುವುದು – ಇವೆಲ್ಲವೂ ಧರ್ಮದ ಸ್ವರೂಪಗಳೆಂಬುದು ಮಹಾನುಭಾವನಾದ ಮನು ಕಲಿಸಿದ ಪಾಠ.

ಇವೆಲ್ಲ ಸಾಮಾನ್ಯಧರ್ಮಗಳು. ಮನುಷ್ಯನಿಗೆ ಮನುಷ್ಯತ್ವವನ್ನು ತಂದುಕೊಡುವ ಲಕ್ಷಣಗಳು. ಜಾತಿ ಕುಲ ಭೇದವಿಲ್ಲದೆ ಜಗತ್ತಿನ ಎಲ್ಲ ಮಾನವರೂ ಸಾಧಿಸಬೇಕಾದ ಗುಣಗಳು. ಈ ಗುಣಗಳಿದ್ದರೆ ಆತನು ಸುಸಂಸ್ಕೃತನೆಂದು ನಮ್ಮ ಹಿರಿಯರ ನಂಬಿಕೆ. ಈ ಗುಣಗಳಿಂದ ಮೊದಲು ಮಾನವನೆನಿಸಿಕೊಂಡಮೇಲೆ ವಿಶೇಷ ಧರ್ಮಗಳನ್ನು ಪಾಲಿಸಬಹುದು. ಈ ಸಾಮಾನ್ಯಧರ್ಮವು ಯಾರಿಗಿಲ್ಲವೋ ಅವನು ವಿಶೇಷಧರ್ಮಕ್ಕೆ ಅನಧಿಕಾರಿ.

ಭರತನು ಶ್ರೀರಾಮನನ್ನು ಅಯೋಧ್ಯೆಗೆ ಹಿಂದಿರುಗುವಂತೆ ಕೇಳಲು ಅರಣ್ಯಕ್ಕೆ ಹೋದಾಗ, ಶ್ರೀರಾಮನು ರಾಜಧರ್ಮದ ವಿಷಯವಾಗಿ ಹಿತವಚನಗಳನ್ನಾಡುತ್ತಾನೆ. ಭರತನಾದರೋ, ತಾನು ಅಣ್ಣನ ರಾಜ್ಯವನ್ನಪಹರಿಸಿ ಧರ್ಮಭ್ರಷ್ಟನಾಗಿರುವೆನೆಂದು ನಿಷ್ಕಾರಣವಾಗಿ ಪರಿತಪಿಸುತ್ತಿದ್ದಾನೆ. ಅವನು ಹೇಳುವ ಮಾತಿದು : "ಕಿಂ ಮೇ ಧರ್ಮಾದ್ ವಿಹೀನಸ್ಯ ರಾಜಧರ್ಮಃ ಕರಿಷ್ಯತಿ ?" ಸಾಮಾನ್ಯಧರ್ಮದಿಂದ ಭ್ರಷ್ಟನಾದ ನನಗೆ ರಾಜಧರ್ಮದಿಂದ ಪ್ರಯೋಜನವೇನು—ಎಂದು ಅವನ ತಳಮಳ.

"ರಾಜಕೀಯದಲ್ಲಿ ಯಾವುದು ಸರಿ, ಯಾವುದು ತಪ್ಪು?" ಎಂದು ನವಭಾರತದ ಒಬ್ಬ ನಿಪುಣ ರಾಜಕಾರಣಿ ಉದ್ಗರಿಸಿದರಂತೆ. ಇದು ಭರತನಿಲ್ಲದ ಭಾರತ. ಈಗಿರುವುದು ಸಮುದ್ರದ ಭರತ !

**ಕಾವ್ಯಂ ಸುಧಾ ರಸಜ್ಞಾನಾಂ ಕಾಮಿನಾಂ ಕಾಮಿನೀ ಸುಧಾ |**
**ಧನಂ ಸುಧಾ ಸಲೋಭಾನಾಂ ಶಾಂತಿಃ ಸಂನ್ಯಾಸಿನಾಂ ಸುಧಾ || || ೨೫ ||**

— ರಸಗಂಗಾಧರ

"ರಸಿಕರಿಗೆ ಕಾವ್ಯವೇ ಸುಧೆ, ಅಮೃತ. ಕಾಮಿಗಳಿಗೆ ಕಾಮಿನಿ ಅಮೃತ. ಲೋಭಿಗಳಿಗೆ ಹಣ ಅಮೃತ. ಸಂನ್ಯಾಸಿಗಳಿಗೆ ಶಾಂತಿ ಅಮೃತ."

ಯಾವುದನ್ನು ಕುಡಿದು ದೇವತೆಗಳು ಅಮರರಾದರೋ ಅದು ಅಮೃತ. ಅದು ಶ್ರೇಷ್ಠವಾದದ್ದೆಂಬ ಕಾರಣದಿಂದ ಅತ್ಯಂತ ರುಚಿಕರವಾದ, ಮನಸ್ಸಿಗೆ ಆಪ್ಯಾಯನಕರವಾದ ವಸ್ತುವನ್ನು ಅಮೃತವೆನ್ನುವುದು ರೂಢಿಗೆ ಬಂದಿತು. ಹಾಲಿಗೂ ಅಮೃತವೆಂದು ಹೆಸರಿದೆ. ಯಾವುದು ಹೃದಯಕ್ಕೆ ಪರಮಪ್ರೀತಿಯನ್ನುಂಟುಮಾಡುವುದೋ ಅದು ಅಮೃತ. ರಸಜ್ಞರಾದ ಸಹೃದಯರಿಗೆ ರಸಮಯವಾದ ಕಾವ್ಯ ಅಮೃತವಾಗುತ್ತದೆ. ಆದ್ದರಿಂದ ಒಬ್ಬ ರಸಿಕನು 'ಕಾದಂಬರೀ–ರಸಜ್ಞಾನಾಮ್ ಆಹಾರೋऽಪಿ ನ ರೋಚತೇ' ಎಂದು ಬಾಣಭಟ್ಟನ ಕಾದಂಬರಿಯನ್ನು ಹೊಗಳಿದ್ದಾನೆ. ಕಾದಂಬರಿಯೆಂದರೆ ಮದ್ಯವೆಂದೂ ಅರ್ಥವಿದೆ. ಕುಡುಕರಿಗೆ ಅದೇ ಅಮೃತವೆನಿಸಬಹುದು.

ರಸಿಕನಿಗೆ ಬಾಣನ ಕಾದಂಬರಿ, ಕುಡುಕನಿಗೆ ಮದ್ಯವಿದ್ದಂತೆ. ಕಾಮಿಗೆ ಕಾಮಿನಿ ಸುಧೆಯೆಂಬುದನ್ನು ಹೇಳಬೇಕಾಗಿಲ್ಲ. ಅದು ಉಳಿದುದಕ್ಕೆ ದೃಷ್ಟಾಂತ. ಲೋಭಿಗೆ ಹಣವೇ ಅಮೃತ. ಅವನು ಹಣದಿಂದ ಭೋಗಸಾಮಗ್ರಿಯನ್ನು ಕೊಳ್ಳುವುದಿಲ್ಲ. ಹಣದ ರಾಶಿಯನ್ನು ನೋಡಿ, ಕೈಯಿಂದ ಅದನ್ನು ಮುಟ್ಟಿ ಅಷ್ಟರಿಂದಲೇ ಆನಂದದಲ್ಲಿ ಮುಳುಗುತ್ತಾನೆ !

ಸಂನ್ಯಾಸಿಗೆ ಶಾಂತಿ ಅಮೃತ. 'ಶಾಂತಿಸಮೃದ್ಧಮಮೃತಮ್' ಎನ್ನುತ್ತದೆ ಉಪನಿಷದ್ವಾಣಿ. ಶಾಂತಿಲಾಭಕ್ಕಾಗಿ ಆತನು ಲೋಕಸುಖಗಳನ್ನು ತೊರೆಯುತ್ತಾನೆ. "ಸ ಏವ ಸರ್ವಶಾಸ್ತ್ರಜ್ಞಃ ಯಸ್ಯ ಶಾಂತಂ ಮನಃ ಸದಾ" – ಯಾವಾತನ ಮನಸ್ಸು ಸದಾ ಶಾಂತವಾಗಿರುವುದೋ ಅವನೇ ಸರ್ವ ಶಾಸ್ತ್ರಜ್ಞ. ಶಾಂತಿಯನ್ನು ಪಡೆಯದ ಸಂನ್ಯಾಸಿ ಜೀವನದಲ್ಲಿ ಗುರಿತಪ್ಪಿದವನೇ ಸರಿ. ಬ್ರಹ್ಮವೇ ಶಾಂತಿ – ಶಾಂತ. "ಬ್ರಾಹ್ಮಣೇಷ್ವಮೃತಗ್ಂ ಹಿತಂ" – ಬ್ರಹ್ಮಜ್ಞಾನಿಗಳಲ್ಲಿ ಅಮೃತವಿದೆ. ಇದು "ಋಷಿಭಿಃ ಸಂಭೃತೋ ರಸಃ" – ಋಷಿಗಳಿಂದ ಸಂಪಾದಿತವಾದ ರಸ.

ಸಂನ್ಯಾಸಿಯು ಬ್ರಹ್ಮರಸದಿಂದ ಶಾಂತಿಯನ್ನು ಗಳಿಸಿದರೆ ರಸಿಕನು ಕಾವ್ಯರಸದಿಂದ ಗಳಿಸುತ್ತಾನೆ. ಕಾವ್ಯರಸವು ಬ್ರಹ್ಮಾನಂದ–ಸೋದರವೆಂದು ಹಿರಿಯರ ಅಭಿಪ್ರಾಯ. ವಿವೇಕಿಯಾದ ಸಂಸಾರಿಗೆ ಕಾವ್ಯವು ಅಮೃತ. ಸಂನ್ಯಾಸಿಗೆ ಬ್ರಹ್ಮಜ್ಞಾನ. ಕಾಮಿನಿ, ಧನ ಮೊದಲಾದವು ಉಭಯ ಭ್ರಷ್ಟರಾದ ತ್ರಿಶಂಕುಗಳಿಗೆ. ಹೀಗೆಯೇ ಮದ್ಯವು ಕುಡುಕರಿಗೂ ಅಧಿಕಾರವು ಅಧಿಕಾರಶಾಹಿಗಳಿಗೂ ಜಗಳವು ಕಲಹಪ್ರಿಯರಿಗೂ ರಾಜಕೀಯ ಚೆಲ್ಲಾಟವು ಸ್ವಾರ್ಥಿಗೂ ಅಮೃತ.

ಜಗತಿ ನರಜನ್ಮ ತಸ್ಮಿನ್ ವೈದುಷ್ಯಂ ತತ್ರ ಸತ್ಕವಿತಾ |
ಕವಿತಾಯಾಂ ಪರಿಣಾಮೋ ದುಷ್ಪ್ರಾಪಃ ಪುಣ್ಯಹೀನೇನ || || ೨೬ ||

– ರಸಗಂಗಾಧರ

"ಈ ಜಗತ್ತಿನಲ್ಲಿ ಮನುಷ್ಯಜನ್ಮ, ಅದರಲ್ಲಿಯೂ ಪಾಂಡಿತ್ಯ, ಅದರಲ್ಲಿಯೂ ಒಳ್ಳೆಯ ಕವಿತೆಯನ್ನು ರಚಿಸುವ ಶಕ್ತಿ, ಕವಿತೆಯಲ್ಲಿಯೂ ಪರಿಣತಿ — ಇವು ಪುಣ್ಯಹೀನನಿಗೆ ದೊರೆಯುವುದಿಲ್ಲ."

'ಜಂತೂನಾಂ ನರಜನ್ಮ ದುರ್ಲಭಂ' ಎಂದು ಆಸ್ತಿಕರ ನಂಬಿಕೆ. ಅದು ಪುಣ್ಯದಿಂದ ಮಾತ್ರ ಲಭ್ಯ. ಜನ್ಮಾಂತರವನ್ನೊಪ್ಪದವರೂ ತಾವು ಮನುಷ್ಯರಾಗಿರುವುದು ಭಾಗ್ಯವೆಂದು ತಿಳಿದಿದ್ದಾರೆ. ಮನುಷ್ಯರಲ್ಲಿಯೂ ವಿದ್ವಾಂಸನು ಶ್ರೇಷ್ಠನೆಂಬುದು ಪ್ರಾಯಶಃ ಸರ್ವಸಂಮತ. ವಿದ್ವಾಂಸನಿಗೂ ಒಳ್ಳೆಯ ಕವಿತಾಶಕ್ತಿ ದುರ್ಲಭ. ಒಳ್ಳೆಯ ಕವಿತೆಯೆಂದರೇನು? ಯಾವುದು ನಾನಾಭಾವಗಳನ್ನು ಕೆಣಕಿ ಮನಸ್ಸನ್ನು ತುಮುಲದಲ್ಲಿ ತೊಡಗಿಸಿದರೂ, ಬಾಳಿಗೊಂದು ದಾರಿದೀಪವಾಗಿ, ಕಡೆಯಲ್ಲಿ ಆನಂದವೆಂಬ ಶಾಂತಿಯ ಕಡೆಗೆ ಕರೆದೊಯ್ಯುವುದೋ ಅದು. ಅದನ್ನು ಸಮರ್ಥವಾಗಿ ನಿರೂಪಿಸಿ ಓದುಗನ ಮನಸ್ಸನ್ನು ಸೂರೆಗೊಳ್ಳುವುದು ಕವಿತಾ ಪರಿಣತಿ.

ಮನುಷ್ಯನಾಗಿದ್ದರೆ ಪಾಂಡಿತ್ಯ, ಪಾಂಡಿತ್ಯವಿದ್ದರೆ ಸತ್ಕವಿತೆ. ಪಾಂಡಿತ್ಯವಿಲ್ಲದೆ ಒಬ್ಬನು ಕವಿಯಾಗಬಲ್ಲನೆಂದು ಹಿಂದಿನ ಕಾಲದಲ್ಲಿ ಯಾರೂ ಒಪ್ಪಿರಲಿಲ್ಲ. ಮಗು ಅಕ್ಷರ ಕಲಿತೊಡನೆ ಗೋಡೆಯ ತುಂಬ ಗೀಚುವಂತೆ, ಬರವಣಿಗೆ ಕಲಿತೊಡನೆ ಕವಿತೆ ರಚಿಸುವುದು ಈಗಿನವರಿಗೆ ಸಾಧ್ಯವಾಗಿದೆ; ಪ್ರಸಿದ್ಧಿಗೆ ಏರಲು, ಕವಿಯಾಗುವುದು ಈಗ ಸುಲಭೋಪಾಯವಾಗಿದೆ.

ಸುಪ್ರಸಿದ್ಧ ಆಲಂಕಾರಿಕನಾದ ಭಾಮಹ "ಕವಿತೆಯನ್ನು ಬರೆಯದಿದ್ದರೆ ಪಾಪವೇನೂ ಬರುವುದಿಲ್ಲ ! ಆಯುಸ್ಸು ಕಡಮೆಯಾಗಿ ಸಾಯುವುದೂ ಇಲ್ಲ ! ರಾಜನು ದಂಡಿಸುವುದೂ ಇಲ್ಲ !" ಎಂದು ಕುಕವಿಗಳನ್ನು ತರಾಟೆಗೆ ತೆಗೆದುಕೊಂಡಿದ್ದಾನೆ. ಯೋಗ್ಯತೆ ಇಲ್ಲದಿದ್ದರೂ ಕವಿತೆಯನ್ನು ಬರೆದು ಕೀರ್ತಿಯನ್ನು ಗಳಿಸಬೇಕೆಂಬ ಹಂಬಲ ಜನರಿಗೆ ಯಾವಾಗಲೂ ಇದ್ದೇ ಇದೆ. ಒಬ್ಬ ಅಜ್ಞಾತನಾದ ವಿಚಾರವಾದಿ "ಮಿತ್ರನೆ, ಕಾವ್ಯವನ್ನು ಬರೆಯಲು ಹೊರಟಿದ್ದೀಯಲ್ಲ, ನಿನಗೇನಾದರೂ ರೋಗ ಬಂದಿದೆಯೋ ? ಸಾಮಾನ್ಯವಾಗಿ ವಾತರೋಗಿಗಳಿಗೆ ಕಾವ್ಯವನ್ನು ಬರೆಯುವ ಇಚ್ಛೆ ಬರುತ್ತದೆ !

ಹಾಗಿದ್ದರೆ ವೈದ್ಯರನ್ನು ಕೇಳಿ ಸರಿಯಾದ ಔಷಧವನ್ನು ತೆಗೆದುಕೋ. ಕಾವ್ಯವನ್ನು ಬರೆದರೆ ನಿನ್ನ ರೋಗ ಗುಣವಾಗುವುದಿಲ್ಲ !'' ಎಂದಿದ್ದಾನೆ.

ಪಾಂಡಿತ್ಯವೂ ಪ್ರತಿಭೆಯೂ ಇಲ್ಲದೆ ಬರೆದ ಕಾವ್ಯ, ಶಬ್ದದ ದೊಂಬರಾಟ. ಅದು ಅಂತಃಸಾರವಿಲ್ಲದ ಶುಷ್ಕವಾದ ಕಸ. ಸತ್ಕವಿತೆಯನ್ನು ಪರೀಕ್ಷಿಸಿ ಮೌಲ್ಯವನ್ನು ಕಟ್ಟುವ ಒರೆಗಲ್ಲು ಯಾವುದು? ಸರ್ಕಾರವೂ ಅಲ್ಲ, ಸಾಹಿತ್ಯ ಅಕಾಡೆಮಿಯೂ ಅಲ್ಲ. ಕಾಲವೇ ನಿಜವಾದ ಒರೆಗಲ್ಲು. ಕೃತಕವಾದ ಯಾವ ಬೆಂಬಲವೂ ಇಲ್ಲದೆ ಯಾವುದು ಚಿರಕಾಲ ನಿಲ್ಲುವುದೋ, ಜನಮನವನ್ನೊಲಿಸಿ ತನ್ನ ಅಂತಃಸತ್ತ್ವದಿಂದ ಬಾಳುವುದೋ ಅದು ಉತ್ತಮ ಕಾವ್ಯ.

ಗೃಹಾಂತಾ ದ್ರವ್ಯಸಂಘಾತಾ ದ್ರವ್ಯಾಂತಾ ಚ ತಥಾ ಮತಿಃ |
ಅರ್ಥಾಶ್ಚಾತ್ಮೋಪಭೋಗಾಂತಾ ಭವಿಷ್ಯಂತಿ ಕಲೌ ಯುಗೇ || || ೨೭ ||

– ವಿಷ್ಣುಪುರಾಣ

''ದ್ರವ್ಯರಾಶಿಗಳು ಮನೆಯವರೆಗೆ. ಬುದ್ಧಿಯು ದ್ರವ್ಯಗಳವರೆಗೆ. ಹಣವು ತನ್ನ ಭೋಗದವರೆಗೆ. ಹೀಗೆ ಕಲಿಯುಗದಲ್ಲಿ ನಡೆಯುತ್ತದೆ.''

ದ್ರವ್ಯವೆಂದರೆ ಪ್ರಶಸ್ತವಾದ ವಸ್ತು. ಜನೋಪಯೋಗಿಯಾದ ವಸ್ತುವೆಲ್ಲ ದ್ರವ್ಯವೇ. ಆಹಾರಪದಾರ್ಥ, ಬಟ್ಟೆಬರೆ, ಕಾರ್ಖಾನೆಗಳಲ್ಲಿ ತಯಾರಾಗುವ ಯಂತ್ರ ಮೊದಲಾದ ದ್ರವ್ಯಗಳು ದೇಶಕ್ಕಾಗಿ, ಪ್ರಜೆಗಳಿಗಾಗಿ, ಜನರ ಕಲ್ಯಾಣಕ್ಕಾಗಿ – ಎಂಬುದು ನೀತಿ. ಈ ದ್ರವ್ಯಗಳು ದೇಶದ ಅಸ್ತಿತ್ವಕ್ಕೆ, ದೇಹದ ಸುಖಕ್ಕೆ ಆವಶ್ಯಕ ಸಾಮಗ್ರಿಗಳು. ಅರ್ಥ–ಕಾಮಗಳು ಇವುಗಳಿಂದ ಈಡೇರುತ್ತವೆ. ಇವೆರಡನ್ನು ಸಾಧಿಸುವುದೇ ಮನುಷ್ಯನ ಗುರಿಯಲ್ಲ. ಧರ್ಮ, ಮೋಕ್ಷಗಳೆಂಬ ಇನ್ನೆರಡು ಪುರುಷಾರ್ಥಗಳಿವೆ. ಇವುಗಳ ಸಾಧನೆ ಯೋಗ. ಅರ್ಥ–ಕಾಮಗಳ ಸಾಧನೆ ಭೋಗ. ಭೋಗದಿಂದ ಮೇಲೇರಿದಾಗ ಯೋಗ. ಅದೇ ಮಾನವನ ಮುಖ್ಯವಾದ ಗುರಿ. ಧರ್ಮದ ಮೂಲಕ, ಧರ್ಮಕ್ಕಾಗಿ

ಅರ್ಥ–ಕಾಮಗಳನ್ನು ಸಾಧಿಸಬೇಕು. ಆದ್ದರಿಂದ ಪುರುಷಾರ್ಥಗಳಲ್ಲಿ ಮೊದಲು ಧರ್ಮವನ್ನು ಗಣಿಸಿದ್ದಾರೆ.

ಧನಸಂಪಾದನೆ ತನ್ನ ಸುಖಕ್ಕಾಗಿ ಎಂಬುದು ನಿಜವಾದರೂ ಪೂರ್ಣಸತ್ಯವಲ್ಲ. ತಾನು ತಿನ್ನುವುದಕ್ಕಾಗಿ ಮರ ಹಣ್ಣುಬಿಡುವುದಿಲ್ಲ. ತನ್ನ ಅಲಂಕಾರಕ್ಕಾಗಿ ಪಾರಿಜಾತ ಹೂಗಳನ್ನರಳಿಸಿ ಉದುರಿಸುವುದಿಲ್ಲ. 'ತೇನ ತ್ಯಕ್ತೇನ ಭುಂಜೀಥಾಃ' – ತ್ಯಾಗದಿಂದ ಭೋಗಿಸು ಎನ್ನುತ್ತದೆ ಉಪನಿಷತ್ತು. 'ತ್ಯಾಗಾಯ ಸಂಭೃತಾರ್ಥಾನಾಂ' – ರಘುವಂಶದ ರಾಜರು ತ್ಯಾಗಕ್ಕಾಗಿ ಧನವನ್ನು ಸಂಪಾದಿಸುತ್ತಿದ್ದರು ಎನ್ನುತ್ತಾನೆ ಕಾಳಿದಾಸ. ಮೋಡ ನೀರನ್ನು ಹೊತ್ತು ಆಕಾಶದಲ್ಲಿ ಅಲೆಯುವುದು ಬಾಯಾರಿದವರ ಆಪ್ಯಾಯನಕ್ಕಾಗಿ.

ಈ ಆದರ್ಶ ಕಲಿಯುಗದಲ್ಲಿ ತಲೆಕೆಳಗಾಗುವುದೆಂದು ವಿಷ್ಣುಪುರಾಣ ಹೇಳುತ್ತದೆ. ಈಗ ಯಾವ ಉತ್ತಮದ್ರವ್ಯವಿದ್ದರೂ ಅದು ತನ್ನ ಮನೆಗೆ ಸೇರಲೆಂದೇ ಮನುಷ್ಯನ ಬಯಕೆ. ಹಿಂದೆ ರಾವಣ ಲೋಕವನ್ನು ಕೊಳ್ಳೆಹೊಡೆದು ಪುಷ್ಪಕವಿಮಾನವನ್ನು ಲಂಕೆಗೆ ಸಾಗಿಸಿದ್ದನಂತೆ. ಕಲಿಯುಗದಲ್ಲಿ ರಾವಣರ ಸಂಖ್ಯೆಯೇ ಅಧಿಕ. ಎಲ್ಲರೂ ನಾದಿರ್‌ಷಹನ ಪ್ರತಿರೂಪದವರೇ. ಹೇಳುವುದು ನಮ್ಮ ರಾಷ್ಟ್ರಕ್ಕಾಗಿ ಎಂದು. ಇವರಿಗೆ ನಮ್ಮ ರಾಷ್ಟ್ರವೆಂದರೆ 'ನನ್ನ ಮನೆ' ಎಂದರ್ಥ. ಪ್ರತಿಯೊಬ್ಬನ ಬುದ್ಧಿಯೂ ಈ ದಿಸೆಯಲ್ಲಿಯೇ ಓಡುತ್ತದೆ. ಬುದ್ಧಿಯ ಓಟ ದ್ರವ್ಯಸಂಪಾದನೆಯವರೆಗೆ. ಯಾರ ಮಾತಿನಲ್ಲಿಯೂ ಹಣದ ಲೆಕ್ಕಾಚಾರವೇ ಕಂಡುಬರುತ್ತದೆ. ಏನು ಮಾಡಿದರೆ ಹಣ ಬಂದೀತು, ಯಾವ ವಿದ್ಯೆಯಿಂದ ಎಷ್ಟು ಹಣವನ್ನು ಗಳಿಸಿಯೇನು–ಎಂದು ಗುಣಿಸುತ್ತಿರುವುದೇ ಬುದ್ಧಿಯ ಪರಮ ಗುರಿ. ದೇಶಕಲ್ಯಾಣವನ್ನು, ಆತ್ಮಕಲ್ಯಾಣವನ್ನು ಚಿಂತಿಸತಕ್ಕವರು ವಿರಳ. ಹಣವು ಆತ್ಮಕಲ್ಯಾಣಕ್ಕೆ ಸಾಧನವೇ ಹೊರತು ಸಾಧ್ಯವಲ್ಲ. ಲೇಖನಿಯೊಂದು ಸಾಧನ. ಬರವಣಿಗೆ ಸಾಧ್ಯ. ಲೇಖನಿಯನ್ನು ತಂದಿರಿಸಿದರೆ ಉದ್ದೇಶ ಮುಗಿಯಲಿಲ್ಲ. ಆದರಿಂದ ಬರೆಯಬೇಕು: ಆಗ ಲೇಖನಿ ಸಾರ್ಥಕ.

ಆರೋಗ್ಯಮಾನೃಣ್ಯಮವಿಪ್ರವಾಸಃ
ಸದ್ಭಿರ್ಮನುಷ್ಯೈಃ ಸಹ ಸಂಪ್ರಯೋಗಃ |
ಸ್ವಪ್ರತ್ಯಯಾ ವೃತ್ತಿರಭೀತವಾಸಃ
ಷಡ್ ಜೀವಲೋಕಸ್ಯ ಸುಖಾನಿ ರಾಜನ್ || || ೨೮ ||

– ಮಹಾಭಾರತ, ಉದ್ಯೋಗಪರ್ವ, ೩೩-೮೯

"ಆರೋಗ್ಯ, ಸಾಲವಿಲ್ಲದಿರುವುದು, ಪ್ರವಾಸವಿಲ್ಲದಿರುವುದು, ಸಜ್ಜನರೊಡನೆ ವ್ಯವಹಾರ, ಸ್ವತಂತ್ರವಾದ ಜೀವನಮಾರ್ಗ, ನಿರ್ಭಯವಾದ ಸ್ಥಳದಲ್ಲಿ ವಾಸ – ಈ ಆರು, ಎಲೈ ಧೃತರಾಷ್ಟ್ರ, ಜನರಿಗೆ ಸುಖದಾಯಕವಾದವುಗಳು."

ಬುದ್ಧಿಶಾಲಿಯೆನಿಸಿದ ವಿದುರನು ಹೇಳಿದ ಮಾತಿದು. ಸುಖದ ದಾರಿ ಯಾವುದೆಂದು ಕೇಳಿದರೆ ಇಂದಿನ ಜನತೆ 'ಹಣ' ಎಂದು ಒಕ್ಕೊರಲಿನಿಂದ ಉತ್ತರಕೊಟ್ಟೀತು ! ವಿದುರನ ಪಟ್ಟಿಯಲ್ಲಿ ಅದರ ಹೆಸರೇ ಇಲ್ಲ. ಅವನು ಆರೋಗ್ಯಕ್ಕೆ ಪ್ರಥಮ ಸ್ಥಾನವನ್ನು ಕೊಟ್ಟಿದ್ದಾನೆ. ರಕ್ತದ ಒತ್ತಡ, ಸಕ್ಕರೆ ರೋಗ, ನಿದ್ರಾಶೂನ್ಯತೆ, ಅಜೀರ್ಣಾದಿ ರೋಗಗಳಿಂದ ನರಳುವ ಶ್ರೀಮತನಿಗೆ ಹಣ ಯಾವ ಸುಖ ಕೊಟ್ಟೀತು ? ಆರೋಗ್ಯವು ಅಂತರಂಗಭಾಗ್ಯ. ಸಾಲ ಮಾಡದಿರುವುದು – ಮೊದಲಾದ್ದು ಬಹಿರಂಗ ಭಾಗ್ಯ. ಪ್ರವಾಸವು ಮಹಾ ಭಾರತದ ಕಾಲದಲ್ಲಿಯೂ ದುಃಖಕಾರಿ. ಈಗ ಪ್ರಯಾಣ ಸೌಕರ್ಯಗಳಿದ್ದರೂ ಪ್ರವಾಸದ ದುಃಖಗಳೇನೂ ತಪ್ಪಲಿಲ್ಲ. ಸಜ್ಜನರ ಸಹವಾಸ, ಅವರೊಡನೆ ವ್ಯವಹಾರ ಮನಸ್ಸಿಗೆ ನೆಮ್ಮದಿಯನ್ನು ತರುತ್ತದೆ. ಜೊತೆಗಾರರು ತರಲೆಯವ ರಾದರೆ ನಾನಾ ಸಂಕಷ್ಟಗಳಿಗೆ ಆಹ್ವಾನವಿತ್ತಂತೆಯೇ. 'ಸ್ವಪ್ರತ್ಯಯಾ ವೃತ್ತಿಃ' –ನಮ್ಮ ಜೀವಿಕೆ ಪರಾಧೀನವಾಗಿ ಇರಬಾರದು. 'ಹಂಗಿನರಮನೆಗಿಂತ ಅಂಗಣದ ಗುಡಿಲೇಸು.' 'ಸರ್ವಂ ಪರವಶಂ ದುಃಖಂ.' ಸ್ವತಂತ್ರವಾದ ಉದ್ಯೋಗವಾದರೂ ಮನಸ್ಸಿಗೆ ಹಿಡಿಸುವಂತಹದಾಗಿರಬೇಕು. ಈ ಅರ್ಥವನ್ನೊಳಗೊಂಡಿದೆ, 'ಸ್ವಪ್ರತ್ಯಯಾ' ಎಂಬ ಶಬ್ದ. 'ಅಭೀತವಾಸ'ವು ಎಣಿಕೆಯಲ್ಲಿ ಕಡೆಯದಾದರೂ ಯೋಗ್ಯತೆಯಲ್ಲಿ ಕಡೆಯದಲ್ಲ. ಮೇಲ್ಕಂಡ ಎಲ್ಲ ಸುಖದ ದಾರಿಗಳಿದ್ದರೂ, ಯಾವ ಪರಿಸ್ಥಿತಿಯಲ್ಲಿ ಏನೋ ಎಂಬ

ಹೆದರಿಕೆಯ ಸ್ಥಿತಿ ಇದ್ದರೆ ಸುಖವೆಲ್ಲಿ ? ಕಳ್ಳಕಾಕರ ಕಾಟ, ಪುಂಡರ ಹಾವಳಿ, ಉನ್ಮತ್ತ ಅಧಿಕಾರಿಗಳ ಹಿಂಸೆ ಇದ್ದರೆ ನೆಮ್ಮದಿ ಎಲ್ಲಿ ? ಸುಖದ ಹಾದಿಯ ಮಾರ್ಮಿಕ ವಿವೇಚನೆ ಇದು. ವಿದುರನು ರಾಜನಿಗೆ ಹೇಳಿದ ಉಪದೇಶವಿದು: "ಧೃತರಾಷ್ಟ್ರ, ಪ್ರಜೆಗಳ ನೆಮ್ಮದಿಗೆ ಬೇಕಾದವು ಈ ಆರು. ಅವರ ಸುಖ ನಿನ್ನ ವಿಲಾಸ ವೈಭವಗಳಿಂದಲ್ಲ, ಬಲಸಂವರ್ಧನೆಯಿಂದಲ್ಲ. ಪಾಂಡವರೊಡನೆ ಯುದ್ಧ ಹೂಡುವುದರಿಂದಂತೂ ಅಲ್ಲವೇ ಅಲ್ಲ. ರಾಜನ ಕರ್ತವ್ಯ ಪ್ರಜಾರಂಜನೆ. ಈ ರಾಜಧರ್ಮ ನಿನ್ನ ರಾಜ್ಯದಲ್ಲಿ ನೆಲಸುವಂತೆ ಮೊದಲು ಮಾಡು."

**ನ ಕೇನಚಿದ್ ಯಾಚಿತವ್ಯಃ ಕಶ್ಚಿತ್ ಕಿಂಚಿದನಾಪದಿ |**
**ಇತಿ ವ್ಯವಸ್ಥಾ ಭೂತಾನಾಂ ಪುರಸ್ತಾನ್ಮನುನಾ ಕೃತಾ || || ೨೯ ||**

– ಮಹಾಭಾರತ, ಶಾಂತಿಪರ್ವ, ೮೮-೧೬

"ಆಪತ್ಕಾಲದ ಹೊರತಾಗಿ ಉಳಿದ ಸಮಯದಲ್ಲಿ ಯಾವನೂ ಯಾರೊಡನೆಯೂ ಏನನ್ನೂ ಬೇಡಕೂಡದು. ಹೀಗೆಂದು ಮನು ಹಿಂದೆಯೇ ಜನರಿಗಾಗಿ ಧರ್ಮದ ವ್ಯವಸ್ಥೆಯನ್ನು ಮಾಡಿದ್ದಾನೆ."

ಬೆಂಗಳೂರು ಭಿಕ್ಷುಕರ ನಗರವಾಗಿದೆಯೆಂದು ಹೇಳುತ್ತಲೇ ಇದ್ದಾರೆ. ಬೆಂಗಳೂರು ಮಾತ್ರವಲ್ಲ, ಭಾರತದ ಎಲ್ಲ ನಗರಗಳೂ ಈ ಪರಿಸ್ಥಿತಿಯಲ್ಲಿಯೇ ಇವೆ. ಭಿಕ್ಷುಕರ ಪಿಡುಗು ಹಳ್ಳಿಯನ್ನೂ ಬಿಟ್ಟಿಲ್ಲ. ಭಿಕ್ಷೆ ಬೇಡುವುದು, ಯಾಚನೆ – ಎರಡು ಒಂದೇ ಆದರೂ, ಯಾಚನೆ ಇನ್ನೂ ಹೆಚ್ಚಿನ ಅರ್ಥವನ್ನು ಒಳಗೊಂಡಿದೆ. ಅನ್ನವನ್ನೂ ಹಣವನ್ನೂ ಬೇಡುವುದು ಮಾತ್ರ ಯಾಚನೆಯಲ್ಲ, ಇನ್ನೊಬ್ಬರ ಸಹಾಯವನ್ನು ಬೇಡುವುದೂ ಯಾಚನೆಯೇ. ತನ್ನಿಂದ ಒಂದು ಕೆಲಸ ಸಾಧ್ಯವಾದಾಗ ಇನ್ನೊಬ್ಬರಿಂದ ಅದನ್ನು ಮಾಡಿಸಿಕೊಳ್ಳುವುದು ಈ ಗುಂಪಿಗೇ ಸೇರುತ್ತದೆ. ಸಮಾಜದ ಪಿಡುಗು ಇದು. ಯಾಚಿಸಿದಾಗ ಇಲ್ಲವೆನ್ನುವುದು ಸೂಕ್ಷ್ಮಸ್ವಭಾವದವರಿಗೆ ಕಷ್ಟವೆನಿಸುತ್ತದೆ.

ಪರಾವಲಂಬನೆ ಒಳ್ಳೆಯದಲ್ಲ. ಪ್ರತಿಯೊಬ್ಬನೂ ದುಡಿದು ತಿನ್ನಬೇಕು ಎಂಬುದು ಈ ನೀತಿಯ ತಿರುಳು. ಇನ್ನೊಬ್ಬನ ದುಡಿಮೆಯಿಂದ ಯಾವನೂ

ಜೀವಿಸತಕ್ಕದ್ದಲ್ಲ. ಈ ನೀತಿ ಸಮಾಜದ ಕಲ್ಯಾಣಕ್ಕೆ, ಆ ಮೂಲಕ ರಾಷ್ಟ್ರಕಲ್ಯಾಣಕ್ಕೆ ಅತ್ಯಾವಶ್ಯಕವಾದದ್ದು. ಯಾಚನೆ ಪೂರ್ಣವಾಗುವುದು ದಾನದಿಂದ. ದಾನವು ಪ್ರಶಂಸನೀಯವಾದ ಧರ್ಮಕಾರ್ಯವಾದರೂ, ಯಾಚಕನ ಅರ್ಹತೆಯೇನೆಂಬುದನ್ನು ದಾನಿ ಗಮನಿಸಬೇಕಾಗುತ್ತದೆ. ''ಕರೆದಪಾತ್ರಂಗಿತ್ತು ಪಾತ್ರನ ಪರಿಹರಿಸಲೀಯೆರಡರಿಂ ಸಂಹರಣವಹು ದಾರ್ಜಿಸಿದ ಬಹುಧನವರಸ ಕೇಳೆಂದ.''

ಗಣೇಶೋತ್ಸವ, ತಿರುಪತಿ ಯಾತ್ರೆ – ಇಂತಹ ಧರ್ಮಕಾರ್ಯಕ್ಕೆ ಧನಸಹಾಯವನ್ನು ಬೇಡುತ್ತಾರೆ. ಯಾಚನೆ ಮಾಡಿ ಪುಣ್ಯಕಾರ್ಯ ಮಾಡಬೇಕಾದ್ದೇನೂ ಇಲ್ಲ. ಯಾಚನೆಯಿಂದ ಗಳಿಸಿದ ಪಾಪಕ್ಕಿಂತ ಅವರು ಸಂಪಾದಿಸಿದ ಪುಣ್ಯ ಅತ್ಯಲ್ಪ! ''ಕೆಸರು ಬಳಿದುಕೊಂಡು ಆಮೇಲೆ ತೊಳೆಯುವುದಕ್ಕಿಂತ ಕೆಸರನ್ನು ಮುಟ್ಟದಿರುವುದೇ ಲೇಸು'', ''ಹುಲ್ಲುಕಡ್ಡಿಗಿಂತ ಹತ್ತಿ ಹಗುರ, ಹತ್ತಿಗಿಂತ ಭಿಕ್ಷುಕನು ಹಗುರ'' ಎಂಬ ನುಡಿ ಯಾಚಕವೃತ್ತಿಯನ್ನು ಗೇಲಿಮಾಡಿದೆ. ವಿಷ್ಣು ಬಲಿಯನ್ನು ಬೇಡಿ ವಾಮನ (ಕುಳ್ಳ)ನಾದನಂತೆ ! ವಿಪತ್ತಿನಲ್ಲಿರತಕ್ಕವನ್ನು ಬೇಡುವುದು ತಪ್ಪಲ್ಲ. ಅಂತಹವರಿಗೆ ನೆರವು ನೀಡುವುದು ಪುಣ್ಯಕಾರ್ಯವೇ. ಆತ್ಮಗೌರವ ವಿರತಕ್ಕವನು ವಿಪತ್ತಿನಲ್ಲಿಯೂ ಉತ್ತಮನನ್ನು ಬೇಡುತ್ತಾನೆ, ಅಧಮನನ್ನಲ್ಲ. ''ಯಾಚ್ಞಾ ಮೋಘಾ ವರಮಧಿಗುಣೇ ನಾಧಮೇ ಲಬ್ಧಕಾಮಾ.''

ಆಹಾರಾರ್ಥಂ ಕರ್ಮ ಕುರ್ಯಾದನಿಂದ್ಯಂ
ಕುರ್ಯಾದಾಹಾರಂ ಪ್ರಾಣಸಂಧಾರಣಾರ್ಥಂ |
ಪ್ರಾಣಾಃ ಸಂಧಾರ್ಯಾಸ್ತತ್ತ್ವವಿಜ್ಞಾನಹೇತೋಃ
ತತ್ತ್ವಂ ವಿಜ್ಞೇಯಂ ಯೇನ ಭೂಯೋ ನ ಜನ್ಮ || || ೩೦ ||

— ಮಹಾಭಾರತ

''ಆಹಾರಕ್ಕಾಗಿ ನಿಂದಿತವಲ್ಲದ ಕೆಲಸವನ್ನು ಕೈಗೊಳ್ಳಬೇಕು. ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿ ಆಹಾರವನ್ನು ಸೇವಿಸಬೇಕು.

ತತ್ತ್ವಜ್ಞಾನವನ್ನು ಸಂಪಾದಿಸುವುದಕ್ಕಾಗಿ ಪ್ರಾಣವನ್ನು ಉಳಿಸಿ ಕೊಳ್ಳಬೇಕು. ಪುನರ್ಜನ್ಮ ಬರದಂತೆ ಮೋಕ್ಷ ಪಡೆಯುವುದಕ್ಕಾಗಿ ತತ್ತ್ವಜ್ಞಾನಿಯಾಗಬೇಕು.''

ನಮ್ಮ ಭಾರತೀಯ ಚಿಂತನದ ಸಾರವೆಲ್ಲ ಇದರಲ್ಲಡಗಿದೆ. ಜೀವನದ ಗುರಿಯನ್ನು ಗೊತ್ತುಪಡಿಸುವುದಕ್ಕಾಗಿ ಸಾವಿರಾರು ವರ್ಷಗಳಿಂದ ನಡೆದ ಚಿಂತನಪ್ರಕಾರಗಳ ಸಂಗ್ರಹ ಇದು. ಮನುಷ್ಯನಾಗಿ ಹುಟ್ಟಿದ ಮೇಲೆ ಆಹಾರಕ್ಕಾಗಿ ಉದ್ಯೋಗವನ್ನು ಕೈಗೊಳ್ಳುವುದು ತಪ್ಪಿದ್ದಲ್ಲ. ಆದರೆ ಆ ಉದ್ಯೋಗ ಪರಿಶುದ್ಧವಾಗಿರಲಿ. ಸುಳ್ಳು, ಕಳ್ಳತನ – ಮೊದಲಾದವುಗಳ ಸುಳಿವಿಲ್ಲದೆ ಸಾಧ್ಯವಾದಷ್ಟು ಅಹಿಂಸಾತ್ಮಕವಾಗಿರಬೇಕು. ಉದ್ಯೋಗ, ಅನ್ನ ಸಂಪಾದನೆಗಾಗಿ ನಡೆಯಬೇಕು. ಅಷ್ಟರಿಂದ ತೃಪ್ತನಾಗು. ಬೇಕಾದ್ದಕ್ಕಿಂತ ಹೆಚ್ಚಿನ ಸಂಗ್ರಹ ಅನ್ಯರ ಅನ್ನವನ್ನು ಕಿತ್ತುಕೊಂಡಂತೆಯೇ. ಹೆಚ್ಚಿನ ಸಂಗ್ರಹವಾದರೆ ಧರ್ಮಕಾರ್ಯಕ್ಕಾಗಿ ವಿನಿಯೋಗಿಸು. ತಿನ್ನುವುದು ಪ್ರಾಣವನ್ನುಳಿಸಿಕೊಳ್ಳುವುದಕ್ಕೆ. ಪ್ರಾಣ ಉಳಿಸಿಕೊಳ್ಳುವುದು ಜ್ಞಾನಸಂಪಾದನೆ ಗಾಗಿ. ಮನುಷ್ಯನೊಬ್ಬನೇ ಜ್ಞಾನಸಂಪಾದನೆಗೆ ಅಧಿಕಾರಿ. ಉಳಿದ ಪ್ರಾಣಿಗಳಿಗೆ ಜ್ಞಾನವನ್ನು ಗಳಿಸುವ ಯೋಗ್ಯತೆ ಇಲ್ಲ. ಜ್ಞಾನವೆಂದರೆ ಭೌತಿಕ ವಸ್ತು ವಿಜ್ಞಾನವಲ್ಲ. ಅದು ಆಗಾಧವಾಗಿದ್ದರೂ ಅನ್ನಾದಿ ಸಂಪಾದನೆಗೆ ಸೀಮಿತವಾದ್ದ ರಿಂದ ಆಹಾರಾರ್ಥವಾದ ಕರ್ಮದಲ್ಲಿ ಮುಕ್ತಾಯಗೊಳ್ಳುತ್ತದೆ. ಪ್ರಾಣಧಾರಣೆ ತತ್ತ್ವವಿಜ್ಞಾನಕ್ಕಾಗಿ. ಭೌತಿಕ ವಸ್ತುಗಳನ್ನರಿಯುವ ತಾನು ಯಾರೆಂದು ತಿಳಿಯುವುದೇ ತತ್ತ್ವಜ್ಞಾನ. ಅದೇ ಪರಮಾರ್ಥ. ಜೀವ, ಜಗತ್ತು, ಈಶ್ವರ — ಇವುಗಳ ರಹಸ್ಯವೇ ತಿಳಿಯಬೇಕಾದ್ದು. ಜೀವನಾದ ತಾನು ಯಾರೆಂದು ತಿಳಿದರೆ ಈಶ್ವರ, ಜಗತ್ತುಗಳ ನೆಲೆಯೇನೆಂಬುದು ಸ್ಪಷ್ಟವಾಗುತ್ತದೆ.

ಪುನರ್ಜನ್ಮದ ನಂಬಿಕೆಯೇ ಭಾರತೀಯ ಚಿಂತನೆಯ ಜೀವಾಳ. ಈ ಪುನರ್ಜನ್ಮದ ಸಂಕೋಲೆಯನ್ನು ತಪ್ಪಿಸಿಕೊಳ್ಳುವುದು ಪರಮಧ್ಯೇಯ. ಇಹಪರಗಳೆರಡಕ್ಕೂ ನಮ್ಮವರು ಜೀವನಮಾರ್ಗವನ್ನು ರೂಪಿಸಿಕೊಂಡಿದ್ದರು. ಇಹವೂ ಬೇಕು, ಪರವೂ ಬೇಕು. ಇವುಗಳಲ್ಲಿ ಯಾವುದು ತಪ್ಪಿದರೂ ಮನುಷ್ಯಜೀವನವು ನಿಸ್ಸಾರ. ಈ ಎರಡರ ಸಮನ್ವಯವೇ ಮನುಷ್ಯನು

ಸಾಧಿಸಬೇಕಾದ್ದು. ಬಾಳಿಗೊಂದು ನಂಬಿಕೆ. ನಂಬಿಕೆಯೇ ಜೀವನವನ್ನು ಸುಂದರಗೊಳಿಸುತ್ತದೆ.

ಯತ್ರೋತ್ಸಾಹಸಮಾರಂಭೋ ಯತ್ರಾಲಸ್ಯವಿಹೀನತಾ ।
ನಯ-ವಿಕ್ರಮ-ಸಂಯೋಗಸ್ತತ್ರ ಶ್ರೀರಚಲಾ ಧ್ರುವಮ್ ॥ ॥ ೩೧ ॥

– ಪಂಚತಂತ್ರ, ಮಿತ್ರಸಂಪ್ರಾಪ್ತಿ–೧೪೬

''ಎಲ್ಲಿ ಉತ್ಸಾಹಪೂರ್ವಕವಾಗಿ ಪ್ರಯತ್ನ ನಡೆಯುವುದೋ, ಎಲ್ಲಿ ಸೋಮಾರಿತನವಿಲ್ಲವೋ, ಎಲ್ಲಿ ನೀತಿ ಮತ್ತು ಪರಾಕ್ರಮಗಳು ಜೊತೆಗೂಡಿರುತ್ತವೋ ಅಲ್ಲಿ ಸಂಪತ್ತು ಸ್ಥಿರವಾಗಿ ನೆಲೆಸಿರುತ್ತದೆ.''

ಭಾರತೀಯರು ದೈವವನ್ನು ನಂಬಿ ಕೈಕಟ್ಟಿ ಕುಳಿತುಕೊಳ್ಳುವವರೆಂದೂ ಪೌರುಷಕ್ಕೆ ಬೆಲೆ ಕೊಟ್ಟವರಲ್ಲವೆಂದೂ ಯಾವನೋ ಒಬ್ಬ ಮಹನೀಯ ಒಮ್ಮೆ ಉಸುರಿದ. ಆ ಹುಳುಕುಹುಡುಕನ ಮಾತನ್ನೇ ದೊಡ್ಡ ಶೋಧವೆಂದೂ ಆವಿಷ್ಕಾರವೆಂದೂ ತಿಳಿದು ಅದನ್ನೇ ಪುನರುಚ್ಚರಿಸುತ್ತಿರುವ ನಮ್ಮ ಜನರಿಗೆ ಮೇಲಿನ ಶ್ಲೋಕ ಸರಿಯಾದ ಉತ್ತರವನ್ನೀಯುತ್ತದೆ. ಭಾರತೀಯರು ದೈವ ವನ್ನು ನಂಬಿದರೂ ಪೌರುಷವನ್ನು ಎಂದೂ ಕಡೆಗಣಿಸಿದವರಲ್ಲ. ಪುರುಷ ಪ್ರಯತ್ನಕ್ಕೆ ದೈವದ ನೆರವೂ ಬೇಕೆಂದು ಇವರು ಹೇಳಿದ್ದುಂಟು. ರಥವು ನಡೆಯಲು ಎರಡು ಗಾಲಿಗಳು ಬೇಕಾಗುವಂತೆ, ಕಾರ್ಯಸಿದ್ಧಿಗೆ ದೈವ–ಪುರುಷ ಗಳೆರಡೂ ಬೇಕು. ದೈವವೆಂದರೇನು ? ಕರ್ಮವಾದಿಗಳಾದ ಭಾರತೀಯರಿಗೆ ಜನ್ಮಾಂತರದಲ್ಲಿ ತಾನು ಮಾಡಿದ ಕರ್ಮವೇ ದೈವ. ಅದು ಹಿಂದಿನ ಪೌರುಷವೇ. ''ಜನ್ಮಾಂತರ–ಕೃತಂ ಕರ್ಮ ತದ್ದೈವಮಿತಿ ಕಥ್ಯತೇ'' ಎನ್ನುತ್ತದೆ ಯೋಗವಾಸಿಷ್ಠ. ''ದೈವಂ ನಾಮ ನ ವಿದ್ಯತೇ' ಎನ್ನುತ್ತದೆ ಅದೇ ಗ್ರಂಥ. ''ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ'' – ದೈವವನ್ನು ಮೂಲೆಗೆ ತಳ್ಳಿ ನಿನ್ನ ಸ್ವಶಕ್ತಿಯಿಂದ ಪೌರುಷವನ್ನು ಮೆರೆಸು. ಏಕೆಂದರೆ, ಜನ್ಮಾಂತರದ ದೈವ ಪರೋಕ್ಷ. ಪೌರುಷವಾದರೋ ಪ್ರತ್ಯಕ್ಷ. ಪ್ರತ್ಯಕ್ಷವೇ ಪ್ರಬಲ ವಾದದ್ದು. ರಾಮಾಯಣ, ಮಹಾಭಾರತಗಳನ್ನೇ ನೋಡಲಿ, ಇತಿಹಾಸದ

ಪುಟಗಳನ್ನೇ ತಿರುವಿಹಾಕಲಿ, ದೈವವನ್ನು ನಂಬಿ ಕೈಕಟ್ಟಿ ಕುಳಿತ ಒಂದು ಪ್ರಸಂಗವೂ ದೊರೆಯಲಾರದು. ತಮ್ಮ ಅವಿವೇಕದಿಂದಲೋ, ಇನ್ನೊಬ್ಬರ ವಂಚನೆಯಿಂದಲೋ ಅನಿರೀಕ್ಷಿತವಾದ ವಿಪತ್ತು ಬಂದಾಗ ದೈವವನ್ನು ಕಾರಣವೆಂದು ಹಳಿದದ್ದುಂಟು. ಆದರೆ ಆ ವಿಪತ್ತನ್ನೆದುರಿಸಲು ಎಲ್ಲರೂ ಸಾಹಸವನ್ನು ಮೆರೆಸಿದವರೇ. ಸೀತಾಪಹರಣವಾದಾಗ ಶ್ರೀರಾಮನು ಕೈಕಟ್ಟಿ ಕುಳಿತನೆ ? ರಾವಣನನ್ನು ಸಂಹರಿಸಿ, ಅವನು ಹೇಳುವ ವೀರವಾಣಿ ಇದು

**ದೈವಸಂಪಾದಿತೋ ದೋಷಃ ಮಾನುಷೇಣ ಮಯಾ ಜಿತಃ ||**

"ದೈವದಿಂದೊದಗಿದ ಕಷ್ಟವನ್ನು ಪೌರುಷದಿಂದ ಎದುರಿಸಿ ಜಯಿಸಿದ್ದೇನೆ !"

ಪ್ರಭಾತೇ ಮಲಮೂತ್ರಾಭ್ಯಾಂ ಕ್ಷುತ್‌ತೃಡ್‌ಭ್ಯಾಂ ಮಧ್ಯಗೇ ರವೌ |
ರಾತ್ರೌ ಮದನನಿದ್ರಾಭ್ಯಾಂ ಬಾಧ್ಯಂತೇ ಮೂಢಮಾನವಾಃ || || ೩೨ ||

— ಗರುಡಪುರಾಣ

"ಬೆಳಗಿನಲ್ಲಿ ಮಲಮೂತ್ರಗಳಿಂದ, ಮಧ್ಯಾಹ್ನದಲ್ಲಿ ಹಸಿವು ಬಾಯಾರಿಕೆಗಳಿಂದ, ರಾತ್ರಿಯಲ್ಲಿ ಕಾಮ ಮತ್ತು ನಿದ್ರೆಗಳಿಂದ ಮೂಢಮಾನವರು ಬಾಧೆಪಡುತ್ತಿದ್ದಾರೆ."

ಇದು ಸಾಮಾನ್ಯವಾಗಿ ಎಲ್ಲ ಮನುಷ್ಯರ ಪರಿಸ್ಥಿತಿ. ಪಶು, ಪಕ್ಷಿ, ಕ್ರಿಮಿಕೀಟಗಳಿಗೂ ಈ ಬಾಧೆ ತಪ್ಪಿದ್ದಲ್ಲ. ಇಡೀ ಜಗತ್ತೇ ಇಂತಹ ಬಾಧೆಗೆ ಒಳಗಾಗಿ ಶಾಶ್ವತ ಪರಿಹಾರವನ್ನು ಕಾಣದೆ ಹೆಣಗುತ್ತಿರುವಾಗ ಮಾನವರನ್ನು ಕುರಿತು ವಿಶೇಷವಾಗಿ ಹೇಳಿ ಮೂಢರೆಂದು ಅವಹೇಳನ ಮಾಡುವುದೇಕೆ ?

ಮಾನವನಲ್ಲಿ ಜ್ಞಾನಶಕ್ತಿಯನ್ನು ಗಳಿಸುವ ಹಂಬಲವೂ ಬೆಳೆಸುವ ಸಾಧನಸಂಪತ್ತೂ ಉಂಟು. ಅದೊಂದೇ ಇವನನ್ನು ಪ್ರಾಣಿವರ್ಗದಿಂದಲೂ ಸಸ್ಯವರ್ಗದಿಂದಲೂ ಬೇರ್ಪಡಿಸುವ ಅಳತೆಗೋಲು. 'ಜ್ಞಾನೇನ ಹೀನ ಪಶುಭಿಃ ಸಮಾನಃ—ಜ್ಞಾನವೆಂದರೆ ಯಾವುದು ? ಭವಿಷ್ಯತ್ತಿನ ಚಿಂತನೆಯೆ, ಸಮಾಜದ

ಹಿತರಕ್ಷಣಾಗ್ರಹಿಕೆಯೆ, ಕಾರ್ಯಕೌಶಲವೆ ? ಇವುಗಳಲ್ಲಿ ಯಾವುದೊಂದೂ ಮಾನವೇತರ ವರ್ಗದಲ್ಲಿ ತಕ್ಕಮಟ್ಟಿಗೆ ಇದ್ದೇ ಇದೆ. ಜೇಡನ ಬಲೆ, ಗೀಜಗನ ಗೂಡು ಏನನ್ನು ಸೂಚಿಸುತ್ತದೆ ? ಹೊಸದಾಗಿ ಬಿದಿರುಮೆಳೆ ಹುಟ್ಟಿದಾಗ ಕೆಂಜಗವೆಂಬ ಮುಳ್ಳಿನ ಪೊದೆ ಬಿದಿರಿನ ರಕ್ಷಣೆಗಾಗಿ ಕಾವಲುಗಾರರ ಪಡೆಯಂತೆ ಸುತ್ತಲೂ ಎದ್ದುನಿಲ್ಲುತ್ತದೆ ! ಸಮಾಜರಕ್ಷಣೆ, ಸಂತತಿಯ ವಿಸ್ತರಣೆ – ಇವುಗಳ ಹಂಬಲ ಸ್ಥಾವರ ಜಂಗಮಗಳಲ್ಲಿಯೂ ಕಂಡುಬರುತ್ತದೆ. ಕೈಕಾಲು ಮೊದಲಾದ ಸಾಧನಸಂಪತ್ತು ದೊರಕಿರುವುದರಿಂದ ಮಾನವನು ಅನ್ಯ ವರ್ಗವನ್ನು ತುಳಿದು ವಿಜೃಂಭಿಸುತ್ತಿದ್ದಾನೆ.

**ಏತದ್ ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ|| (ಗೀತಾ)**

ಅಧ್ಯಾತ್ಮಜ್ಞಾನವೇ ಜ್ಞಾನ, ಉಳಿದುದೆಲ್ಲ ಅಜ್ಞಾನ. ಶ್ರೀಕೃಷ್ಣನು 'ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ' ಎಂದು ಹೇಳಿದ್ದು ಆತ್ಮಜ್ಞಾನವನ್ನು ಕುರಿತು. ಈಗಿನ ವಿದ್ಯಾಶಾಲೆಗಳು ಕೊಡುವುದು ವಿಜ್ಞಾನವನ್ನು– 'ವಿಜ್ಞಾನಂ ಶಿಲ್ಪಶಾಸ್ತ್ರಯೋಃ.' ಭಗವದ್ಗೀತೆ ಈ ವಿಜ್ಞಾನವನ್ನು ಅಜ್ಞಾನದ ಗುಂಪಿಗೆ ತಳ್ಳಿಬಿಟ್ಟಿದೆ. ಆತ್ಮಜ್ಞಾನಕ್ಕಾಗಿ ಯಾರಿಗೆ ಚಚ್ಚರವಿಲ್ಲವೋ ಅವರು ಮೂಢಮಾನವರು.

**ಸರ್ವಂ ಪರವಶಂ ದುಃಖಂ ಸರ್ವಮಾತ್ಮವಶಂ ಸುಖಂ |**
**ಏತದ್ ವಿದ್ಯಾತ್ ಸಮಾಸೇನ ಲಕ್ಷಣಂ ಸುಖದುಃಖಯೋಃ || || ೩೩ ||**

– ಮನುಸ್ಮೃತಿ, ೪-೧೬೦

"ಅನ್ಯರಿಗೆ ಅಧೀನವಾಗಿರುವುದೆಲ್ಲ ದುಃಖ; ತನಗೆ ಯಾವುದು ಅಧೀನವೋ ಅದು ಸುಖ. ಇದು ಸಂಕ್ಷೇಪವಾಗಿ ಸುಖದುಃಖಗಳ ಲಕ್ಷಣವೆಂದು ತಿಳಿಯಬೇಕು."

ಸ್ವಾತಂತ್ರ್ಯದಿಂದ ಸುಖ, ಪಾರತಂತ್ರ್ಯದಿಂದ ದುಃಖ – ಎಂಬುದು ಸುಖದುಃಖಗಳ ತಿರುಳು. ಎಲ್ಲರಿಗೂ ಸುಖ ಬೇಕಾಗಿರುವುದರಿಂದ

ಸರ್ವವಿಧದಲ್ಲಿ ಸ್ವತಂತ್ರವಾಗಿರಬೇಕೆಂದು ಅವರು ಬಯಸುತ್ತಾರೆ. ಮನು ನಿರೂಪಿಸಿದ ಈ ಸೂತ್ರ ಎಲ್ಲ ಕ್ಷೇತ್ರಗಳಿಗೂ ಅನ್ವಯಿಸುತ್ತದೆ.

'ಹಂಗಿನರಮನೆಗಿಂತ ಅಂಗಳದ ಗುಡಿ ಲೇಸು' ಎಂಬುದನ್ನು ಒಪ್ಪದವರು ಯಾರು ? 'ದುಃಖಾದ್ದುಃಖತರಂ ಕಿಂ ಪರಗೃಹವಾಸಃ ಪರಾನ್ನಂ ಚ' : ಅತ್ಯಂತ ದುಃಖಕರವಾದದ್ದು ಯಾವುದು ? – ಎಂಬ ಪ್ರಶ್ನೆಗೆ ಪರಗೃಹವಾಸ, ಪರಾನ್ನ ಎಂಬುದು ಉತ್ತರ. ಮೂರು ಕಾಸಿಗಾಗಿ ಇನ್ನೊಬ್ಬರ ಮುಖವನ್ನು ನೋಡುವ ಬವಣೆ ಯಾರಿಗೂ ಬೇಡ. ಇನ್ನೊಬ್ಬರ ನಿಯಂತ್ರಣವನ್ನು ಯಾವ ಸಮಾಜವೂ ಬಯಸದು. ಪ್ರಜಾಪ್ರಭುತ್ವ ಪದ್ಧತಿಯೂ ಸಹ ಮನುವಿನ ಸೂತ್ರದಿಂದ ಪ್ರಚೋದಿತವಾದದ್ದೇ. 'ನಮ್ಮ ಯೋಗಕ್ಷೇಮಗಳನ್ನು ನಾವೇ ನೋಡಿಕೊಳ್ಳೋಣ, ಇನ್ನೊಬ್ಬ ನಿರಂಕುಶ ಪ್ರಭುವಿಗೆ ನಾನು ಅಧೀನರಾಗಿರಬಾರದು' ಎಂಬ ಉದ್ದೇಶದಲ್ಲಿ ಸ್ವಾತಂತ್ರ್ಯದ ಹಂಬಲ ಎದ್ದುಕಾಣುತ್ತದೆ. ಮೂಲಭೂತ ಹಕ್ಕುಗಳು (Fundamental Rights) ಇರುವುದು ಮನುಷ್ಯನ ಕನಿಷ್ಠ ಬೇಡಿಕೆಯ ಪೂರೈಕೆಗಾಗಿ. ಸುಖಾಪೇಕ್ಷಿಯಾದ ಈ ಸ್ವಾತಂತ್ರ್ಯವು ಧರ್ಮದ ಕಡಿವಾಣಕ್ಕೆ ಒಳಪಡಲೇ ಬೇಕು. ಸ್ವಾತಂತ್ರ್ಯದ ದುರುಪಯೋಗವು ಸಮಾಜದ ಎಲ್ಲ ಅನಿಷ್ಟಗಳಿಗೂ ಕಾರಣ. ಎಲ್ಲಿ ಬಲಾತ್ಕಾರ, ಹಿಂಸೆ, ಕಳ್ಳತನ, ವಂಚನೆ, ಆಕ್ರಮಣ–ಮೊದಲಾದವುಗಳಿವೆಯೋ ಅಲ್ಲಿ ಇನ್ನೊಬ್ಬರ ಸ್ವಾತಂತ್ರ್ಯಕ್ಕೆ ಭಂಗವಾಗಿರುತ್ತದೆ.

ಆಧ್ಯಾತ್ಮಿಕವಾಗಿಯೂ ಇದೇ ನ್ಯಾಯ. ಇಂದ್ರಿಯಗಳೆಂಬ ಕುದುರೆಗಳಿಗೆ ಮನಸ್ಸು ಲಗಾಮು. ಈ ಕುದುರೆಗಳು ಸುಖದ ಹಂಬಲದಿಂದ ಲಗಾಮನ್ನು ಜಗ್ಗುತ್ತ ಓಡುತ್ತವೆ. ಹೀಗೆ ಓಡುವುದಕ್ಕೆ ತೊಡಗಿದರೆ ಮನುಷ್ಯನು ಇಂದ್ರಿಯಗಳ ದಾಸನಾದಂತೆ. ಅವನ ಸ್ವಾತಂತ್ರ್ಯ ಅಲ್ಲಿಗೆ ಮುಗಿಯಿತು. ಅಡ್ಡದಾರಿಯಲ್ಲಿ ಓಡಿ ಈ ಕುದುರೆಗಳು ದೇಹವೆಂಬ ರಥವನ್ನೂ ಆತ್ಮನೆಂಬ ರಥಿಕನನ್ನೂ ಉರುಳಿಸುತ್ತವೆ.

ಈ ಕಾರಣದಿಂದಲೇ ಜವಾಬ್ದಾರಿಯನ್ನರಿತ ರಾಷ್ಟ್ರವು ಪ್ರಜೆಯ ಕೆಲವು ಸ್ವಾತಂತ್ರ್ಯಗಳಿಗೆ ಇತಿಮಿತಿಗಳನ್ನಿಟ್ಟು ಹಕ್ಕನ್ನು ಮೊಟಕುಗೊಳಿಸುತ್ತದೆ. ಬಹುಜನರ ಬಹುಹಿತಕ್ಕಾಗಿ ಪ್ರತಿಯೊಬ್ಬನೂ ತನ್ನ ಪಾಲಿನಲ್ಲಿ ಒಂದಂಶವನ್ನು

ತ್ಯಾಗ ಮಾಡಲೇಬೇಕು. ಸುಖದ ಮೂಲದಲ್ಲಿ ದುಃಖವಿದೆ. ದುಃಖದ ಮೂಲದಲ್ಲಿ ಸುಖವಿದೆ. ಸಮಬುದ್ಧಿಯಿಂದ ಇವನ್ನು ಸ್ವಾಗತಿಸುವುದು ಮನುಷ್ಯನ ಕೌಶಲ.

**ಅಪುತ್ರಸ್ಯ ಗೃಹಂ ಶೂನ್ಯಂ ಸನ್ಮಿತ್ರರಹಿತಸ್ಯ ಚ |**
**ಮೂರ್ಖಸ್ಯ ಹೃದಯಂ ಶೂನ್ಯಂ ಸರ್ವಶೂನ್ಯಾ ದರಿದ್ರತಾ || || ೩೪ ||**

''ಮಗುವಿಲ್ಲದವನ ಮನೆ ಶೂನ್ಯ. ಸನ್ಮಿತ್ರನಿಲ್ಲದ ಮನೆಯೂ ಶೂನ್ಯ, ಜೀವಿತವೂ ಶೂನ್ಯ. ಮೂರ್ಖನ ಮನ ಶೂನ್ಯ. ಆದರೆ ಬಡತನ ಸರ್ವಶೂನ್ಯ.''

ಶೂನ್ಯವೆಂದರೆ ಸೊನ್ನೆ, ಖಾಲಿ, ಬರಡು, ನಿಃಸಾರ – ಎಂದರ್ಥ. ಮನೆಗೆ ಮಕ್ಕಳು ಭೂಷಣ. ಆದರ್ಶ ಗೃಹಸ್ಥಜೀವನವನ್ನು ನಡೆಸತಕ್ಕವರಿಗೆ ಇದು ಹೌದೆನಿಸುತ್ತದೆ. ಒಂದು ಮಗು ಬೇಕೆಂಬ ದಂಪತಿಗಳ ಹಂಬಲ ಮಾನವಸಹಜವಾದ ಪ್ರಕೃತಿ. ಹೊಟ್ಟೆಗೆ ಇಲ್ಲದ ಬಡ ಕುಟುಂಬಕ್ಕೂ ಈ ಅಪೇಕ್ಷೆ ಅದಮ್ಯವಾಗಿ ಉಳಿದುಕೊಂಡಿದೆ.

ಸುಖದುಃಖಗಳಲ್ಲಿ ಪಾಲುಗಾರನಾಗುವ, ಸೂಕ್ತಕಾಲದಲ್ಲಿ ಎಚ್ಚರಿಕೆ ನೀಡುವ ಒಳ್ಳೆಯ ಮಿತ್ರನಿಂದಾಗುವ ಉಪಕಾರ ಬಹಳ ದೊಡ್ಡದು. ಅವನು ಕೊಡುವ ಸಲಹೆ ಹೃದಯಪೂರ್ವಕವಾಗಿ ಬಂದದ್ದು. ಆದ್ದರಿಂದಲೇ ಅದಕ್ಕೆ ಬೆಲೆ ಅಧಿಕ. ಆದರೆ ಮಿತ್ರನನ್ನು ಆರಿಸುವಾಗ ಮಾತ್ರ ತುಂಬ ಎಚ್ಚರಿಕೆ ಬೇಕು. ''ಸಮಾನಶೀಲವ್ಯಸನೇಷು ಸಖ್ಯಂ.'' ಸ್ನೇಹಿತರೇ ಇಲ್ಲದವರ ಹೃದಯ ಬರಡು ಅಥವಾ ಕೊರಡು.

ಮೂರ್ಖನೆಂದರೆ ಮೂಢನೋ ? ಹಠಮಾರಿಯೋ ? ಇಬ್ಬರೂ ಆಗಬಹುದು. 'ಮೂಢೋ ಮೂರ್ಖೋ ಗಾರ್ದಭಶ್ಚೈಕರಾಶಿಃ'! ಮೂಢನ ಹೃದಯ ಸ್ವತಃ ಖಾಲಿ. ಹಠಮಾರಿಯ ಹೃದಯ ಹಠದಿಂದ ತುಂಬಿರುತ್ತದೆ. ಆದರಲ್ಲಿ ಒಳ್ಳೆಯ ಮಾತು ಹಿಡಿಸುವುದಕ್ಕೆ ಸ್ಥಳವಿಲ್ಲ. ತುಂಬಿದ ಕಸದ ಬುಟ್ಟಿಯಲ್ಲಿ ಹಣ್ಣುಗಳನ್ನು ಯಾರೂ ತುಂಬಲಾರರು.

ಬಡವನಿಗೆ ಎಲ್ಲವೂ ಶೂನ್ಯ. ಮನೆ, ಮನ, ಹೊಟ್ಟೆ—ಎಲ್ಲ ಖಾಲಿ. ಬಡವನ ಹಸಿವು ಆಹಾರವೊಂದನ್ನು ಬಿಟ್ಟು ಇನ್ನು ಯಾವುದನ್ನೂ ಸ್ವಾಗತಿಸುವುದಿಲ್ಲ. ಹಸಿದ ಹೊಟ್ಟೆಗೆ ರೊಟ್ಟಿ ಬೇಕು. ಸಂಗೀತ, ಸಾಹಿತ್ಯ, ವೇದಾಂತಗಳು ಅದಕ್ಕೆ ಬಹುದೂರ. ಅವೆಲ್ಲವೂ ಆತನಿಗೆ ನಿಃಸಾರ.

ವಾಸ್ತವವಾಗಿ ದರಿದ್ರತೆ ಒರೆಗಲ್ಲಿಗೆ ಸಿಗತಕ್ಕದ್ದಲ್ಲ. ತನಗಿಂತ ಹೆಚ್ಚಿನ ಧನವಂತರಿಗೆ ಹೋಲಿಸಿಕೊಂಡಾಗ ಪ್ರತಿಯೊಬ್ಬನೂ ದರಿದ್ರನೆನಿಸಿಯಾನು. ಕೆಳಗಿನವರಿಗೆ ಹೋಲಿಸಿಕೊಂಡಾಗ ಆತನೇ ಶ್ರೀಮಂತನಾದಾನು. ಶ್ರೀಮಂತಿಕೆ ಯಾಗಲಿ, ದಾರಿದ್ರ್ಯವಾಗಲಿ ಹೃದಯಕ್ಕೆ ಸಂಬಂಧಿಸಿದ್ದು. ಯಾರ ಹೃದಯ ದಲ್ಲಿ ಸ್ನೇಹ, ದಯೆ, ಸಹಾನುಭೂತಿ, ಶಾಂತಿ, ತೃಪ್ತಿ ಮುಂತಾದ ದಿವ್ಯಗುಣ ಗಳಿವೆಯೋ ಅವನು ಬಡವನಾದರೂ ಶ್ರೀಮಂತ. ಅವನಿಗೆ ಎಲ್ಲವೂ ಪೂರ್ಣ, ಶೂನ್ಯವೆಂಬುದೇ ಇಲ್ಲ. ಯಾರು ಈ ಗುಣಗಳಿಂದ ಶೂನ್ಯನೋ ಅವನು ಪುತ್ರವಂತನೂ, ಮಿತ್ರಸಹಿತನೂ, ಧನವಂತನೂ ಆಗಿದ್ದರೂ ದರಿದ್ರನೇ. ಅವನೇ ಸರ್ವಶೂನ್ಯ.

**ಅಮಿತಗುಣೋಽಪಿ ಪದಾರ್ಥೋ**
**ದೋಷೇಣೈಕೇನ ನಿಂದಿತೋ ಭವತಿ |**
**ನಿಖಿಲರಸಾಯನರಾಜೋ ಗಂಧೇನೋಗ್ರೇಣ ಲಶುನ ಇವ || || ೩೫ ||**

— ಜಗನ್ನಾಥ

“ಒಂದು ಪದಾರ್ಥವು ಬಹಳ ಗುಣಗಳಿಂದ ಕೂಡಿದ್ದರೂ, ಅದರಲ್ಲಿ ಒಂದೇ ಒಂದು ದೋಷವಿದ್ದರೆ ಲೋಕನಿಂದಿತವಾಗುತ್ತದೆ, ಎಲ್ಲ ರಸಾಯನಗಳ ರಾಜನಾಗಿದ್ದರೂ ಬೆಳ್ಳುಳ್ಳಿಯು ಕೆಟ್ಟ ವಾಸನೆಯಿಂದ ನಿಂದೆಗೆ ಗುರಿಯಾದಂತೆ.”

ಒಳ್ಳೆಯ ಗುಣಗಳಿದ್ದರೂ ಮಹತ್ತ್ವವನ್ನು ನೀಡದೆ ವ್ಯಕ್ತಿಯಲ್ಲಿರುವ ಒಂದು ತಪ್ಪನ್ನೇ ಎತ್ತಿಹಿಡಿದು ದೊಡ್ಡದಾಗಿ ಮಾಡುವುದು ಲೋಕಸ್ವಭಾವ.

ಬೆಳ್ಳುಳ್ಳಿ ಆರೋಗ್ಯಕ್ಕೆ ತುಂಬ ಒಳ್ಳೆಯದೆಂದು ವೈದ್ಯರೂ ಒಪ್ಪಿದ್ದಾರೆ. ಅದು ತನ್ನ ಗುಣಗಳಿಂದ 'ರಸಾಯನರಾಜ' ಎನ್ನಿಸಿಕೊಂಡಿದೆಯಾದರೂ, ಅದರ ಉಗ್ರವಾಸನೆಗಾಗಿ ಜನರು ಅದನ್ನು ದೂರವಿಡುತ್ತಾರೆ.

''ಸದ್ಗುಣಗಳು ಬಹಳ ಇದ್ದಾಗ ಒಂದು ದೋಷವನ್ನು ಯಾರೂ ಗಣಿಸುವುದಿಲ್ಲ'' ಎನ್ನುತ್ತಾನೆ ಕಾಳಿದಾಸ. ಇದಕ್ಕೆ ವ್ಯತಿರಿಕ್ತವಾಗಿ ಇನ್ನೊಬ್ಬ ಕವಿ ''ಹಾಗಲ್ಲ; ಬಡತನ ಎಂಬ ಒಂದು ದೋಷ ಸಕಲ ಸದ್ಗುಣಗಳನ್ನೂ ಮುಚ್ಚಿಬಿಡುತ್ತದೆ !'' ಎನ್ನುತ್ತಾನೆ.

ದೋಷವು ಮೂರು ವಿಧ – ನಿತ್ಯ, ಪಾಕ್ಷಿಕ, ಕಾಲ್ಪನಿಕ ಎಂದು. ಕಳ್ಳತನ, ವಂಚನೆ, ಕೊಲೆ ಮೊದಲಾದವು ನಿತ್ಯದೋಷಗಳು. ಸಭ್ಯಸಮಾಜ ದಲ್ಲಿ ಇವು ಯಾವಾಗಲೂ ನಿಂದನಾರ್ಹವಾದವು. ಎಲ್ಲ ಒಳ್ಳೆಯ ಗುಣಗಳನ್ನು ಇವು ಮುಚ್ಚುತ್ತವೆ. ಈ ದೋಷವಿರುವ ಮನುಷ್ಯ ಸದಾ ಪರಿತ್ಯಾಜ್ಯನೇ. ಅವನಲ್ಲಿರುವ ಗುಣಕ್ಕೆ ಯಾವ ಬೆಲೆಯೂ ಇಲ್ಲ. ಸಿಡುಕು, ಸೋಮಾರಿತನ ಮೊದಲಾದವು ಪಾಕ್ಷಿಕ ದೋಷಗಳು, ಗುಣಶಾಲಿಯು ಸಿಡುಕನಾದರೂ ತ್ಯಾಜ್ಯನಲ್ಲ. ಅನರ್ಥವಾಗದಂತೆ ಉಪಾಯದಿಂದ ಅವನನ್ನು ಬಳಸಿಕೊಳ್ಳು ವುದು ಲೇಸು.

ಕಾಲ್ಪನಿಕ ದೋಷವೆಂಬುದು ವಸ್ತುನಿಷ್ಠವಲ್ಲ, ಅದು ನಮ್ಮ ದೃಷ್ಟಿದೋಷದಿಂದ ಬಂದದ್ದು. ನಮ್ಮ ತಪ್ಪನ್ನು ವಸ್ತುವಿನಲ್ಲಿ ಹೊರಿಸಿದಾಗ ಕಾಲ್ಪನಿಕ ದೋಷವಾಗುತ್ತದೆ. ಅಸ್ಪೃಶ್ಯತೆ, ಜಾತಿಭೇದ, ಪರಕೀಯತೆ, ಸ್ತ್ರೀತ್ವ, ಬಡತನ – ಇವೆಲ್ಲ ಕಾಲ್ಪನಿಕ ದೋಷಗಳು. ಅರ್ಹತೆಯುಳ್ಳ ಗುಣಶಾಲಿಯನ್ನು ಅಸ್ಪೃಶ್ಯನೆಂದೋ, ಅನ್ಯಪಕ್ಷದವನೆಂದೋ, ಹೆಂಗಸೆಂದೋ ಉಪೇಕ್ಷಿಸಿ ನಿಂದಿಸುವುದೇ ಈ ಕಾಲದಲ್ಲಿ ಅಧಿಕ. ''ಸ್ತ್ರೀಯಃ ಶ್ರಿಯಶ್ಚ ಗೇಹೇಷು ನ ವಿಶೇಷೋऽಸ್ತಿ ಕಶ್ಚನ'', ''ಶೂದ್ರೋऽಪಿ ಗುಣವಾನ್ ಪೂಜ್ಯಃ'', ''ವಸುಧೈವ ಕುಟುಂಬಕಂ'' ಮುಂತಾದ ನೀತಿವಚನಗಳನ್ನು ನಾವು ಮರೆತುಬಿಟ್ಟಿದ್ದೇವೆ. ನೆನಪಾದರೂ ಬಲವತ್ತರವಾದ ದೃಷ್ಟಿದೋಷ ಅವೆಲ್ಲವನ್ನೂ ಅದುಮುತ್ತದೆ. ಈ ದೋಷದ ಪರಿಹಾರಕ್ಕೆ ನಿಜವಾದ ಸಾರ್ಥಕ ವಿದ್ಯೆಯೊಂದೇ ಮದ್ದು.

ಅಲಬ್ಧಮೀಹೇದ್ಧರ್ಮೇಣ ಲಬ್ಧಂ ಯತ್ನೇನ ಪಾಲಯೇತ್ |
ಪಾಲಿತಂ ವರ್ಧಯೇನ್ನಿತ್ಯಂ ವೃದ್ಧಂ ಪಾತ್ರೇಷು ನಿಕ್ಷಿಪೇತ್ || || ೩೬ ||

– ಯಾಜ್ಞವಲ್ಕ್ಯ, ೧-೩೧೭

"ಧರ್ಮದಿಂದ ಹೊಸದನ್ನು ಸಂಪಾದಿಸಬೇಕು. ಸಂಪಾದಿಸಿದ್ದನ್ನು ಪ್ರಯತ್ನಪೂರ್ವಕವಾಗಿ ರಕ್ಷಿಸಬೇಕು. ರಕ್ಷಿಸಿದ್ದನ್ನು ನ್ಯಾಯಮಾರ್ಗದಲ್ಲಿ ಹೆಚ್ಚಿಸಬೇಕು. ಅದನ್ನು ಯೋಗ್ಯ ಪಾತ್ರದಲ್ಲಿ ಹಂಚಬೇಕು."

ಸಂಪಾದನೆಗೆ ಧರ್ಮಮಾರ್ಗವೆಂದರೆ ನ್ಯಾಯವಾದ ದುಡಿತ. ಯಾವುದು ನ್ಯಾಯ, ಯಾವುದು ಅನ್ಯಾಯವೆಂದು ಪ್ರತಿಯೊಬ್ಬನ ಅಂತಃಸಾಕ್ಷಿಗೂ ತಿಳಿದಿರುತ್ತದೆ. ಆದರೆ ಕಾಮ ಕ್ರೋಧಗಳ ಉಲ್ಬಣತೆಯಿಂದ ತಪ್ಪನ್ನೆಸಗುತ್ತಾನೆ. ಒಟ್ಟಿನಲ್ಲಿ ಇನ್ನೊಬ್ಬರ ಹಿತಕ್ಕೆ ಧಕ್ಕೆಯಾಗದಿರುವ ಮಾರ್ಗ ನ್ಯಾಯವೆಂಬುದು ಸಾಮಾನ್ಯ ನಿಯಮ.

ಸಂಪಾದನೆ, ವರ್ಧನೆ, ವಿನಿಯೋಗ — ಇವಿಷ್ಟು ಧರ್ಮಮೂಲವಾಗಿರಬೇಕು ಎಂಬುದು ನೀತಿಯ ತಿರುಳು. ಮೊದಲನೆಯದಾದ ಸಂಪಾದನೆಯಲ್ಲಿ ಅಧರ್ಮ ಇಣುಕಿತೆಂದರೆ ಉಳಿದವುಗಳಿಗೆ ಅದರ ಅಂಟು ತಪ್ಪಿದ್ದಲ್ಲ. ಸಾಲದ ಸಂಪಾದನೆ ದುಡಿತದಿಂದ ಬಂದದ್ದಲ್ಲ. ಕೆಲವು ಸಂದರ್ಭಗಳಲ್ಲಿ ಸಾಲ ಅನಿವಾರ್ಯವಾದರೂ ಅದರ ಪಾಲನೆ ಮೊದಲಾದ ಮೂರು ಹೇಗೆ ನಡೆಯುತ್ತವೆ ಎಂಬುದರ ಮೇಲೆ ಅದರ ಮೌಲ್ಯ ನಿಂತಿರುತ್ತದೆ. ಇದು ವ್ಯಕ್ತಿಗೆ ಅನ್ವಯಿಸುವಂತೆ ರಾಷ್ಟ್ರಕ್ಕೂ ಅನ್ವಯಿಸುತ್ತದೆ. ಸಾಲ ಮಾಡುವುದನ್ನು ಸರ್ಕಾರವೇ ಜನರಿಗೆ ಕಲಿಸಿಕೊಡುತ್ತಿರುವುದೊಂದು ವಿಪರ್ಯಾಸ. 'ಉತ್ತಮಂ ಸ್ವಾರ್ಜಿತಂ ವಿತ್ತಂ.'

ಸಂಪಾದಿಸಿದರೆ ಕರ್ತವ್ಯ ಮುಗಿಯಲಿಲ್ಲ. ಅದನ್ನು ರಕ್ಷಿಸಿ ಬೆಳೆಸಬೇಕು. ಆಮೇಲೆ 'ವೃದ್ಧಂ ಪಾತ್ರೇಷು ನಿಕ್ಷಿಪೇತ್' – ಯೋಗ್ಯಪಾತ್ರದಲ್ಲಿ ಅದನ್ನು ಹಂಚಬೇಕು. ಸಂಪಾದನೆಗೆ ವಿನಿಯೋಗದಲ್ಲಿ ಮುಕ್ತಾಯ. 'ಆದಾನಂ ಹಿ ವಿಸರ್ಗಾಯ.' ಇದು ಒಂದು ನಿಯಮ.

ಮೇಲಿನ ಶ್ಲೋಕದಲ್ಲಿನ ವಿಷಯ ವಿದ್ಯೆಗೂ ಸಂಬಂಧಿಸುತ್ತದೆ. ವಿದ್ಯೆಯನ್ನು ಸಂಪಾದಿಸಿ, ರಕ್ಷಿಸಿ, ಬೆಳೆಸಿ, ಅರ್ಹನಾದ ಶಿಷ್ಯನಿಗೆ ಬೋಧಿಸಬೇಕು. ಉಪಾಧ್ಯಾಯನಲ್ಲದವನೂ ತನ್ನ ವಿದ್ಯೆಗೆ ಅನುಗುಣವಾಗಿ ಜನೋಪಯುಕ್ತ ಕಾರ್ಯವನ್ನು ಮಾಡಿದರೆ ಸಾಲವನ್ನು ತೀರಿಸಿದಂತೆ.

ಹಣವನ್ನು ಬಿಟ್ಟರೆ ಪ್ರಿಯವಾದದ್ದು ಕೀರ್ತಿ. ಧನಪಿಶಾಚಕ್ಕಿಂತ ಕೀರ್ತಿಶನಿಯ ಕಾಟ ಹೆಚ್ಚಿನದು. ಭ್ರಷ್ಟಾಚಾರದಿಂದ ಹಣವನ್ನು ಸೇರಿಸಿದಂತೆ ದುಷ್ಟಾಚಾರದಿಂದ ಕೀರ್ತಿಯನ್ನು ಗಳಿಸಿದವರೂ ಉಂಟು. ಹಣವನ್ನು ಮನುಷ್ಯನು ಬಚ್ಚಿಡುತ್ತಾನೆ, ಕೀರ್ತಿಯನ್ನು ಮಾತ್ರ ಎಲ್ಲೆಲ್ಲಿಯೂ ಹಂಚಲು ಆಶಿಸುತ್ತಾನೆ. ವಿದ್ಯೆ, ಧನ, ಕೀರ್ತಿ – ಯಾವುದೇ ಆಗಲಿ ಆರ್ಜನೆಯ ಮಾರ್ಗ ಶುದ್ಧವಾದರೆ ಉಳಿದವೂ ಶುದ್ಧವಾಗಿರುತ್ತವೆ.

**ಪಕ್ಷವಿಕಲಶ್ಚ ಪಕ್ಷೀ ಶುಷ್ಕಶ್ಚ ತರುಃ ಸರಶ್ಚ ಜಲಹೀನಮ್ |**
**ಸರ್ಪಶ್ಚೋದ್ಧೃತದಂಷ್ಟ್ರಃ ತುಲ್ಯಂ ಲೋಕೇ ದರಿದ್ರಶ್ಚ || ||೩೭||**

**– ಮೃಚ್ಛಕಟಿಕ**

"ರೆಕ್ಕೆಯಿಲ್ಲದ ಹಕ್ಕಿ, ಒಣಗಿದ ಮರ, ನೀರಿಲ್ಲದ ಕೊಳ, ಹಲ್ಲು ಕಿತ್ತ ಹಾವು, ಬಡವ – ಇವರೆಲ್ಲ ಲೋಕದಲ್ಲಿ ಸಮಾನ."

ಹಕ್ಕಿಯ ಬಲ ರೆಕ್ಕೆಯಲ್ಲಿ. ರೆಕ್ಕೆಯಿಂದ ಅದು ತನ್ನನ್ನು ಕಾಪಾಡಿಕೊಂಡಿದೆ. ಅದರ ಸಹಾಯದಿಂದ ಯಥೇಷ್ಟವಾಗಿ ಹಾರಾಡಿ ತನ್ನ ಆಹಾರವನ್ನು ಸಂಪಾದಿಸಿಕೊಳ್ಳುತ್ತದೆ. ರೆಕ್ಕೆಯಿಂದ ಅದಕ್ಕೆ ಸೌಂದರ್ಯ. ರೆಕ್ಕೆಯನ್ನು ಕಿತ್ತರೆ ಹಕ್ಕಿಯು ಹುಳುವಿಗೆ ಸಮಾನ. ಮಾನವರಾಕ್ಷಸನ ಕೈಗೆ ಸಿಕ್ಕಿ ಅದರ ವಂಶವೇ ನಿರ್ನಾಮವಾದೀತು.

ಒಣಗಿದ ಮರದಿಂದ ಯಾವ ಪ್ರಯೋಜನ ? ಹಕ್ಕಿಗಳಿಗೆ ಆಸರೆ ಯಾಗದು. ನೆರಳನ್ನು ಕೊಡಲಾರದು. ಹೂಹಣ್ಣುಗಳನ್ನು ನೀಡಲಾರದು. ಯಾರ ಮನೆಗೋ ಸೌದೆಯಾಗಿ ಬೂದಿಯಾಗಬೇಕಲ್ಲದೆ ಬೇರೆ ಗತಿಯಿಲ್ಲ. ಅದಕ್ಕೆ ಪಶುಪಕ್ಷಿಗಳಿಂದಲೂ ಮನ್ನಣೆ ಇಲ್ಲ.

ನೀರಿಲ್ಲದ ಕೊಳವೂ ಅಷ್ಟೆ. ಅದು ಯಾರಿಗೂ ಬೇಡವಾದ ವಸ್ತು. ಆದನ್ನು ಕಣ್ಣೆತ್ತಿ ನೋಡತಕ್ಕವರೂ ಇಲ್ಲ. ಅದರ ಸ್ಥಿತಿ ಶೋಚನೀಯ.

ಹಾವಿಗೆ ವಿಷದ ಹಲ್ಲೇ ಬಲ. ವಿಷವಿಲ್ಲದ ಹಾವು ಮಕ್ಕಳ ಆಟಿಕೆ; ಹಾವಾಡಿಗನ ಜೀವನೋಪಾಯ. ಅವನು ಪುಂಗಿ ಊದಿದಂತೆ ತಲೆಯಾಡಿಸಿದರೆ ಮಾತ್ರ ಹೊಟ್ಟೆಗೆ ಏನಾದರೂ ಸಿಕ್ಕೀತು. ಹೇಗಿದ್ದರೂ ಅದು ವಾಯುಭಕ್ಷಕ!

ಹಣವಿಲ್ಲದವರ ಪರಿಸ್ಥಿತಿಯೂ ಅದೇ. ಹಕ್ಕಿಯಂತೆ ಹಾರಿ ಕಷ್ಟದಿಂದ ತಪ್ಪಿಸಿಕೊಳ್ಳಲಾರ. ಒಣಗಿದ ಮರದಂತೆ ಸತ್ತ್ವಹೀನ. ನೀರಿಲ್ಲದ ಕೊಳದಂತೆ ನಿರುಪಯೋಗಿ. ಹಲ್ಲುಮುರಿದ ಹಾವಿನಂತೆ ಎಲ್ಲರ ಆಟಿಕೆಯ ವಸ್ತು. ಇಲ್ಲಿ ದರಿದ್ರನೇ ವರ್ಣನೆಗೆ ಉಪಮೇಯ. ಉಳಿದವು ಉಪಮಾನ. ದರಿದ್ರನೆಂದರೆ ಧನಹೀನನಷ್ಟೆ. ಧನಿಕನು ಯಾವ ಕೆಡುಕನ್ನು ಮಾಡಬಲ್ಲನೆಂಬುದು ಇಲ್ಲಿ ಸೂಚ್ಯ. ಒಣಮರ ಬೆಂಕಿಗೆ ಆಶ್ರಯವಿತ್ತು ಸುತ್ತಮುತ್ತಲಿನ ಪರಿಸರವನ್ನು ಸುಟ್ಟುಹಾಕೀತು. ನೀರು ತುಂಬಿದ ಕೊಳ ನೀರು ಕುಡಿಯಲು ಬಂದವರನ್ನು ಸೆಳೆದು ಮುಳುಗಿಸೀತು. ಮೇಲೆ ನೀರಿದ್ದರೂ ಕೆಳಗೆ ಕೆಸರು. ಹಾವಿಗೆ ವಿಷದ ಹಲ್ಲಿದ್ದಂತೆ ದುಷ್ಟ ಧನಿಕನಿಗೆ ಧನ !

ಹಣದ ಗುಣದೋಷಗಳೆರಡನ್ನೂ ಕವಿ ಮೇಲ್ಕಂಡ ಶ್ಲೋಕದಲ್ಲಿ ಸೂಚಿಸಿದ್ದಾನೆ. ಮಹಾಕವಿಯ ಮಾತು ಕಬ್ಬಿನ ಜಲ್ಲೆ ಇದ್ದಂತೆ. ಅದನ್ನು ಜಗಿದು ರಸವನ್ನು ಹೀರುವವನು ರಸಿಕ. ರಸಿಕನಿಂದ ಕಾವ್ಯಕ್ಕೆ ಶೋಭೆ. 'ರಸಿಕವಿಹೀನಂ ಕಾವ್ಯಂ ತುಲ್ಯಂ ಲೋಕೇ ದರಿದ್ರಶ್ಚ.'

**ಸರ್ವೇಷಾಮೇವ ಶೌಚಾನಾಮರ್ಥಶೌಚಂ ಪರಂ ಸ್ಮೃತಮ್ ।**
**ಯೋಽರ್ಥೇ ಶುಚಿಃ ಸ ಹಿ ಶುಚಿರ್ನ ಮೃದ್ವಾದಿಶುಚಿಃ ಶುಚಿಃ ॥ ॥ ೩೮ ॥**

– ಮನುಸ್ಮೃತಿ, ೫-೧೦೬

''ಎಲ್ಲ ರೀತಿಯ ಶೌಚಗಳಲ್ಲಿ ಅರ್ಥಶೌಚ ಶ್ರೇಷ್ಠವಾದದ್ದು. ಯಾವಾತನು ಹಣಕಾಸಿನ ವ್ಯವಹಾರದಲ್ಲಿ ಶುಚಿಯೋ ಅವನೇ ಶುಚಿ,

ಮಣ್ಣು, ನೀರು ಮೊದಲಾದ್ದರಿಂದ ತೊಳೆದುಕೊಂಡ ಮಾತ್ರಕ್ಕೆ ಅವನು ಶುಚಿಯಲ್ಲ.''

ಶೌಚವೆಂದರೆ ಶುದ್ಧಿ. ಮೈ, ಮಾತು, ಮನಸ್ಸು—ಈ ಮೂರರ ಶುದ್ಧಿ. ಮೈ, ಬಟ್ಟೆ, ಮನೆ – ಮೊದಲಾದುವನ್ನು ಸ್ವಚ್ಛವಾಗಿಟ್ಟುಕೊಳ್ಳುವುದು ಬಾಹ್ಯಶೌಚ. ಆರೋಗ್ಯ, ಅಲಂಕಾರಗಳ ದೃಷ್ಟಿಯಿಂದ ಇದು ಎಲ್ಲರಿಗೂ ಬೇಕಾಗಿದೆ. ಸುಲಭವೂ ಹೌದು. ಎರಡನೆಯದು ಮಾತಿನ ಶುದ್ಧಿ. ಇದು ಸ್ವಲ್ಪ ಕಠಿಣ. ನಾಲಗೆಯನ್ನು ಹತೋಟಿಯಲ್ಲಿಡುವುದು ಅಷ್ಟು ಸುಲಭವಲ್ಲ. ಎಂತಹ ಸಂದರ್ಭದಲ್ಲಿಯೂ ಇನ್ನೊಬ್ಬರಿಗೆ ನೋವನ್ನುಂಟುಮಾಡದೆ ಸತ್ಯವೂ ಪ್ರಿಯವೂ ಹಿತಕರವೂ ಆದ ಮಾತನ್ನಾಡುವುದು ವಾಕ್‌ಶುದ್ಧಿ. ಮಾತು ಮನಸ್ಸಿನ ಕೈಗನ್ನಡಿ ಎನ್ನುತ್ತಾರೆ. ಆದರೂ ಮನಸ್ಸಿನ ಕೊಳೆಯನ್ನು ಅದುಮಿ ಜೇನಿನಂತಹ ಮಾತಾಡುವ ಜಾಣರು ಇದ್ದಾರಲ್ಲವೆ ! ಆದ್ದರಿಂದ ಇವೆರಡಕ್ಕಿಂತ ಮನಃಶೌಚ ತುಂಬ ಕಠಿಣ. ಈ ಮೂರು ಯಾರಿಗೆ ಶುದ್ಧವಾಗಿದೆಯೋ ಅವನು ತ್ರಿಕರಣಶುದ್ಧ.

ಅರ್ಥಶೌಚ ಮುಖ್ಯವಾಗಿ ಮನಸ್ಸಿಗೆ ಸಂಬಂಧಿಸಿದ್ದೇ. ಅನ್ಯರ ಆಸ್ತಿಗೆ ಕಣ್ಣು ಹಾಯಿಸುವುದು ಅರ್ಥಕ್ಕೆ ಸಂಬಂಧಿಸಿದ ಮೊದಲನೆಯ ಕೊಳೆ. ಕಳ್ಳತನ, ಮೋಸ – ಮೊದಲಾದ ಕುತ್ಸಿತಮಾರ್ಗದಿಂದ ಸಂಪಾದಿಸುವುದು ಎರಡನೆಯ ಕೊಳೆ. ಲಾಟರಿ, ಜೂಜುಗಳಿಂದ ಗಳಿಸುವುದು ಮೂರನೆಯದು. ತನ್ನ ಆವಶ್ಯಕತೆಗಿಂತ ಹೆಚ್ಚನ್ನು ತಂದು ತುಂಬಿಸುವುದು ಪಾಪವೆನ್ನುತ್ತದೆ ಧರ್ಮಶಾಸ್ತ್ರ. ಹಾಗೆ ಶೇಖರಿಸುವುದು ಲಕ್ಷ್ಮಿಯನ್ನು ಸೆರೆಯಲ್ಲಿಟ್ಟಂತೆ. ಸಂಪಾದನೆಯಂತೆ ಹಣದ ವಿನಿಯೋಗವೂ ಲೋಕಹಿತಕ್ಕೆ ಮತ್ತು ಆತ್ಮಹಿತಕ್ಕೆ ಕಾರಣವಾದಲ್ಲಿ ಮಾತ್ರ ಅರ್ಥಶೌಚ. ಇನ್ನೊಬ್ಬರಿಗೆ ಸಾಲವನ್ನು ನೀಡಿದಾಗ ಅಥವಾ ದಾನಮಾಡಿದಾಗ ಅದರ ಬಳಕೆ ಹೇಗಾಗುತ್ತದೆಂಬುದು ಚಿಂತನೀಯ. ಕೊಡುವ ಮತ್ತು ಕೊಳ್ಳುವ ಹಣಕಾಸಿನ ವ್ಯವಹಾರ ತುಂಬ ಜಟಿಲವಾದ್ದರಿಂದಲೇ 'ಅರ್ಥಶೌಚಂ ಪರಂ ಸ್ಮೃತಮ್.'

ಹೊನ್ನು, ಹೆಣ್ಣು, ಮಣ್ಣು — ಇವು ಮೂರು ಮುಪ್ಪುರಿಗೊಂಡ ಮಾಯಾಪಾಶವೆಂದು ದಾಸರು ಹಾಡಿದ್ದಾರೆ. ಹೊನ್ನಿನ ಆಸೆಯನ್ನು ಗೆದ್ದವರು

ಅತಿವಿರಳ. ಹಣವೆಂದರೆ ಹೆಣವೂ ಬಾಯಿ ಬಿಡುವುದಂತೆ. ಲೋಕದಲ್ಲಿ ಹಣಕಾಸಿನ ದುರ್ವ್ಯವಹಾರವೇ ಅಧಿಕ.

ಅಶ್ವಃ ಶಸ್ತ್ರಂ ಶಾಸ್ತ್ರಂ ವೀಣಾ ವಾಣೀ ನರಶ್ಚ ನಾರೀ ಚ |
ಪುರುಷವಿಶೇಷಂ ಪ್ರಾಪ್ಯ ಭವಂತ್ಯಯೋಗ್ಯಾಶ್ಚ ಯೋಗ್ಯಾಶ್ಚ || || ೩೯ ||

– ಹಿತೋಪದೇಶ

"ಕುದುರೆ, ಆಯುಧ, ಶಾಸ್ತ್ರ, ವೀಣಾ, ವಾಣಿ, ಗಂಡಸು, ಹೆಂಗಸು– ಇವರು ವಿಶಿಷ್ಟ ವ್ಯಕ್ತಿಯೊಡನೆ ಸೇರಿದಾಗ ಅನುಗುಣವಾಗಿ ಯೋಗ್ಯರಾಗುತ್ತಾರೆ, ಅಯೋಗ್ಯರೂ ಆಗುತ್ತಾರೆ."

ಪ್ರತಿಯೊಂದು ವಸ್ತುವಿನ ಅರ್ಹತೆಯೂ ಅದನ್ನು ಬಳಸುವಾತನ ಯೋಗ್ಯತೆಯನ್ನು ಅವಲಂಬಿಸಿರುತ್ತದೆ. ಕುದುರೆ ಮೊದಲಾದವು ಶ್ರೇಷ್ಠ ಗುಣಗಳನ್ನು ಪಡೆದಿದ್ದರೂ ಆ ಗುಣಗಳ ಅಭಿವ್ಯಕ್ತಿ ಆಶ್ರಯದಾತನಿಗೆ ತಕ್ಕಂತೆ ಆಗುತ್ತದೆ. ಕನ್ನಡಿಯು ಸ್ವಚ್ಛವಾಗಿದ್ದರೆ ಸೂರ್ಯನ ಪ್ರತಿಬಿಂಬ ಚೆನ್ನಾಗಿ ಮೂಡುತ್ತದೆ. ಕನ್ನಡಿ ಕೊಳೆಯಾಗಿದ್ದರೆ ಪ್ರತಿಬಿಂಬವೂ ಮಾಸಲಾಗುವುದು. ಸವಾರನು ಅಶ್ವಹೃದಯವನ್ನು ಬಲ್ಲವನಾದರೆ ಕುದುರೆಗೆ ಕೀರ್ತಿ. ಜೂಜಿನ ಕುದುರೆ ಜಾಕಿಯ ಚಾಣಾಕ್ಷತೆಯನ್ನು ಅವಲಂಬಿಸಿರುತ್ತದಲ್ಲವೇ ?

ಅರ್ಜುನನಂತಹ ವೀರನ ಕೈ ಸೇರಿ ಗಾಂಡೀವಧನುಸ್ಸು ಲೋಕವಿಖ್ಯಾತವಾಯಿತು; ಮೂರುಲೋಕದ ಗಂಡನೆಂಬ ಕೀರ್ತಿಯನ್ನು ಅವನಿಗೆ ತಂದುಕೊಟ್ಟಿತು. ಉತ್ತರಕುಮಾರನಾದರೋ ಗಾಂಡೀವವನ್ನು ಮುಟ್ಟಲಾರದೆ ತಲ್ಲಣಿಸಿಹೋದ. ಶ್ರೀರಾಮನ ಕೈ ಸೇರಿದ ಕೋದಂಡಧನುಸ್ಸು ಶಿಷ್ಟರಕ್ಷಣೆ ಮಾಡಿತು. ವಾದನಪಟು ಚೌಡಯ್ಯನವರಂಥವರ ಕೈಯಲ್ಲಿ ಪಿಟೀಲು ಮಾತಾಡುತ್ತದೆ. ಪಾಟವವಿಲ್ಲದವರ ಕೈಯಲ್ಲಿ ನೇತಾಡುತ್ತದೆ ! ವ್ಯಾಸ, ವಾಲ್ಮೀಕಿ, ಕಾಳಿದಾಸಾದಿಗಳ ವಾಣಿ ಅಮರವಾಗಿ ಉಳಿದು ಲೋಕಕಲ್ಯಾಣ

ಮಾಡುತ್ತದೆ. ಪರಮಹಂಸರ ವಾಣಿ ವಿವೇಕಾನಂದರನ್ನೂ, ಗಾಂಧಿಜೀಯವರ ವಾಣಿ ಸ್ವಾತಂತ್ರ್ಯವೀರರನ್ನೂ ಸೃಷ್ಟಿಸುತ್ತದೆ. ಅನಾಮಧೇಯನ ವಾಣಿ ಕಸದಬುಟ್ಟಿ ಸೇರುತ್ತದೆ !

ನರ ನಾರಿಯರ ಪರಿಸ್ಥಿತಿಯೂ ಅಷ್ಟೇ. ಹನುಮಂತ ಕಾಡಿನಲ್ಲಿ ಅಲೆದಾಡಿಕೊಂಡಿದ್ದ ಒಬ್ಬ ಸಾಮಾನ್ಯ ವ್ಯಕ್ತಿ. ಅವನಲ್ಲಿ ಸಾಮರ್ಥ್ಯಗಳೇನಿದ್ದರೂ ಬೆಳಕಿಗೆ ಬಂದದ್ದು ಶ್ರೀರಾಮನ ಆಶ್ರಯ ದೊರಕಿದ ಮೇಲೆ. ಇನ್ನೆಲ್ಲೂ ಕಾಣಸಿಗದ ಅಸಾಧಾರಣವಾದ ಕಾರ್ಯನಿಷ್ಠೆ, ಪರಾಕ್ರಮ, ದೈವಭಕ್ತಿ – ಮೊದಲಾದವು ಅವನಲ್ಲಿ ಅಭಿವ್ಯಕ್ತವಾದವು. ಸಾಮಾನ್ಯ ಸ್ತ್ರೀಯಾಗಿದ್ದ ನೂರ್‌ಜಹಾನ್ 'ಸೌಂದರ್ಯದ ರಾಣಿ' ಮತ್ತು 'ಆಡಳಿತ ದಕ್ಷೆ' ಎನಿಸಿದ್ದು ಜಹಾಂಗೀರ್ ಚಕ್ರವರ್ತಿಯ ಕೈಹಿಡಿದದ್ದರಿಂದ. ತಾತ್ಪರ್ಯವಿಷ್ಟೆ : 'ಅನಾಶ್ರಯಾ ನ ಶೋಭಂತೇ ಪಂಡಿತಾ ವನಿತಾ ಲತಾಃ': ಪಂಡಿತರೂ, ವನಿತೆಯರೂ, ಲತೆಗಳೂ ಆಶ್ರಯವಿಲ್ಲದಿದ್ದರೆ ಶೋಭಿಸುವುದಿಲ್ಲ ಎಂಬ ನೀತಿವಚನ ಸಾರ್ವತ್ರಿಕವಾದದ್ದು. ಬಡವರ ಬೆರಳಿನಲ್ಲಿರುವ ಚಿನ್ನದ ಉಂಗುರ ರೋಲ್ಡ್ ಗೋಲ್ಡ್‌ನದೇ ಸರಿ ! ರಾಜನ ಹಣೆಯಲ್ಲಿ ಕೆಸರಿದ್ದರೂ ಕಸ್ತೂರಿಯೇ ಸರಿ !

**ತೃಣಾನಿ ಭೂಮಿರುದಕಂ ವಾಕ್ ಚತುರ್ಥೀ ಚ ಸೂನೃತಾ |**
**ಏತಾನಿ ತು ಸತಾಂ ಗೇಹೇ ನೋಚ್ಛಿದ್ಯಂತೇ ಕದಾಚನ || || ೪೦ ||**

– ಮಹಾಭಾರತ, ಉದ್ಯೋಗಪರ್ವ, ೩೬-೩೪

"ಸಜ್ಜನರ ಮನೆಗಳಲ್ಲಿ ಹುಲ್ಲು, ನೆಲ, ನೀರು, ನಾಲ್ಕನೆಯದಾಗಿ ಒಳ್ಳೆಯ ಮಾತು – ಇವು ಎಂದಿಗೂ ಇಲ್ಲದೆ ಇರುವುದಿಲ್ಲ."

ವಿದುರನು ಧೃತರಾಷ್ಟ್ರನಿಗೆ ಹೇಳಿದ ಮಾತಿದು. ಮನೆಗೆ ಬಂದ ಅತಿಥಿಯನ್ನು ಉಪಚರಿಸಬೇಕೆಂಬುದು ಸಭ್ಯಸಮಾಜವು ಎಲ್ಲೆಡೆಯೂ ಒಪ್ಪಿಕೊಂಡಿರುವ ಒಂದು ಪದ್ಧತಿ. ಇದೇ ಅತಿಥಿಸತ್ಕಾರ. ಭಾರತೀಯ

ನಾಗರಿಕತೆಯ ಇತಿಹಾಸದಲ್ಲಿ ಇದು ಹಳೆಯ ಶಬ್ದ. 'ಅತಿಥಿದೇವೋ ಭವ' ಎನ್ನುತ್ತದೆ ಉಪನಿಷತ್ತು. ತಿಥಿ ಇಲ್ಲದೆ, ಎಂದರೆ ಬರುವ ನಿರ್ದೇಶವಿಲ್ಲದೆ ಬರತಕ್ಕವರು ಅತಿಥಿಗಳು.

ವಾಜಶ್ರವಸ್ಸಿನ ಮಗ ನಚಿಕೇತನು ಯಮನ ಮನೆಗೆ ಹೋದಾಗ ಯಮನು ಇರಲಿಲ್ಲವಂತೆ. ಅವನಿಗಾಗಿ ಕಾಯುತ್ತ ನಚಿಕೇತ ಅಲ್ಲಿಯೇ ಕುಳಿತ. ಅವನನ್ನು ಯಾರೂ ಸತ್ಕರಿಸಲಿಲ್ಲವೋ, ಅಥವಾ ಯಮನನ್ನು ಕಾಣದೆ ಯಾವ ಆತಿಥ್ಯವನ್ನೂ ಸ್ವೀಕರಿಸುವುದಿಲ್ಲವೆಂದು ಈತನೇ ಹಠತೊಟ್ಟನೋ, ಅಂತೂ ಮೂರು ದಿವಸ ನಚಿಕೇತ ಉಪವಾಸವಿದ್ದ. ಯಮನು ಬಂದಾಗ ಈ ವಿಷಯ ಗೊತ್ತಾಗಿ ಅವನಿಗೆ ಬಹಳ ವ್ಯಥೆಯಾಯಿತು. "ಅಪ್ಪಾ ನಚಿಕೇತ, ನನ್ನಿಂದಾಗಿ ನೀನು ಮೂರು ದಿನ ಉಪವಾಸವಿರುವಂತಾಯಿತು. ನನಗೆ ತುಂಬ ಖೇದವಾಗಿದೆ. ಅದಕ್ಕೆ ಪರಿಹಾರವಾಗಿ ನಿನಗೆ ಮೂರು ವರಗಳನ್ನು ಕೊಡುತ್ತೇನೆ" – ಎಂದು ಯಮನು ಹೇಳಿದನಂತೆ.

ರಾಮಾಯಣ–ಮಹಾಭಾರತಗಳಲ್ಲಿ ಅತಿಥಿಸತ್ಕಾರದ ಕಥೆಗಳು ವಿಪುಲವಾಗಿ ಬರುತ್ತವೆ.

ಮನೆಯೆಂದಮೇಲೆ ಕುಳಿತುಕೊಳ್ಳಲು ಒಂದು ಹುಲ್ಲಿನ ಚಾಪೆ ಇರದೆ? ನೆಲ ಇರದೆ ? ಕುಡಿಯಲು ನೀರು ಸಿಗದಿದ್ದೀತೆ ? ಹೋಗಲಿ, ಒಂದು ಒಳ್ಳೆಯ ಮಾತನ್ನಾಡಿ ಕಳಿಸಲು ಆಗುವ ತೊಂದರೆ ಏನು ? ವಿದುರನು ಹೇಳಿದ್ದು ಸೂನೃತಾ ವಾಕ್. ಸತ್ಯವೂ ಪ್ರಿಯವೂ ಆದ ನುಡಿ ಸೂನೃತ. ಅದನ್ನು ಹೇಳಿದರೆ ಪ್ರತಿಯೊಬ್ಬರಿಗೂ ಹಿತವೆನಿಸುತ್ತದೆ. ಸಮಾಧಾನ ಸಂತೋಷಗಳಾಗುತ್ತವೆ. 'ವಚನೇ ಕಾ ದರಿದ್ರತಾ ?'

ಈ ವಾಕ್ಯನ್ನು ನಾಲ್ಕನೆಯದಾಗಿ ಹೇಳಿದ್ದರೂ ಕನಿಷ್ಠವಾದ್ದಲ್ಲ. ಉಳಿದ ಉಪಚಾರಗಳಿಗಿಂತ ಇದೇ ಮುಖ್ಯವಾದದ್ದು. 'ವಾಚಾ ಧರ್ಮಮವಾಪ್ನುಹಿ' ಎಂದು ಸೀತೆ ಹನುಮಂತನಿಗೆ ಹೇಳುತ್ತಾಳೆ. ತನ್ನ ಕಷ್ಟಸ್ಥಿತಿಯನ್ನು ರಾಮನಿಗೆ ತಿಳಿಸಿದರೆ ಸಾಕು, ಆ ಮಾತಿನಿಂದಲೇ ನಿನಗೆ ಪುಣ್ಯವುಂಟು — ಎನ್ನುತ್ತಾಳೆ.

ಈಗಿನ ಅಭಾವ ಪರಿಸ್ಥಿತಿಯಲ್ಲಿ ಒಳ್ಳೆಯ ಮಾತಿಗೂ ಅಭಾವ ಬಂದಿದೆ! ಕಛೇರಿಗಳಲ್ಲಿ ಅಧಿಕಾರಿಗಳಿಂದ, ಗುಮಾಸ್ತರಿಂದ ಕೆಲಸವಾಗುವುದಿರಲಿ, ಹಿತವಾದ ಮಾತನ್ನು ಕೇಳುವುದೂ ಕಠಿಣ. ಆಸ್ಪತ್ರೆಗಳಲ್ಲಿ ಔಷಧೋಪಚಾರ ಗಳಿಗೆ ಬಂದಿರುವಂತೆ ಸೂನೃತಾ ವಾಕ್ಕಿಗೂ ಬಡತನ ಬಂದಿದೆ. ಯಾವ ಖರ್ಚೂ ಇಲ್ಲದೆ ಒಬ್ಬರನ್ನು ಸಂತೋಷಪಡಿಸುವ, ಉಪಕಾರ ಮಾಡುವ ಸಾಧನ ಸೂನೃತಾ ವಾಕ್.

ದುರ್ಜನಸ್ಯ ಶ್ವಪುಚ್ಛಸ್ಯ ವ್ಯಾಲಸ್ಯೋಷ್ಟ್ರಗಲಸ್ಯ ಚ |
ನ ಮಂತ್ರೈರ್ನೌಷಧೈರ್ವಾಪಿ ಋಜುತಾ ಜಾತು ಜಾಯತೇ || || ೪೧ ||

– ರಾಮಾಯಣ ಮಂಜರೀ, ಯುದ್ಧಕಾಂಡ, ೩೭೩

"ದುರ್ಜನ, ನಾಯಿಯ ಬಾಲ, ಹಾವು, ಒಂಟೆಯ ಕುತ್ತಿಗೆ —ಇವುಗಳನ್ನು ಮಂತ್ರಗಳಿಂದಾಗಲಿ ಔಷಧಗಳಿಂದಾಗಲಿ ನೆಟ್ಟಗೆ ಮಾಡಲು ಎಂದಿಗೂ ಸಾಧ್ಯವಿಲ್ಲ."

ನಾಯಿಬಾಲ, ಹಾವು ಮತ್ತು ಒಂಟೆಯ ಕುತ್ತಿಗೆ – ಇವು ಡೊಂಕಾಗಿರುವುದೇ ಅವುಗಳ ಸ್ವಭಾವ. ನಾಯಿಬಾಲವನ್ನು ನೇರವಾದ ಕೊಳವೆಯಲ್ಲಿ ತೂರಿಸಿದಾಗ ನೆಟ್ಟಗೆ ಕಾಣಿಸೀತು. ಕೊಳವೆಯನ್ನು ತೆಗೆದೊಡನೆ ಮತ್ತೆ ಡೊಂಕೇ ! ಇದರಂತೆ ದುರ್ಜನ. ನಾಯಿಬಾಲ ಮೊದಲಾದವುಗಳ ಆಕೃತಿ ವಕ್ರವಾದರೆ, ದುರ್ಜನನ ಗುಣಸ್ವಭಾವಗಳು ವಕ್ರ.

ರಾವಣನಿಗೆ ಮಾರೀಚ, ಹನುಮಂತ, ವಿಭೀಷಣ, ತಾಯಿ ಕೇಕಸಿ – ಎಲ್ಲರೂ ಸಾಕಷ್ಟು ಬುದ್ಧಿ ಹೇಳಿದರು. ಆದರೂ ಅವನು ಸೀತೆಯನ್ನು ರಾಮನಿಗೆ ಒಪ್ಪಿಸಲಿಲ್ಲ. "ಹೀಗೆಯೇ ಎರಡು ಸೀಳಾಗಿಹೋದೇನು; ಇನ್ನೊಬ್ಬನಿಗೆ ತಲೆಬಾಗುವುದಿಲ್ಲ. ಇದು ನನ್ನ ಸ್ವಭಾವ. ಸ್ವಭಾವೋ ದುರತಿಕ್ರಮಃ" – ಎಂದು ಹೇಳಿಬಿಟ್ಟ. ಹಾಗೆಯೇ ದುರ್ಯೋಧನ. "ಜಾನಾಮ್ಯಧರ್ಮಂ ನ ಚ ಮೇ ನಿವೃತ್ತಿಃ – ನನ್ನದು ಅಧರ್ಮವೆಂದು

ಗೊತ್ತು. ಆದರೂ ಅದಕ್ಕೆ ಹಿಂಜರಿಯುವುದಿಲ್ಲ !'' ಎಂದು ಹೇಳಿದ ಛಲಗಾರ ಅವನು. ಧೃತರಾಷ್ಟ್ರ ಇನ್ನೇನು ? ವಿದುರಾದಿಗಳು ಎಷ್ಟು ಹೇಳಿದರೂ ಅವನ ಮನಸ್ಸು ವಕ್ರವಾಗಿಯೇ ಇತ್ತು. ಕಣ್ಣಿನಂತೆ ಮನಸ್ಸೂ ಕುರುಡು. ಸರ್ವನಾಶವಾದರೂ ಅವನಿಗೆ ಬುದ್ಧಿ ಬರಲಿಲ್ಲ. ಭೀಮನನ್ನು ಕೊಲ್ಲಬೇಕೆಂದು ಕಬ್ಬಿಣದ ಪ್ರತಿಮೆಗೆ 'ಧೃತರಾಷ್ಟ್ರಾಲಿಂಗನ'ವನ್ನು ನೀಡಿದವನು ಆತ !

ಸ್ವಭಾವೋ ದುರತಿಕ್ರಮಃ ಎಂಬುದನ್ನು ಚಾರಿತ್ರಿಕ ಪ್ರಸಂಗಗಳಲ್ಲಿಯೂ ಕಾಣಬಹುದು. ಜಯಚಂದ್ರನು ಪೃಥ್ವೀರಾಜನ ಮೇಲಿನ ದ್ವೇಷದಿಂದ ಘೋರಿ ಮಹಮ್ಮದನಿಗೆ ಆಹ್ವಾನವಿತ್ತು ಮಾರಿಯನ್ನು ಮನೆಗೆ ಕರೆತಂದ. ಸುಂದರಪಾಂಡ್ಯನು ಅಣ್ಣನಾದ ವೀರಪಾಂಡ್ಯನನ್ನು ಮುಳುಗಿಸುವುದಕ್ಕಾಗಿ ದಿಲ್ಲಿಯಿಂದ ಅಲ್ಲಾಉದ್ದೀನನ ಸೇನೆಯನ್ನು ದಕ್ಷಿಣಕ್ಕೆ ಕರೆಸಿದ. ತಾನೂ ಮುಳುಗಿದ.

ಇಂದಿನ ರಾಜಕೀಯ ಪಕ್ಷಗಳೂ ಈ ಸ್ವಭಾವಕ್ಕೆ ಅಪವಾದವಲ್ಲ. ಇನ್ನಾದರೂ ಒಗ್ಗಟ್ಟಿನಿಂದ ರಾಷ್ಟ್ರಕ್ಕೆ ಒದಗಿದ ಸವಾಲುಗಳನ್ನೆದುರಿಸಬೇಕೆಂಬ ಬುದ್ಧಿ ಹುಟ್ಟಿದೆಯೇನು ? ಪಕ್ಷ ಕುಸಿದುಹೋದರೂ ಹೋಗಲಿ, ನನ್ನ ಪ್ರತಿಷ್ಠೆಯನ್ನು ಬಿಡಲಾರೆ. ''ಹೀಗೆಯೇ ಸೀಳಿಹೋದೇನು, ಇನ್ನೊಬ್ಬರ ಮಾತಿಗೆ ಒಪ್ಪಲಾರೆ'' ಎಂಬ ರಾವಣಛಲ ಇವರದು.

ಮಂತ್ರಬಲೇನ ಭುಜಂಗಾ ಮುಗ್ಧಕುರಂಗಾಶ್ಚ ಕೂಟಯಂತ್ರೇಣ ।
ಸ್ಥಲಜಾಲೇನ ವಿಹಂಗಾ ಗೃಹ್ಯಂತೇ ಮಾನವಾಶ್ಚ ದಂಭೇನ ॥ ॥ ೪೨ ॥

– ಕಲಾವಿಲಾಸ

''ಸರ್ಪಗಳು ಮಂತ್ರಬಲದಿಂದಲೂ, ಏನೂ ಅರಿಯದ ಸರಳ ಸ್ವಭಾವದ ಜಿಂಕೆಗಳು ಬೋನಿನಿಂದಲೂ, ಹಕ್ಕಿಗಳು ಬಲೆಯಿಂದಲೂ ಹಿಡಿಯಲ್ಪಟ್ಟು ವಶವಾಗುತ್ತವೆ. ಮನುಷ್ಯರು ದಂಭಕ್ಕೆ ವಶರಾಗಿ ಸಿಕ್ಕಿಬೀಳುತ್ತಾರೆ.''

ಮಂತ್ರ, ಮೋಡಿ, ಇಂದ್ರಜಾಲಗಳಿಗೆ ಜನರು ವಶರಾಗುತ್ತಾರೆಂಬ ಒಂದು ನಂಬಿಕೆಯುಂಟು. ಮಂತ್ರಬಲದಿಂದ ಘೋರಸರ್ಪಗಳನ್ನು ವಶಪಡಿಸಿ ಹಿಡಿಯಬಹುದಂತೆ. ಜಿಂಕೆಗಳಂತಹ ಮುಗ್ಧಪ್ರಾಣಿಗಳನ್ನು ಕಪಟ ತಂತ್ರಗಳಿಂದ ಹಿಡಿಯಬಹುದು. ಗಗನದಲ್ಲಿ ಹಾರುವ ಚುರುಕಿನ ಹಕ್ಕಿಗಳೂ ಬಲೆಗಳಲ್ಲಿ ಸಿಕ್ಕಿಬೀಳುತ್ತವೆ. ಹಾಗೆಯೇ ಗಾಳ ಒಡ್ಡಿ ಮೀನನ್ನೂ, ಖೆಡ್ಡಾದಿಂದ ಆನೆಯನ್ನೂ ಮನುಷ್ಯನು ಹಿಡಿಯುತ್ತಾನೆ. ಇವೆಲ್ಲವನ್ನೂ ಹಿಡಿಯುವ ಮನುಷ್ಯನನ್ನು ಹಿಡಿದುಹಾಕುವುದು ಹೇಗೆ ? ಇವನಲ್ಲಿ ಸರ್ಪದ ಕ್ರೌರ್ಯ, ಜಿಂಕೆಯ ಚಟುಲತೆ, ಹಕ್ಕಿಯ ಚಾತುರ್ಯ, ಮೀನಿಗಿರುವ ನುಸುಳುವ ಶಕ್ತಿ, ಆನೆಯ ಬಲ – ಎಲ್ಲವೂ ಉಂಟು. ಇವನನ್ನು ಬುಟ್ಟಿಗೆ ಹಾಕಿಕೊಳ್ಳುವ ಉಪಾಯ ದಂಭವಂತೆ ! ದಂಭವೆಂದರೆ ಬೂಟಾಟಿಕೆ. ಕ್ಷೇಮೇಂದ್ರನು ದಂಭವನ್ನು ಮೂರಾಗಿ ವಿಂಗಡಿಸುತ್ತಾನೆ. ಜಟೆ ಬೆಳೆಸಿ, ರುದ್ರಾಕ್ಷಿ ಧರಿಸಿ, ನಾಮ ಹಾಕಿ, ಮುದ್ರೆಯೊತ್ತಿ ಜನರನ್ನು ಬಗಲಿಗೆ ಹಾಕಿಕೊಳ್ಳುವುದು 'ಬಕದಂಭ'. ಅದು ಬೇಡ, ಇದು ನಿಷಿದ್ಧ, ಮಡಿಮಡಿ – ಎಂದು ದೂರ ಸರಿಯುತ್ತ ಮುದುಡಿಕೊಳ್ಳುವುದು 'ಕೂರ್ಮದಂಭ'. ಮೆಲ್ಲಗೆ ಹೆಜ್ಜೆ ಯಿಡುವುದು, ಅತ್ತಿತ್ತ ನೋಡದೆ ಶಬ್ದವಾಗದಂತೆ ಸಾಗುವುದು – ಇದೆಲ್ಲ 'ಮಾರ್ಜಾಲದಂಭ'.

ಕ್ಷೇಮೇಂದ್ರನಿಗೆ ರಾಜಕೀಯ ದಂಭಗಳ ಪರಿಚಯವಿದ್ದಂತೆ ಕಾಣುವುದಿಲ್ಲ.

ಬಿಳಿಯ ಟೋಪಿ ಹಾಕಿಕೊಂಡು ಇನ್ನೊಬ್ಬರಿಗೆ ಟೋಪಿ ಹಾಕುವುದನ್ನು ಬಕದಂಭದಲ್ಲಿ ಸೇರಿಸಬಹುದು. "ಬಡವರ ಕಲ್ಯಾಣವೇ ನಮ್ಮ ಗುರಿ, ರೈತರೇ ದೇಶದ ಬೆನ್ನುಮೂಳೆ" ಇತ್ಯಾದಿ ಚರ್ವಿತಚರ್ವಣವನ್ನು ಗಾರ್ದಭದಂಭವೆನ್ನಬಹುದು. "ಧೂಮಪಾನ ಆರೋಗ್ಯಕ್ಕೆ ಹಾನಿ, ಅಹಿಂಸಾ ಪರಮೋ ಧರ್ಮಃ, ದೇವತೆಗಳಿಗೆ ಬಲಿಯರ್ಪಿಸುವುದು ಬರ್ಬರ (ಕುರಿ ಕೋಳಿಗಳನ್ನು ಮನೆಯಲ್ಲೇ ಕೊಯ್ದು ತಿನ್ನಬೇಕು), ಹೆಂಡ ಕುಡಿಯಬಾರದು (ವಿದೇಶೀ ಮದ್ಯಗಳನ್ನೇ ಕುಡಿಯಬೇಕು)" – ಮುಂತಾದ ಘೋಷಣೆ ಕೂರ್ಮದಂಭವಾದೀತು. "ಮೂರು ವರ್ಷಗಳಲ್ಲಿ ಕುಟುಂಬಕ್ಕೊಂದು ಮನೆ,

ಹಳ್ಳಿ ಹಳ್ಳಿಗೂ ವಿದ್ಯುತ್, ಹತ್ತು ಸಾವಿರ ಬಾವಿಗಳನ್ನು ತೋಡಿಸುವುದು ಈ ವರ್ಷದ ಗುರಿ'' – ಇತ್ಯಾದಿ ಕೋಳಿದಂಭ. ''ಸಹಳ ಜೀವನ, ಉನ್ನತ ಚಿಂತನ'', ''ಚಿನ್ನದ ಒಡವೆಗಳನ್ನು ಧರಿಸುವುದು ಆಡಂಬರ ಜೀವನ'' (ಚಿನ್ನದ ಗಟ್ಟಿಗಳನ್ನು ನೆಲಮಾಳಿಗೆಯಲ್ಲಿ ಹೂತಿಡಬೇಕು) – ಎಂಬುದು ಮಾರ್ಜಾಲದಂಭವಾದೀತು. ''ಅನ್ಯಭಾಷೆಗಳ ಬೋರ್ಡುಗಳಿಗೆ ಟಾರು ಲೇಪಿಸಿರಿ. ಮಾತೃಭಾಷೆಯೇ ಸಾರ್ವಭೌಮ. ಸಂಸ್ಕೃತವಂತೂ ಮುಷ್ಟಿಮೇಯ'' (ನಮ್ಮ ಮಕ್ಕಳನ್ನು ಕಾನ್ವೆಂಟಿಗೆ ಕಳಿಸುವುದು ತಪ್ಪಲ್ಲ ; ಅದು ವೈಯಕ್ತಿಕ) ಎಂದು ಅನ್ಯಭಾಷೆಯಲ್ಲಿಯೇ ಅಬ್ಬರಿಸುವುದು ಯಾವ ದಂಭಕ್ಕೆ ಸೇರುತ್ತದೆ ? ಗುಟುರು ಹಾಕುವ ಗೂಳಿದಂಭಕ್ಕೆ ಇದನ್ನು ಸೇರಿಸಬಹುದೊ ?

ಆಪತ್ಸು ಮಿತ್ರಂ ಜಾನೀಯಾತ್ ಯುದ್ಧೇ ಶೂರಂ ಧನೇ ಶುಚಿಮ್ |
ಭಾರ್ಯಾಂ ಕ್ಷೀಣೇಷು ವಿತ್ತೇಷು ವ್ಯಸನೇಷು ಚ ಬಾಂಧವಾನ್ || ||೪೩||

– ಸುಭಾಷಿತರತ್ನಭಾಂಡಾಗಾರ

''ಹೊರಗಿನ ಆಪತ್ತುಗಳು ಬಂದಾಗ ಸ್ನೇಹಿತನನ್ನು ಪರೀಕ್ಷಿಸಿ ತಿಳಿಯಬಹುದು. ಯುದ್ಧದಲ್ಲಿ ಶೂರನನ್ನೂ, ಹಣದ ವಿಷಯದಲ್ಲಿ ಪರಿಶುದ್ಧನನ್ನೂ, ಬಡತನ ಬಂದಾಗ ಹೆಂಡತಿಯನ್ನೂ, ಗೃಹಚಿಂತೆ ಗಳೊದಗಿದಾಗ ನೆಂಟರನ್ನೂ ಪರೀಕ್ಷಿಸಿ ತಿಳಿಯಬಹುದು.''

ಸ್ನೇಹಿತರು ಯಾರಿಗಿಲ್ಲ ? ಒಂದಾನೊಂದು ನಿಮಿತ್ತದಿಂದ ಸ್ನೇಹಿತ ರಾಗುತ್ತಾರೆ. ಕಾಫೀ ಸ್ನೇಹಿತ, ಇಸ್ಪೀಟ್ ಸ್ನೇಹಿತ, ಹರಟೆ ಸ್ನೇಹಿತ—ಹೀಗೆ ನಾನಾ ಬಗೆಯ ಗೆಳೆಯರು ಇದ್ದಾರೆ. 'ಸಮಾನಶೀಲ—ವ್ಯಸನೇಷು ಸಖ್ಯಂ.' ಮತ್ತೆ ಮತ್ತೆ ಭೇಟಿಯಾಗಿ ನಗೆಯಾಡಿ ಹೋದವರೆಲ್ಲ ಸ್ನೇಹಿತರಲ್ಲ. ಸ್ನೇಹವೆಂದರೆ ಎಣ್ಣೆ, ಜಿಡ್ಡು ಪದಾರ್ಥ ಎಂದೂ ಅರ್ಥವಿದೆ. ಕೈಗೆ ಎಣ್ಣೆ ಹಚ್ಚಿಕೊಂಡು ಹಲಸಿನ ತೊಳೆಯನ್ನು ಬಿಡಿಸುತ್ತಾರೆ. ಕೈಗೆ ಮೇಣ ಅಂಟದಂತೆ 'ಸ್ನೇಹ' ನೋಡಿಕೊಳ್ಳುತ್ತದೆ. ಹಾಗೆಯೇ ಸ್ನೇಹಿತ. ಸಣ್ಣಪುಟ್ಟ ಕಾರಣಗಳಿಂದ

ಅವನ ಸ್ನೇಹಕ್ಕೆ ಭಂಗವಿಲ್ಲ. ಅವನು ಗೆಳೆಯನಿಗೆ ಹಿತವನ್ನು ಕೋರತಕ್ಕವನು, ಕಷ್ಟಕಾಲದಲ್ಲಿ ನೆರವಾಗತಕ್ಕವನು. ರಾವಣನು ಸುಗ್ರೀವನನ್ನು ರಾಮನಿಂದ ಬೇರ್ಪಡಿಸಲು ಯತ್ನಿಸಿದ, ಫಲಿಸಲಿಲ್ಲ. ರಾಮಲಕ್ಷ್ಮಣರಿಬ್ಬರೂ ಇಂದ್ರಜಿತುವಿನ ನಾಗಪಾಶಬಂಧದಿಂದ ಮೂರ್ಛಿತರಾದಾಗ ಸುಗ್ರೀವನು ಸುಷೇಣನನ್ನು ಕುರಿತು "ಇವರಿಬ್ಬರನ್ನೂ ಕಿಷ್ಕಿಂಧೆಗೆ ಕರೆದೊಯ್ದು ಔಷಧೋಪಚಾರ ಮಾಡು. ರಾವಣನನ್ನು ನಾನು ಮುಗಿಸಿಯೇ ಹಿಂದಿರುಗುತ್ತೇನೆ" – ಎನ್ನುತ್ತಾನೆ. "ನಿನ್ನಂಥ ಸ್ನೇಹಿತರು ಎಲ್ಲರಿಗೂ ದೊರೆಯುವುದಿಲ್ಲ" ಎಂದು ರಾಮನೇ ಸುಗ್ರೀವನನ್ನು ಕೊಂಡಾಡುತ್ತಾನೆ. ದುರ್ಯೋಧನನಿಗಾಗಿ ಪ್ರಾಣತೆತ್ತ ಕರ್ಣನ ಸ್ನೇಹವೂ ಅಸಾಧಾರಣ.

'ಯುದ್ಧೇ ಶೂರಂ' ಎಂಬುದು ಸ್ಪಷ್ಟ. ಕಾರ್ಯದಕ್ಷತೆಗೆ ಯುದ್ಧ ಉಪಲಕ್ಷಣ. ವಿದ್ಯೆ, ತಾಂತ್ರಿಕಜ್ಞಾನಗಳೆಲ್ಲ ಕಾರ್ಯದಕ್ಷತೆಯಿದ್ದರೆ ಮಾತ್ರ ಸಾರ್ಥಕ. 'ಧನೇ ಶುಚಿಂ' ಎಂಬುದಂತೂ ಈ ಕಾಲದಲ್ಲಿ ನೆನೆಸಿಕೊಳ್ಳಬೇಕಾದ್ದು. ಹಣವೇ ಮನುಷ್ಯನ ಶುಚಿತ್ವಕ್ಕೆ ಒರೆಗಲ್ಲು. ವಿಶ್ವರೂಪವಾದ ಭ್ರಷ್ಟಾಚಾರದ ತವರು ಇದು. ಹಣಕ್ಕೆ ಕೈಚಾಚುವವನಂತೆ ತಪ್ಪಿನ ಕೆಲಸವನ್ನು ಸಾಧಿಸಿಕೊಳ್ಳಲು ಹಣನೀಡುವವನೂ ಅಶುಚಿಯೇ.

ಬಡತನ ಬಂದಾಗ ಮಡದಿಯ ಪರೀಕ್ಷೆಯಂತೆ. ಪಾಂಡವರನ್ನು ಹಿಂಬಾಲಿಸಿ ದ್ರೌಪದಿ, ರಾಮನನ್ನು ಹಿಂಬಾಲಿಸಿ ಸೀತೆ ಕಾಡಿಗೆ ಹೋದರು. ಅಗಸ್ತ್ಯರು ರಾಮನಿಗೆ ಹೇಳಿದ ನುಡಿ ಇಲ್ಲಿ ಸ್ಮರಣೀಯ. "ರಾಮ, ಸೀತೆ ನಿನ್ನೊಡನೆ ಕಾಡಿಗೆ ಬಂದು ಕಷ್ಟದ ಕೆಲಸಕ್ಕೆ ಕೈಹಾಕಿದ್ದಾಳೆ. 'ಸಾಮಾನ್ಯವಾಗಿ ಹೆಂಗಸರು ಹೇಗಿರುತ್ತಾರೆಂದರೆ ಗಂಡನು ಸುಖದಲ್ಲಿದ್ದಾಗ ಅವನನ್ನು ಪ್ರೀತಿಸುತ್ತಾರೆ. ಅವನು ಕಷ್ಟದಲ್ಲಿ ಸಿಕ್ಕಿದನೆಂದರೆ ದೂರದಲ್ಲಿದ್ದುಬಿಡುತ್ತಾರೆ. ಸೀತೆ ಅಂಥವಳಲ್ಲ." ಈ ಮಾತು ಗಂಡಸಿಗೂ ಅನ್ವಯಿಸತಕ್ಕದ್ದೆ. ಸೀತೆ ಕಳೆದುಹೋದಳೆಂದು ರಾಮನು ಇನ್ನೊಬ್ಬಳನ್ನು ಮದುವೆಯಾಗಲಿಲ್ಲ ! ಮದುವೆ 'ಕಾಂಟ್ರಾಕ್ಟ್' ಎನ್ನುವ ಜನ ಇದು ಹಳೆಯ ನೀತಿವಚನವೆಂದು ಹಳಿದಾರು. ಜೀವನಮೌಲ್ಯವನ್ನು ಗೊತ್ತುಪಡಿಸುವ ನೀತಿ ಎಂದಿಗೂ ಹಳೆಯದಾಗುವುದಿಲ್ಲ.

ಉಪಕಾರಾಚ್ಚ ಲೋಕಾನಾಂ ನಿಮಿತ್ತಾನ್ ಮೃಗಪಕ್ಷಿಣಾಮ್ ।
ಭಯಾಲ್ಲೋಭಾಚ್ಚ ಮೂರ್ಖಾಣಾಂ
ಮೈತ್ರೀ ಸ್ಯಾದ್ದರ್ಶನಾತ್ ಸತಾಮ್ ॥ ॥ ೭೪ ॥

– ಪಂಚತಂತ್ರ

"ಉಪಕಾರ ಮಾಡುವುದರಿಂದ ಸಾಮಾನ್ಯಜನರ ಸ್ನೇಹವಾಗುವುದು. ಮೃಗಪಕ್ಷಿಗಳ ಸ್ನೇಹ ಬೇರೊಂದು ನಿಮಿತ್ತದಿಂದ ಸಂಭವಿಸುತ್ತದೆ. ಮೂರ್ಖರ ಸ್ನೇಹಕ್ಕೆ ಭಯಲೋಭಗಳು ಕಾರಣ. ಸಜ್ಜನರ ಸ್ನೇಹ ದರ್ಶನಮಾತ್ರದಿಂದ ಆಗುವುದು."

ಸ್ನೇಹ ಮತ್ತು ವೈರ – ಇವೆರಡೂ ನಿಮಿತ್ತವಿಲ್ಲದೆ ಸಂಭವಿಸುವುದಿಲ್ಲ. "ಯಾರೂ ಯಾರಿಗೂ ಸ್ನೇಹಿತರೂ ಅಲ್ಲ, ವೈರಿಗಳೂ ಅಲ್ಲ. ಒಂದಾನೊಂದು ಕಾರಣದಿಂದಲೇ ಸ್ನೇಹಿತರಾಗುತ್ತಾರೆ, ವೈರಿಗಳೂ ಆಗುತ್ತಾರೆ" ಎನ್ನುತ್ತದೆ ಇನ್ನೊಂದು ಸುಭಾಷಿತ. ಸ್ನೇಹವಾಗಲಿ ನೆಂಟತನವಾಗಲಿ, ಸಮಾನ ಯೋಗ್ಯತೆಯವರಲ್ಲಿ ಉತ್ತಮ. ಒಂದೇ ಬಗೆಯ ಫಲಾಪೇಕ್ಷೆಯಿದ್ದವರು ಗೆಳೆಯರಾಗುವುದುಂಟು; ಹಿಟ್ಲರ್, ಮುಸೋಲಿನಿಗಳ ಹಾಗೆ. ಜರಾಸಂಧ, ರುಕ್ಮಿ, ಕಾಲಯವನ – ಮೊದಲಾದವರು ಶಿಶುಪಾಲನ ಸ್ನೇಹಿತರು. ಕೃಷ್ಣದ್ವೇಷ ಒಂದೇ ಅವರನ್ನು ಒಗ್ಗೂಡಿಸಿದ್ದದ್ದು. ನಾನು, ನನ್ನದು – ಎನ್ನುವುದಕ್ಕೆ ಯಾರು ಸಹಿಹಾಕುತ್ತಾರೋ ಅವರೊಡನೆ ಸ್ನೇಹ, ವಿರೋಧಿಸಿದವರೊಡನೆ ವೈರ. ಇದೇ ಸ್ನೇಹ–ವೈರಗಳಿಗೆ ಮೂಲಸೂತ್ರ. ಜಗತ್ತಿನ ಇತಿಹಾಸ ಪುರಾಣಗಳೆಲ್ಲ ಇದಕ್ಕೆ ನಿದರ್ಶನ.

ಮೃಗಪಕ್ಷಿಗಳ ಸ್ನೇಹ ಒಂದಾನೊಂದು ನಿಮಿತ್ತದಿಂದಾಗುವುದಂತೆ. ಅದು ಯಾವುದು ? ನಾಯಿ ತನ್ನ ಒಡೆಯನನ್ನು ಪ್ರೀತಿಸುವುದು ತನ್ನನ್ನು ಸಾಕಿದ ಉಪಕಾರಕ್ಕಾಗಿ. ಅದು ಬಾಗಿಲು ಕಾಯುವುದೆಂದು ಒಡೆಯ ನಾಯಿಯನ್ನು ಪ್ರೀತಿಸುತ್ತಾನೆ. ಆದ್ದರಿಂದ ಇಲ್ಲಿ ವಿಶೇಷವೇನು ? ಬೆಕ್ಕು, ಗಿಣಿ ಮೊದಲಾದುವನ್ನು ಮುದ್ದಿಗಾಗಿ ಸಾಕುತ್ತಾರೆ, ಲೋಕದೃಷ್ಟಿಯಿಂದ ಅಲ್ಲಿ ಉಪಾಕಾರಾಪೇಕ್ಷೆ ಏನೂ ಇಲ್ಲ. ಆದರೂ ಸ್ನೇಹಕ್ಕೆ ಒಂದು ನಿಮಿತ್ತ ಉಂಟು.

ಬಲಿಷ್ಠರ ಹೆದರಿಕೆಗಾಗಿ ಕೆಲವರು ಸ್ನೇಹಿತರಾಗುತ್ತಾರೆ. ಅಧಿಕಾರದ ಅಥವಾ ಹಣದ ಲೋಭವೂ ಇದ್ದೀತು. ರಾಜಕೀಯಸ್ಥರ ಮೈತ್ರಿ, ರಾಜಕೀಯ ಪಕ್ಷಗಳ ಒಕ್ಕೂಟ ಇದಕ್ಕೆ ಒಳ್ಳೆಯ ನಿದರ್ಶನ. ಸುಭಾಷಿತಕಾರ ಹೇಳುತ್ತಾನೆ – ಇವರೆಲ್ಲ ಮೂರ್ಖರೆಂದು. ಹೌದು, ಇವರು ಜಾಣರಾದ ಮೂರ್ಖರು. ಇವಿಷ್ಟೂ ಕೃತಕವಾದ ಸ್ನೇಹಪ್ರಕಾರಗಳು. ಮೂಲನಿಮಿತ್ತಕ್ಕೆ ಅಡ್ಡಿಯಾದಾಗ ಮಳೆಗೆ ಸಿಕ್ಕಿದ ಮಣ್ಣುಗೋಡೆಯಂತೆ ಈ ಸ್ನೇಹ ಕುಸಿದುಬೀಳುತ್ತದೆ.

ಸಜ್ಜನರ ಸ್ನೇಹ ದರ್ಶನಮಾತ್ರದಿಂದ. ದರ್ಶನ ಎನ್ನುವುದು ಸಂಭಾಷಣೆ ಮೊದಲಾದ್ದಕ್ಕೆ ಉಪಲಕ್ಷಣ. ಫಲಾಪೇಕ್ಷೆ ಅದರಲ್ಲಿಲ್ಲವೆಂದು ತಾತ್ಪರ್ಯ. ರಾಮ-ಗುಹ,ಕೃಷ್ಣ-ವಿದುರ–ಇವರ ಸ್ನೇಹದಂತೆ. ವರ್ಣಿಸಲಾಗದ ಅಂತರಂಗ ಅವರನ್ನು ಒಂದುಗೂಡಿಸುತ್ತದೆ. ಕೃತಕವಾದ ಸ್ನೇಹ ಪೂರ್ವಾಹ್ನದ ನೆರಳಿನಂತೆ ಕ್ರಮವಾಗಿ ಕ್ಷೀಣಿಸುತ್ತದೆ. ಸಜ್ಜನರ ಗೆಳೆತನ ಅಪರಾಹ್ಣದ ನೆರಳಿನಂತೆ ಕ್ರಮವಾಗಿ ಬೆಳೆಯುತ್ತಹೋಗುವುದು.

**ಜಾನನ್ನಪಿ ನರೋ ದೈವಾತ್ ಪ್ರಕರೋತಿ ವಿಗರ್ಹಿತಮ್ ।**
**ಕರ್ಮ ಕಿಂ ಕಸ್ಯಚಿಲ್ಲೋಕೇ ಗರ್ಹಿತಂ ರೋಚತೇ ಕಥಮ್ ॥ ॥ ೪೫ ॥**

**– ಪಂಚತಂತ್ರ**

"ಮನುಷ್ಯನು ತಿಳಿದೂ ತಿಳಿದೂ ಕೆಟ್ಟಕೆಲಸವನ್ನು ಮಾಡುತ್ತಾನೆ. ಇದೇಕೆ ? ದೈವವೇ ಇದಕ್ಕೆ ಕಾರಣ. ಅಲ್ಲದಿದ್ದರೆ ಯಾವನಿಗೆ ತಾನೇ ಕೆಟ್ಟಕೆಲಸ ಹೇಗೆ ಪ್ರಿಯವಾದೀತು ?"

ಕಾನೂನು ಗೊತ್ತಿಲ್ಲದಿದ್ದರೂ ಕಾನೂನಿಗೆ ವಿರುದ್ಧವಾದ ಕೆಲಸ ಅಪರಾಧವೇ ಎಂದು ಸರ್ಕಾರ ಭಾವಿಸುತ್ತದೆ. ಪಡಿತರ ಪದ್ಧತಿಯ ನಿಯಮದಂತೆ ಗೊತ್ತಾದ ಪರಿಮಾಣಕ್ಕಿಂತ ಹೆಚ್ಚಾದ ಅಕ್ಕಿಯನ್ನು ದಾಸ್ತಾನಿಡುವುದು, ಸಕ್ಕರೆಯನ್ನು ಸಾಗಿಸುವುದು ಅಪರಾಧ. ಈ ಕಾನೂನು ಗೊತ್ತಿರಲಿಲ್ಲವೆಂದರೆ ನಡೆಯುವುದಿಲ್ಲ. ಅಪರಾಧಿಯನ್ನು ನ್ಯಾಯಾಲಯ

ದಂಡಿಸುತ್ತದೆ. ನೈತಿಕವಾಗಿ ತಪ್ಪೆನಿಸದಿದ್ದರೂ ಕಾನೂನು ದೃಷ್ಟಿಯಿಂದ ತಪ್ಪು. ಕಾನೂನಿನ ಅಜ್ಞಾನ ರಕ್ಷಣೆಗೆ ಬರುವುದಿಲ್ಲ. ಆದರೆ ಕಳ್ಳತನ, ಸುಳ್ಳು ಹೇಳುವುದು, ವಂಚನೆ, ಕೊಲೆ – ಮೊದಲಾದವು ಅಪರಾಧಗಳೆಂದು ಪ್ರತಿಯೊಬ್ಬನಿಗೂ ಗೊತ್ತಿದೆ. ನೈತಿಕವಾದ ಅಪರಾಧವನ್ನು ತಿಳಿಯಲು ಕಾನೂನು ಪುಸ್ತಕವನ್ನೋ ಧರ್ಮಶಾಸ್ತ್ರವನ್ನೋ ಓದಬೇಕಾಗಿಲ್ಲ. ಭರ್ತೃಹರಿ ವಾಕ್ಯಪದೀಯದಲ್ಲಿ ಹೇಳುತ್ತಾನೆ:

ಇದಂ ಪುಣ್ಯಮಿದಂ ಪಾಪಮಿತ್ಯೇತಸ್ಮಿನ್ ಪದದ್ವಯೇ |
ಆಚಂಡಾಲಂ ಮನುಷ್ಯಾಣಾಮಲ್ಪಂ ಶಾಸ್ತ್ರಪ್ರಯೋಜನಮ್ ||

"ಇದು ಪುಣ್ಯ, ಇದು ಪಾಪ ಎಂಬ ವಿಷಯದಲ್ಲಿ ಶಾಸ್ತ್ರದಿಂದಾಗುವ ಪ್ರಯೋಜನ ಅತ್ಯಲ್ಪ."

ದುರ್ಯೋಧನ ಹೇಳಿದನಂತೆ : 'ಧರ್ಮವೆಂದರೇನೆಂಬುದು ನನಗೆ ಗೊತ್ತು; ಆದರಲ್ಲಿ ನನಗೆ ಪ್ರವೃತ್ತಿ ಇಲ್ಲ ! ಅಧರ್ಮವೂ ಗೊತ್ತು; ಆದರಿಂದ ನನಗೆ ನಿವೃತ್ತಿಯಿಲ್ಲ ! ದೈವವು ಪ್ರೇರಿಸಿದಂತೆ ಕೆಲಸ ಮಾಡುತ್ತೇನೆ' – ಎಂದು. ಹಗಲಿರುಳೂ ನಮಗೆ ಉಪದೇಶ ಮಾಡುವ ರಾಜಕೀಯಸ್ಥರಿಗೆ ನ್ಯಾಯ ಅನ್ಯಾಯಗಳ ಪರಿವೆ ಇಲ್ಲವೇನು ? ಆದರೆ ನ್ಯಾಯದಲ್ಲಿ ಪ್ರವೃತ್ತಿ, ಅನ್ಯಾಯದಿಂದ ನಿವೃತ್ತಿ ಏಕಿಲ್ಲ ?

ಈ ತಪ್ಪುದಾರಿಯನ್ನು ತುಳಿಯುವುದಕ್ಕೆ ಸ್ವಾರ್ಥ, ರಾಗ–ದ್ವೇಷಗಳು ಕಾರಣವೆಂಬುದು ಲೋಕವಿದಿತ. ಹೀಗಿದ್ದರೂ ದೈವ ಕಾರಣವೆಂದು ದುರ್ಯೋಧನ ಹೇಳಿದ. ಪಂಚತಂತ್ರಕಾರನೂ ಒಪ್ಪಿಕೊಂಡ. ಇದು ಹೇಗೆ? ದೈವವೆಂದರೆ ಅದೃಷ್ಟ. ಅದು ಕಣ್ಣಿಗೆ ಕಾಣತಕ್ಕದ್ದಲ್ಲ. 'ಪೂರ್ವಜನ್ಮಕೃತಂ ಕರ್ಮ ತದ್ದೈವಮಿತಿ ಕಥ್ಯತೇ' ಎನ್ನುತ್ತದೆ ಯೋಗವಾಸಿಷ್ಠ. ನಮ್ಮ ಪೂರ್ವಕರ್ಮಸಂಸ್ಕಾರವೇ ದೈವ. ಅದು ರಾಗ-ದ್ವೇಷಗಳನ್ನು ಪ್ರಚೋದಿಸಿ ನಮ್ಮನ್ನು ದುರ್ಮಾರ್ಗದಲ್ಲಿ ಓಡಿಸುತ್ತದೆ. ಅದನ್ನೀಗ ನಮ್ಮ ಪೌರುಷದಿಂದ ತಡೆದು ಹಿಮ್ಮೆಟ್ಟಿಸಬೇಕು. ದೈವವು ಪರೋಕ್ಷ. ಪೌರುಷ, ಎಂದರೆ ಪುರುಷ ಪ್ರಯತ್ನವು ಪ್ರತ್ಯಕ್ಷ. ಇದು ಪ್ರಬಲವಾದದ್ದು. ಪರೋಕ್ಷವಾದ ದೈವ

ದುರ್ಬಲ. ಪ್ರತ್ಯಕ್ಷವಾದ ಪ್ರಯತ್ನದಿಂದ ಆ ದೈವವನ್ನು ಗೆಲ್ಲಬೇಕು ಎನ್ನುತ್ತದೆ ಅದೇ ಯೋಗವಾಸಿಷ್ಠ. 'ಜಹಿ ಶತ್ರುಂ ಮಹಾಬಾಹೋ ಕಾಮರೂಪಮ್ ದುರಾಸದಮ್' ಎಂದು ಶ್ರೀಕೃಷ್ಣನು ಗೀತೆಯಲ್ಲಿ ಅರ್ಜುನನಿಗೆ ಬೋಧಿಸಿದ್ದು ಇದಕ್ಕಾಗಿಯೇ.

ದೈವೇ ಪುರುಷಕಾರೇ ಚ ಕರ್ಮಸಿದ್ಧಿರ್ವ್ಯವಸ್ಥಿತಾ ।
ತತ್ರ ದೈವಮಭಿವ್ಯಕ್ತಂ ಪೌರುಷಂ ಪೌರ್ವದೈಹಿಕಮ್ ॥ ॥ ೪೬ ॥

– ಯಾಜ್ಞವಲ್ಕ್ಯ ಸ್ಮೃತಿ, ೧-೩೪೯

"ದೈವ, ಪೌರುಷ – ಇವೆರಡರ ಮೇಲೆ ಯಾವುದೇ ಒಂದು ಕಾರ್ಯದ ಸಿದ್ಧಿ ನಿಂತಿರುತ್ತದೆ. ಅವುಗಳಲ್ಲಿ ದೈವವೆಂದರೆ ಪೂರ್ವಜನ್ಮದಲ್ಲಿ ಮಾಡಿದ ಪುರುಷಪ್ರಯತ್ನವೇ. ಅದೀಗ ಫಲೋನ್ಮುಖವಾಗಿ ದೈವ ಎನಿಸಿಕೊಳ್ಳುತ್ತದೆ."

ದೈವ, ವಿಧಿ, ಅದೃಷ್ಟ – ಇವು ಒಂದೇ ಅರ್ಥದ ಶಬ್ದಗಳು. ಭಾರತೀಯರು ದೈವವನ್ನು ನಂಬತಕ್ಕವರು, ಆದ್ದರಿಂದ ಇವರ ಮುನ್ನಡೆ ಸಾಧ್ಯವಾಗಿಲ್ಲ – ಎಂಬ ಮಾತನ್ನು ಆಗಾಗ ಕೇಳುತ್ತೇವೆ. ಅಂಶತಃ ಇದು ನಿಜ. ನಮ್ಮ ಗ್ರಂಥಗಳಲ್ಲಿ ದೈವದ ಮಹಿಮೆ ಪ್ರಬಲವಾದದ್ದೆಂದು ಜನ ನಂಬಿದ್ದಾರೆ. ಆದರೆ ಈ 'ದೈವ' 'ಅದೃಷ್ಟ' ಎಂದರೇನೆಂಬುದನ್ನು ಜನರು ಸರಿಯಾಗಿ ತಿಳಿದಂತಿಲ್ಲ. ಅದೃಷ್ಟವೆಂದರೆ, ಜನ್ಮಾಂತರದ ನಮ್ಮ ಪ್ರಯತ್ನವೇ. ಜನ್ಮಾಂತರವನ್ನೂ ಕರ್ಮಸಿದ್ಧಾಂತವನ್ನೂ ನಂಬಿದವರು ಭಾರತೀಯರು. ಮಾಡಿದ ಕರ್ಮವು ಫಲವನ್ನು ಕೊಡದೆ ಹೋಗುವುದಿಲ್ಲ. ಅದೃಷ್ಟವೆಂಬುದು ನಾವು ಮಾಡಿಕೊಂಡ ಕರ್ಮವೇ. ಅದೀಗ ನಮಗೆ ಅಡ್ಡಿಯಾದರೆ, ಅದಕ್ಕಿಂತ ತೀವ್ರ ಪ್ರಯತ್ನದಿಂದ ಅದನ್ನು ಗೆಲ್ಲಬಹುದು. 'ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ' ಎಂಬುದರ ಅಭಿಪ್ರಾಯ ಇದೇ. ಯೋಗವಾಸಿಷ್ಠದಲ್ಲಿ 'ದೈವಂ ನಾಮ ನ ವಿದ್ಯತೇ' – ದೈವ ಎಂಬುದು ಇಲ್ಲವೇ ಇಲ್ಲ ಎಂದು

ಹೇಳಿದೆ. ಪೌರುಷಕ್ಕಿಂತ ಪ್ರತ್ಯೇಕವಾಗಿ ದೈವವಿಲ್ಲವೆಂಬುದು ಅದರ ಅರ್ಥ. ಅದು ಜನ್ಮಾಂತರದ್ದು, ಪರೋಕ್ಷ; ಈಗ ನಾವು ಮಾಡುವುದು ಪ್ರತ್ಯಕ್ಷ. ಒಂದು ವೇಳೆ ಪರೋಕ್ಷವೇ ಬಲು ಗಟ್ಟಿಯಾಗಿದ್ದಲ್ಲಿ ಈಗಿನ ಪ್ರಯತ್ನ ಸಾಗದೆ ಸೋಲುವುದುಂಟು. ಆಗ ಅದೃಷ್ಟದ ಮೇಲೆ ಹೊರೆಯಿರಿಸಿ ನಮ್ಮ ತಲೆಯ ಮೇಲೆ ಕೈಯಿಟ್ಟುಕೊಳ್ಳುತ್ತೇವೆ. ಅದೃಷ್ಟವೇ ದುರ್ಬಲವಾದಲ್ಲಿ ನಮ್ಮ ಪ್ರಯತ್ನ ಗೆಲ್ಲುತ್ತದೆ.

ಜೀವನವೇ ಒಂದು ಹೋರಾಟ. ಇದರಲ್ಲಿ ಗೆದ್ದು ಮುಂದೆ ಸಾಗಬೇಕೆನ್ನುವವನು ಪ್ರಯತ್ನ ಮಾಡದಿದ್ದರೆ ದಡ್ಡತನವಾಗುತ್ತದೆ. ದೇವರು ಗೊತ್ತುಮಾಡಿರುವ ಒಂದು ನಿಯಮರೇಖೆ ಉಂಟು. ಅದು ಸಕಲ ಮಾನವರಿಗೂ ಅನ್ವಯಿಸುತ್ತದೆ. ಅದರ ಪರಿಧಿಯೊಳಗೆ, ಅದನ್ನು ಮೀರದೆ, ಮಾನವನು ಏನನ್ನಾದರೂ ಸಾಧಿಸಲು ಸಾಧ್ಯ. ವಿಶ್ವಾಮಿತ್ರನು ಹುಟ್ಟಿನಿಂದ ಕ್ಷತ್ರಿಯ, ಅದು ದೈವಕೃತ; ತನ್ನ ಪೌರುಷದಿಂದ ಆತನಿಗೆ ಬ್ರಾಹ್ಮಣ್ಯ ಲಭಿಸಿತು – ಎಂದು ಯೋಗವಾಸಿಷ್ಠದಲ್ಲಿ ವಿಸ್ತಾರವಾದ ವರ್ಣನೆ ಇದೆ. 'ದೈವಸಂಪಾದಿತೋ ದೋಷೋ ಮಾನುಷೇಣ ಮಯಾ ಜಿತಃ' ಎನ್ನುತ್ತಾನೆ ಶ್ರೀರಾಮ. ಸೀತಾಪರಹಣವಾದದ್ದು ದೈವಸಂಪಾದಿತವಾದ ದೋಷ. ರಾವಣನನ್ನು ಸಂಹರಿಸಿ ಸೀತೆಯನ್ನು ಸೆರೆಯಿಂದ ಬಿಡಿಸೊಯ್ದುದ್ದು ಮಾನುಷಜಯ.

**ನ ಕಾಲೋ ದಂಡಮುದ್ಯಮ್ಯ ಶಿರಃ ಕೃಂತತಿ ಕಸ್ಯಚಿತ್ |**
**ಕಾಲಸ್ಯ ಬಲಮೇತಾವದ್ ವಿಪರೀತಾರ್ಥದರ್ಶನಮ್ || || ೪೭ ||**

– ಮಹಾಭಾರತ, ಸಭಾಪರ್ವ, ೮೧-೧೧

''ಕಾಲಪುರುಷನು ದಂಡಾಯುಧವನ್ನೆತ್ತಿ ಯಾರ ತಲೆಯನ್ನೂ ಕತ್ತರಿಸುವುದಿಲ್ಲ. ವಸ್ತುಸ್ಥಿತಿಯನ್ನು ತಲೆಕೆಳಗಾಗಿ, ವಿಪರೀತವಾಗಿ ಕಾಣಿಸುವುದು ಮಾತ್ರ ಆತನ ಸಾಮರ್ಥ್ಯ.''

ಭಾರತಯುದ್ಧ ಸಮೀಪಿಸಿದಾಗ ಸಂಜಯನು ಧೃತರಾಷ್ಟ್ರನಿಗೆ ಹೇಳಿದ ಮಾತಿದು : ''ರಾಜ, ನಿನ್ನ ತಪ್ಪಿನಿಂದ ಈ ಘೋರ ಸಮರ ಪ್ರಾಪ್ತವಾಯಿತು.

ಭೀಷ್ಮಾದಿಗಳು ಬೇಡವೆಂದರೂ ಕೇಳದೆ ನಿನ್ನ ಮಗ ದ್ರೌಪದಿಯನ್ನು ಸಭೆಗೆ ಒತ್ತಾಯದಿಂದ ಕರೆಸಿದ. ರಜಸ್ವಲೆಯಾಗಿದ್ದ ರಾಜಪುತ್ರಿಯನ್ನು ಎಳೆದು ಕರೆಸಿ ಅವಮಾನ ಮಾಡಬಹುದೆ ' ನಿನಗೆ ಕಣ್ಣಿಲ್ಲವೆಂದರೆ ಬುದ್ಧಿಯೂ ಇಲ್ಲದೆಹೋಯಿತೆ '' ಕೇಡುಗಾಲ ಬಂದಾಗ ಒಳ್ಳೆಯದು ಕೆಟ್ಟದಾಗಿಯೂ, ಕೆಟ್ಟದ್ದು ಒಳ್ಳೆಯದಾಗಿಯೂ ಕಾಣಿಸುತ್ತದೆ.'' ಇದೇ 'ವಿಪರೀತಾರ್ಥದರ್ಶನ.'

ವಿಪತ್ತು ಬರುತ್ತದೆಯೆಂದು ಯಾರೂ ನಿರೀಕ್ಷಿಸಿರುವುದಿಲ್ಲ. ಅದು ಬಂದರೂ ಗೆದ್ದು ಪಾರಾಗಬಲ್ಲೆನೆಂಬ ಒಣಧೈರ್ಯದಿಂದ ಮನುಷ್ಯನು ತಪ್ಪುದಾರಿಗೆ ಇಳಿಯುತ್ತಾನೆ. ಕಡೆಯಲ್ಲಿ ವಿಪತ್ತು ಬಂದೆರಗಿದಾಗ—ಅದನ್ನು ತಪ್ಪಿಸಿಕೊಳ್ಳುವ ಸಾಮರ್ಥ್ಯ ಉಡುಗಿದಾಗ, 'ಇದು ನನ್ನ ದೈವ' ಎಂದು ತನ್ನ ತಪ್ಪನ್ನು ದೈವದ ಮೇಲೆ ಹೊರಿಸುವುದು ಮಾನವನ ಸ್ವಭಾವ. ಆದರೆ ಯಾವುದೂ ಸ್ವಯಂಕೃತಾಪರಾಧವೇ ಹೊರತು ದೈವಕೃತವಲ್ಲ. ಈತನಿಗೆ ವಿಪತ್ತನ್ನು ತಂದೊಡ್ಡಬೇಕೆಂದು ದೈವ ಕಾದಿರುವುದಿಲ್ಲ. ಹಾಗೆ ಕಾದಿರುವುದಾದರೆ ಅದು ದೈವವಲ್ಲ, ದೆವ್ವ ಎನ್ನಬೇಕಾದೀತು.

ರಾವಣನಿಗೆ ಶ್ರೀರಾಮನು ಕೈಲಾಗದ ಹೇಡಿಯಾಗಿ ಕಾಣಿಸಿದ. ಸೀತೆ ಕಾಮಿನಿಯಾಗಿ ಕಂಡಳು. ಧರ್ಮರಾಯನಿಗೆ ಜೂಜು ಕ್ಷತ್ರಿಯಧರ್ಮವಾಗಿ ಕಾಣಿಸಿತು. ರಾಜ್ಯವಾಳುವ ಹಂಬಲದವರಿಗೆ ತುರ್ತು ಪರಿಸ್ಥಿತಿ 'ಅನುಶಾಸನ ಪರ್ವ'ವಾಗಿ ಕಾಣಿಸುತ್ತದೆ. ಅಧಿಕಾರಕ್ಕೇರಿದವರಿಗೆ ಸ್ವಾರ್ಥ, ಅಧಿಕಾರ ಲೋಲುಪತೆ ಯುಕ್ತವೆನಿಸುತ್ತದೆ. ಏಕತಾಭಾವನೆ ಇಲ್ಲದಿದ್ದರೆ ಒಡೆದ ಹಡಗಿನಂತೆ ಮುಳುಗಿಹೋಗುತ್ತೇವೆಂಬ ಸಾಮಾನ್ಯಜ್ಞಾನವೂ ಮರೆಯಾಗುತ್ತದೆ. ಕಾಲದ ಸಾಮರ್ಥ್ಯ ಇದು.

ಕಾಲಕ್ಕೆ ನೆಂಟನೆಂಬ ಅಭಿಮಾನವಿಲ್ಲ. ಪಕ್ಷಪಾತವಿಲ್ಲ. ಕರುಣೆಯೂ ಇಲ್ಲ, ಕ್ರೋಧವೂ ಇಲ್ಲ. ಕಾಲಪುರುಷನಿಗೆ 'ಸಮವರ್ತಿ' ಎಂಬ ಇನ್ನೊಂದು ಹೆಸರಿದೆ. ಅವನು ಎಲ್ಲರನ್ನೂ ಸಮವಾಗಿ ಕಾಣತಕ್ಕವನು. ತುಳಿದವರೆಲ್ಲರನ್ನೂ ಮುಳ್ಳು ಚುಚ್ಚುತ್ತದೆ. ಹೆಂಗಸು, ಗಂಡಸು, ಮಗು, ಮುದುಕ – ಎಂಬ ಭೇದಭಾವ ಅದಕ್ಕಿಲ್ಲ.

ಪಂಚಧಾ ಸಂಭೃತಃ ಕಾಯೋ ಯದಿ ಪಂಚತ್ವಮಾಗತಃ |
ಕರ್ಮಭಿಃ ಸ್ವಶರೀರೋತ್ಥೈಸ್ತತ್ರ ಕಾ ಪರಿದೇವನಾ || || ೪೮ ||

– ಕಾತ್ಯಾಯನಸ್ಮೃತಿ, ೨೨-೬

''ಪಂಚಭೂತಗಳಿಂದ ನಿರ್ಮಿತವಾದ ಈ ದೇಹ ತನ್ನಲ್ಲುಂಟಾದ ಕರ್ಮಗಳಿಂದ ಪಂಚಭೂತಗಳಲ್ಲಿ ಬೆರೆತುಹೋಗುತ್ತದೆ. ಇದೇ ಮರಣ. ಇದಕ್ಕಾಗಿ ಅಳುವುದರಲ್ಲಿ ಹುರುಳಿಲ್ಲ.''

ಆತ್ಮವನ್ನು ಹೊರತಾಗಿಸಿ ಜಗತ್ತಿನ ಎಲ್ಲ ಪದಾರ್ಥಗಳನ್ನೂ ಐದು ಗುಂಪಾಗಿ ಪ್ರಾಚೀನರು ವಿಂಗಡಿಸಿದ್ದಾರೆ : ಭೂಮಿ, ಜಲ, ಅಗ್ನಿ, ವಾಯು, ಆಕಾಶ – ಎಂದು. ಇವೇ ಪಂಚಭೂತಗಳು. ಕಬ್ಬಿಣ, ಮ್ಯಾಗ್ನೀಸಿಯಂ, ಗಂಧಕ, ಉಪ್ಪು, ಸಕ್ಕರೆ – ಇತ್ಯಾದಿ ಎಷ್ಟು ವಿಧವಾಗಿ ವಿಜ್ಞಾನಿಗಳು ವಿಂಗಡಿಸಿದರೂ ಪಂಚಭೂತಗಳಲ್ಲಿಯೇ ಅವು ಸೇರುತ್ತವೆ. ಇವುಗಳಿಂದ ದೇಹದ ರಚನೆ. ಆಹಾರದಿಂದ ಬೆಳೆಯುವಾಗ ಈ ವಸ್ತುಗಳನ್ನು ದೇಹವು ಉಚಿತರೀತಿಯಲ್ಲಿ ಸಂಗ್ರಹಿಸುತ್ತದೆ. ಪರಸ್ಪರ ಹೊಂದಾಣಿಕೆಯಿಂದಾದ ಪಂಚಭೂತಗಳ ರಾಶಿ ಈ ದೇಹ. 'ದಿಹ–ಉಪಚಯೇ' ಎಂಬ ಧಾತುವಿನಿಂದ 'ದೇಹ' ಶಬ್ದ ಹುಟ್ಟಿದೆ. 'ಚಿ-ಸಂಚಯನೇ' ಎಂಬ ಧಾತುವಿನಿಂದ 'ಕಾಯ' ಶಬ್ದ. ಉಪಚಯ–ಸಂಚಯಗಳೆರಡು ಒಂದೇ. ಇದಕ್ಕೆ ಶರೀರವೆಂಬ ಹೆಸರುಂಟು. ಯಾವುದು ಶೀರ್ಣವಾಗಿ ನಾಶವಾಗುತ್ತದೆಯೋ ಅದು ಶರೀರ. ಅನ್ಯೋನ್ಯ ವಿಭಾಗದಿಂದ ಪಂಚಭೂತಗಳು ಹಂಚಿಹೋಗುವುದರಿಂದ, ಶರೀರ ಹೇಗೆ ಬೆಳೆಯುವುದೋ ಹಾಗೆ ನಶಿಸುವುದು ಇದರ ಸ್ವಭಾವ. ಹೀಗೆ ಬೆಳೆಯುವ ಮತ್ತು ನಶಿಸುವ ಕ್ರಿಯೆಗೆ ನಿಮಿತ್ತವೇನು ? ನಮಗೆ ಗೊತ್ತಿಲ್ಲ. ಗೊತ್ತಿಲ್ಲದ್ದರಿಂದ 'ಅದೃಷ್ಟ'. ಅದನ್ನು ಪೂರ್ವಾರ್ಜಿತಕರ್ಮ ಎನ್ನುತ್ತಾರೆ ದಾರ್ಶನಿಕರು. ಯಾವ ಕರ್ಮ ದೇಹವನ್ನು ಬೆಳೆಸಿತೋ ಅದೇ ಕರ್ಮವು ಶರೀರವನ್ನು ಶೀರ್ಣಗೊಳಿಸಿತು. ಕರ್ಮ ಹುಟ್ಟುವುದು ದೇಹದಲ್ಲಿ. ಅದಕ್ಕೆ ಪ್ರೇರಕ ಜೀವ. ತಾನು ಕಟ್ಟಿಕೊಂಡ ಗೂಡನ್ನು ತನಗೆ ತಿಳಿಯದಂತೆ ತಾನೇ ಕಿತ್ತುಹಾಕುತ್ತಾನೆ ! ಅದಕ್ಕಾಗಿ ಇನ್ನೊಬ್ಬರು ಏಕೆ ಶೋಕಿಸಬೇಕು ?

ಕಾಳಿದಾಸ ಹೇಳುತ್ತಾನೆ : ''ಮರಣಂ ಪ್ರಕೃತಿಃ ಶರೀರಿಣಾಂ'' (ಶರೀರವನ್ನು ಹೊತ್ತು ಬಂದವರಿಗೆ ಮರಣ ಪ್ರಕೃತಿಸಹಜವಾದದ್ದು). ''ವಿಕೃತಿರ್ಜೀವಿತಮುಚ್ಯತೇ ಬುಧೈಃ'' (ಬದುಕಿರುವುದು ವಿಕೃತಿ, ಸಹಜವಾದ್ದಲ್ಲ) – ಎಂದು ಬಲ್ಲವರು ಹೇಳಿದ್ದಾರೆ. ಕಂಭ ಅಡ್ಡ ಬಿದ್ದಿರುವುದು ಪ್ರಕೃತಿ. ಅದಕ್ಕಾಗಿ ಯಾರೂ ಯತ್ನಿಸಬೇಕಾಗಿಲ್ಲ. ಅದನ್ನು ಎತ್ತಿ ನಿಲ್ಲಿಸುವುದು ವಿಕೃತಿ. ಅದಕ್ಕೆ ಪ್ರಯತ್ನ ಬೇಕು.

**ವಿಜೇತವ್ಯಾ ಲಂಕಾ ಚರಣತರಣೀಯೋ ಜಲನಿಧಿಃ**
**ವಿಪಕ್ಷಃ ಪೌಲಸ್ತ್ಯೋ ರಣಭುವಿ ಸಹಾಯಾಶ್ಚ ಕಪಯಃ |**
**ತಥಾಪ್ಯೇಕೋ ರಾಮಃ ಸಕಲಮವಧೀದ್ರಾಕ್ಷಸಕುಲಂ**
**ಕ್ರಿಯಾಸಿದ್ಧಿಃ ಸತ್ತ್ವೇ ಭವತಿ ಮಹತಾಂ ನೋಪಕರಣೇ ||** || ೪೯ ||

– ಭೋಜಪ್ರಬಂಧ

''ಜಯಿಸಬೇಕಾದದ್ದು ಲಂಕೆಯನ್ನು, ಸಮುದ್ರವನ್ನು ಕಾಲಿಂದ ದಾಟಬೇಕಾಗಿದೆ. ವೈರಿಯಾದರೋ ರಾವಣ. ರಣರಂಗದಲ್ಲಿ ಸಹಾಯಕರಾದರೋ ಕಪಿಗಳು ! ಹೀಗಿದ್ದರೂ ಒಬ್ಬನೇ ಶ್ರೀರಾಮನು ಸಮಸ್ತ ರಾಕ್ಷಸರನ್ನೂ ಸದೆಬಡಿದನು. ಮಹಾಪುರುಷರ ಕಾರ್ಯಸಿದ್ಧಿ ಅವರ ಮನೋದಾರ್ಢ್ಯದಲ್ಲಿರುತ್ತದೆ, ಸಹಾಯಕ ಸಾಮಗ್ರಿಯಲ್ಲಲ್ಲ.''

ಶ್ರೀರಾಮನು ಹದಿನಾಲ್ಕು ವರ್ಷ ಕಾಡಿನಲ್ಲಿ ಸುತ್ತಿ ನವೆದಿದ್ದಾನೆ. ಅನಿರೀಕ್ಷಿತವಾಗಿ ದೊಡ್ಡ ವಿಪತ್ತು ಬಂದೆರಗಿತು. ಜೊತೆಗಿದ್ದವನೆಂದರೆ ಅವನಂತೆಯೇ ಬಳಲಿ ಬೆಂಡಾಗಿದ್ದ ಲಕ್ಷ್ಮಣನೊಬ್ಬನೇ. ಇನ್ನೊಬ್ಬನಾಗಿದ್ದರೆ ಎದೆಗೆಟ್ಟುಹೋಗುತ್ತಿದ್ದ. ಅಯೋಧ್ಯೆಯಿಂದ ಭರತನ ಸೇನೆಯ ನೆರವು ಬರಲೆಂದು ಕನಸಿನಲ್ಲಿಯೂ ಆಲೋಚಿಸಲಿಲ್ಲ ಆತ. ತನ್ನ ಸತ್ತ್ವಬಲದಿಂದಲೇ ಸುಗ್ರೀವನ ಸಹಾಯವನ್ನು ಗಳಿಸಿಕೊಂಡು ಸಮುದ್ರವನ್ನು ದಾಟಿ ತನ್ನ ಕಾರ್ಯವನ್ನು ಸಾಧಿಸಿಯೇಬಿಟ್ಟ.

ಇತಿಹಾಸದಲ್ಲಿಯೂ ಸತ್ತ್ವಶಾಲಿಗಳ ಮಹಾಸಾಧನೆಗೆ ಉದಾಹರಣೆಗಳುಂಟು. ಮುಸಲ್ಮಾನರ ಆಕ್ರಮಣವನ್ನೆದುರಿಸಿ ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ ಹಕ್ಕ–ಬುಕ್ಕರ ಸಾಧನೆ ಸಾಮಾನ್ಯವೆ ? ವಿದ್ಯಾರಣ್ಯರ ಮಂತ್ರಾಲೋಚನೆಯ ಹೊರತಾಗಿ ಅವರಿಗಿದ್ದ ಸಹಾಯ ಸಂಪತ್ತು ಯಾವುದು ? ಔರಂಗಜೇಬನ ದಿಲ್ಲಿದರ್ಬಾರಿಗೆ ಸಿಂಹಸ್ವಪ್ನವಾಗಿ ಬೆಳೆದುನಿಂತ ಛತ್ರಪತಿ ಶಿವಾಜಿಯ ಸಾಧನೆ ಮೈನವಿರೇಳಿಸುವಂತಹದು. ಮಹಾತ್ಮಾಗಾಂಧಿಜೀಯವರ ಕಾರ್ಯಸಿದ್ಧಿ ನಮ್ಮ ಕಣ್ಣೆದುರಿಗೆ ಆದರ್ಶವಾಗಿ ನಿಂತಿದೆ. ಇದೆಲ್ಲ ಆತ್ಮಬಲದಿಂದ ನಡೆದದ್ದು. ಬಾಹ್ಯ ಸಂಪತ್ತಿನಿಂದಲ್ಲ.

ಹೀಗೆಯೇ ವಿದ್ಯಾರ್ಜನೆ, ಗ್ರಂಥರಚನೆ, ಧರ್ಮಸ್ಥಾಪನೆ, ಸಮಾಜಸೇವೆ ಮೊದಲಾದ ಕ್ಷೇತ್ರಗಳಲ್ಲಿಯೂ ತಮ್ಮ ಆಂತರಿಕ ಸತ್ತ್ವಬಲದಿಂದಲೇ ಲೋಕೋತ್ತರವಾದ ಕಾರ್ಯವನ್ನು ಸಾಧಿಸಿದವರಿದ್ದಾರೆ. ಗೌತಮಬುದ್ಧ, ಶಂಕರಾಚಾರ್ಯ – ಮೊದಲಾದ ಭಿಕ್ಷುಕರು ಮಾಡಿದ ಕಾರ್ಯವು ಸಂಘಟಿತವಾದ ಒಂದು ಮಹಾಸಂಸ್ಥೆಯು ಮಾಡುವ ಕಾರ್ಯಕ್ಕಿಂತ ಮಿಗಿಲಾದುದು.

ಸರ್ಕಾರದ ಬೆಂಬಲವಿಲ್ಲ, ಧನಬಲವಿಲ್ಲ, ಜನರ ಪ್ರೋತ್ಸಾಹವಿಲ್ಲ, ನಾನೊಬ್ಬ ಏನು ಮಾಡಲಾದೀತು ? – ಎಂದು ಹೇಳುವುದು ಸತ್ತ್ವಹೀನರ ಕುಂಟುನೆವ.

ಅಗ್ನೌ ಕ್ರಿಯಾವತಾಂ ದೇವೋ ದಿವಿ ದೇವೋ ಮನೀಷಿಣಾಂ ।
ಪ್ರತಿಮಾಸ್ವಲ್ಪಬುದ್ಧೀನಾಂ ಯೋಗಿನಾಂ ಹೃದಯೇ ಹರಿಃ ॥ ॥ ೫೦ ॥

– ಬೃಹತ್ ಪಾರಾಶರಸ್ಮೃತಿ, ೪-೧೯೯

“ಕರ್ಮಠರಿಗೆ ಅಗ್ನಿಯಲ್ಲಿ ದೇವರು ಇರುತ್ತಾನೆ. ವಿದ್ವಾಂಸರ ದೇವರು ಸ್ವರ್ಗದಲ್ಲಿ. ಸಾಮಾನ್ಯ ಜನರಿಗೆ ವಿಗ್ರಹಗಳಲ್ಲಿ ದೇವರು ಕಾಣಿಸುತ್ತಾನೆ. ಯೋಗಿಗಳ ದೇವರು ಹೃದಯದಲ್ಲಿ.”

ಮಾನವನು ಅನಾದಿ ಕಾಲದಿಂದಲೂ ಈಶ್ವರನ ಅಸ್ತಿತ್ವದಲ್ಲಿ ವಿಶ್ವಾಸವನ್ನಿಟ್ಟಿದ್ದಾನೆ. ಕರ್ಮಠರಾದ ವೈದಿಕರು ಅಗ್ನಿಯನ್ನು ಈಶ್ವರನೆಂದು ಅರ್ಚಿಸುತ್ತಾರೆ. ತೇಜಸ್ಸು, ಪ್ರಕಾಶಗಳ ನಿಧಿಯಾದ ಅಗ್ನಿ ಈಶ್ವರನ ಅಂಶ. ಅಗ್ನಿಯಲ್ಲಿ ಆಹುತಿಗಳನ್ನಿತ್ತರೆ ದೇವರಿಗೆ ಅರ್ಪಿತವಾದಂತೆ. ಅಗ್ನಿ ಯಜ್ಞೇಶ್ವರ. ಇದೇ ರೀತಿಯಲ್ಲಿ ಸೂರ್ಯನೂ ಸಹ. ಈ ಕರ್ಮಠರು ಉತ್ತಮಾಧಿಕಾರಿಗಳು. ಇನ್ನು ಕೆಲವರಿಗೆ ದೇವರು ಆಕಾಶದಲ್ಲಿಯೋ ವೈಕುಂಠದಲ್ಲಿಯೋ ಕೈಲಾಸ ದಲ್ಲಿಯೋ ಇರುತ್ತಾನೆ. ಅಗ್ನಿ, ಸೂರ್ಯ – ಇವರೆಲ್ಲ ದೇವರಿಂದ ನಿರ್ಮಿತ ರಾದ್ದರಿಂದ ದೇವರಲ್ಲ ಎಂದು ಇವರ ಭಾವನೆ. ಈ ಜನರು ಮಧ್ಯಮಾಧಿಕಾರಿಗಳು. ಇವರಿಗೆ ಈಶ್ವರನು ಆಕೃತಿಯುಳ್ಳವನು. ಅವನಿಗೆ ರೂಪವಿದೆ. ಸಗುಣನಾದ ದೇವರನ್ನು ಇವರು ಉಪಾಸನೆ ಮಾಡುತ್ತಾರೆ. ಪ್ರತಿಮೆಯನ್ನು ದೇವರೆಂದು ತಿಳಿದು ಪೂಜಿಸತಕ್ಕವರೂ ಇದ್ದಾರೆ. ಪ್ರತಿಮೆಯೇ ದೇವರಲ್ಲವೆಂದು ಇವರಿಗೂ ಗೊತ್ತಿದೆ. ಅದರಲ್ಲಿ ಆವಾಹನೆ ಮಾಡುವುದರಿಂದ ಈಶ್ವರನ ಸಾನ್ನಿಧ್ಯ ಅಲ್ಲಿ ಮೂಡುತ್ತದೆಯೆಂದು ವಿಶ್ವಾಸ. ಪುರುಷವಿಗ್ರಹಗಳೂ ಇವೆ, ಸ್ತ್ರೀವಿಗ್ರಹಗಳೂ ಇವೆ. ಏಕೆಂದರೆ ದೇವರಲ್ಲಿ ಸ್ತ್ರೀ–ಪುರುಷ ಭೇದವನ್ನಿವರು ಒಪ್ಪಿಕೊಂಡಿದ್ದಾರೆ. ಹಲವರು ದೇವರಿದ್ದಾರೆಂದೂ ಈ ಜನರ ನಂಬಿಕೆ. ಅವರಲ್ಲಿ ಶಿವನೋ ವಿಷ್ಣುವೋ ದುರ್ಗೆಯೋ ಸರ್ವೋತ್ತಮರೆಂದು ಭಾವಿಸುತ್ತಾರೆ. ಈ ಜನರು ಕನಿಷ್ಠ ದರ್ಜೆಯ ಅಧಿಕಾರಿಗಳು. ವಿಗ್ರಹಪೂಜೆ ಮೌಢ್ಯವಲ್ಲ. ಮಂದಾಧಿಕಾರಿಗಳಿಗೆ ಅದು ಆವಶ್ಯಕ.

ಆದರೆ ಈ ಯಾವ ಮಾರ್ಗವೂ ತಪ್ಪಲ್ಲ. ಎಲ್ಲವೂ ಸರಿಯೇ, ಬುದ್ಧಿಭೇದಕ್ಕೆ ಅನುಗುಣವಾಗಿ ಮಾರ್ಗಭೇದ. ಪ್ರಜ್ಞಾಶಕ್ತಿ, ಸಂಸ್ಕಾರಗಳಿಗೆ ಅನುಗುಣವಾಗಿ ಬುದ್ಧಿಭೇದ. ಕಣ್ಣಿಗೆ ಕಾಣದ, ಕಿವಿಗೆ ಕೇಳದ, ಇಂದ್ರಿಯ ಗೋಚರವಲ್ಲದ ಒಂದು ಅವಲಂಬನೆ ಬೇಕು. ಅಂತಹ ಅವಲಂಬನೆಯೇ ವಿಗ್ರಹ–ಪ್ರತಿಮೆ–ಪ್ರತೀಕ.

ಈ ಎಲ್ಲ ಹಂತಗಳನ್ನೂ ದಾಟಿ ಮೇಲಕ್ಕೇರಿದ ಯೋಗಿಗೆ ಹೃದಯದಲ್ಲಿಯೇ ಹರಿ. ಹರಿಯಿಲ್ಲದ ತಾಣವಿಲ್ಲವಾದರೂ ಉಪಾಸನೆಗೆ

ಯೋಗಿಯು ಬಾಹ್ಯವಸ್ತುವನ್ನು ಅವಲಂಬಿಸುವುದಿಲ್ಲ. ತನ್ನಲ್ಲಿಯೇ ಆತ್ಮನಿರುವಾಗ ಪರಾವಲಂಬನೆ ಅವನಿಗೆ ಬೇಕಾಗುವುದಿಲ್ಲ. ಇನ್ನೂ ಮುಂದೆ ಸಾಗಿದ ಯೋಗಿಗೆ ತನ್ನಲ್ಲಿ ಆತ್ಮವಿಲ್ಲ, ತಾನೇ ಆತ್ಮ ಎಂಬ ಅರಿವು ಮೂಡುತ್ತದೆ. ಆತ್ಮವಲ್ಲದ ವಸ್ತುವೇ ಇಲ್ಲ, ಎಲ್ಲವೂ ಆತ್ಮವೇ, ಬ್ರಹ್ಮವೇ, ಈಶ್ವರನೇ ಎಂಬ ಜ್ಞಾನ ಉದಯಿಸುತ್ತದೆ. ನಾಮರೂಪಾತ್ಮಕವಾದ ಪ್ರಪಂಚವೆಲ್ಲವೂ ಈಶ್ವರನಲ್ಲಿಯ ಬರಿ ತೋರಿಕೆಗಳೆಂದು ಯೋಗಿ ತಿಳಿಯುತ್ತಾನೆ. 'ಸರ್ವಂ ಖಲ್ವಿದಂ ಬ್ರಹ್ಮ.'

**ಅಘಂ ಸ ಕೇವಲಂ ಭುಂಕ್ತೇ ಯಃ ಪಚತ್ಯಾತ್ಮಕಾರಣಾತ್ |**
**ಯಜ್ಞಶಿಷ್ಟಾಶನಂ ಹ್ಯೇತತ್ ಸತಾಮನ್ನಂ ವಿಧೀಯತೇ || || ೫೧ ||**

– ಮನುಸ್ಮೃತಿ, ೩-೧೧೮

"ಯಾವಾತನು ತನಗೋಸ್ಕರ ಅಡಿಗೆ ಮಾಡಿಕೊಳ್ಳುತ್ತಾನೋ ಆತನು ಪಾಪವನ್ನು ಮಾತ್ರ ತಿನ್ನುತ್ತಾನೆಯೇ ಹೊರತು ಅನ್ನವನ್ನಲ್ಲ. ಯಜ್ಞಾನಂತರದಲ್ಲಿ ಅವಶಿಷ್ಟವಾದದ್ದು ಅನ್ನವೆನಿಸುತ್ತದೆ. ಸತ್ಪುರುಷರಿಗೆ ಇದೇ ಅನ್ನವೆಂದು ವಿಹಿತವಾಗಿದೆ."

ಪ್ರತಿಯೊಬ್ಬ ಮಾನವನ ಅನ್ನ, ವಸ್ತ್ರ, ಮನೆ–ಮೊದಲಾದ ಜೀವನ ಸಾಮಗ್ರಿಯೆಲ್ಲವೂ ಅನ್ಯರ ಶ್ರಮದಿಂದ ಲಭಿಸಿದ್ದು. ನಾವು ಅಕ್ಕಿ ಕೊಳ್ಳುವುದು ವರ್ತಕನಿಂದ, ವರ್ತಕನಿಗೆ ಅಕ್ಕಿ ದೊರೆತದ್ದು ರೈತನಿಂದ, ರೈತನಿಗೆ ನೆರವು ನೀಡಿದ್ದು ಭೂಮಿತಾಯಿ, ಈ ಭೂಮಿತಾಯಿಗೆ ಮಳೆ ಸುರಿಸಿ ಫಲವತ್ತಾಗಿ ಮಾಡಿದವನು ಮೇಘರಾಜ. ಅಕ್ಕಿ ಕೊಳ್ಳಲು ನಮಗೆ ಹಣ ಬಂದದ್ದಾದರೂ ಹೇಗೆ ? ಕಾರ್ಖಾನೆಯಲ್ಲಿಯೋ ಇನ್ನೊಂದೆಡೆಯಲ್ಲೋ ದುಡಿದದ್ದರಿಂದ. ಕಾರ್ಖಾನೆ ನಡೆಯುವುದು ಹೇಗೆ ? ಗಿರಾಕಿಗಳಿಂದ. 'ಪರಸ್ಪರು ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ' – 'ಒಬ್ಬರನ್ನೊಬ್ಬರು ಉಪಕರಿಸುತ್ತ ಉತ್ತಮ ವಾದ ಶ್ರೇಯಸ್ಸನ್ನು ಪಡೆಯಿರಿ' ಎಂದು ಗೀತಾವಚನ. ಇದು ಜೀವನಚಕ್ರ : 'ಏವಂ ಪ್ರವರ್ತಿತಂ ಚಕ್ರಂ.'

ನಾವು ತಿನ್ನುವ ಒಂದೊಂದು ತುತ್ತಿನಲ್ಲಿಯೂ ಅನ್ಯರ ದುಡಿತವೂ ಸೇರಿದೆ. 'ಕೇವಲಾಘೋ ಭವತಿ ಕೇವಲಾದೀ' – 'ತಾನೊಬ್ಬನೇ ತಿನ್ನುವವನು ಕೇವಲ ಪಾಪಿಯಾಗುತ್ತಾನೆ' ಎಂದು ವೇದಘೋಷಣೆ.

ಈ ಸಹಕಾರಭಾವನೆಗೆ ಸಂಕೇತವಾಗಿ ಯಜ್ಞಗಳನ್ನು ವಿಧಿಸಲಾಗಿದೆ. ಪಶು–ಪಕ್ಷಿ, ಕ್ರಿಮಿ–ಕೀಟಗಳಿಂದಲೂ ಮನುಷ್ಯನಿಗೆ ಉಪಕಾರ ಉಂಟು. ಅವುಗಳಿಗೆ ಆಹಾರವನ್ನೀಯುವುದು ಭೂತಯಜ್ಞ, ಮನುಷ್ಯರಿಗೆ ಅನ್ನ ನೀಡುವುದು ಮನುಷ್ಯಯಜ್ಞ. ನನ್ನ ಸುಖವೆಲ್ಲವೂ ದೇವತಾಕೃಪೆಯಿಂದ ಲಭಿಸಿದ್ದೆಂದು ದೇವಪೂಜೆ ಮಾಡುವುದು ದೈವಯಜ್ಞ. ಈ ಕರ್ತವ್ಯಗಳನ್ನು ನೆರವೇರಿಸಿ ಗೃಹಸ್ಥನು ತಿನ್ನುವುದು ಅನ್ನ. ಅದೇ ಯಜ್ಞಶಿಷ್ಟಾಶನ. ಇದಕ್ಕೆ 'ಅಮೃತ' ಎಂದು ಹೆಸರಿದೆ.

ಧರ್ಮಶಾಸ್ತ್ರ ಹೇಳುತ್ತದೆ – ಕೊಳದಲ್ಲಿ ಸ್ನಾನ ಮಾಡುವಾಗ ಅದರ ತಳದಲ್ಲಿರುವ ಮೂರು ಹಿಡಿ ಮಣ್ಣನ್ನು ಹೊರಗೆ ಎತ್ತಿ ಚೆಲ್ಲಬೇಕು ಎಂದು, ಬಂದವರು ಬಟ್ಟೆಯೊಗೆದು ಮಿಂದು ನೆಟ್ಟಗೆ ಸಾಗಿದರೆ ಕೊಳ ಕಟ್ಟೆಗಳು ಕೊಚ್ಚೆಯಿಂದ ಮುಚ್ಚಿಹೋದಾವು ಎಂದು ಧರ್ಮಶಾಸ್ತ್ರದ ಇಂಗಿತ. ಕೊಳದಿಂದಾದ ಉಪಕಾರಕ್ಕೆ ಅದನ್ನು ಸ್ವಚ್ಛಗೊಳಿಸಿ ಹೋಗಬೇಕಾದ್ದು ಕರ್ತವ್ಯ. ಈ ಕರ್ತವ್ಯಪ್ರಜ್ಞೆ ನಮ್ಮವರಿಗೆ ಇದ್ದಿದ್ದರೆ ಇಂದು ಯಾವ ಕೆರೆಯೂ ಹೂಳಿನಿಂದ ಹಾಳಾಗುತ್ತಿರಲಿಲ್ಲ.

ಅನಾರೋಗ್ಯಮನಾಯುಷ್ಯಮಸ್ವರ್ಗ್ಯಂ ಚಾತಿಭೋಜನಮ್ ।
ಅಪುಣ್ಯಂ ಲೋಕವಿದ್ವಿಷ್ಟಂ ತಸ್ಮಾತ್ತತ್ ಪರಿವರ್ಜಯೇತ್ ॥ ॥ ೫೨ ॥

– ಮನುಸ್ಮೃತಿ, ೨-೫೭

"ಅತಿಯಾಗಿ ತಿನ್ನುವುದು ಅನಾರೋಗ್ಯಕ್ಕೆ ಕಾರಣ; ಆಯುಸ್ಸಿಗೆ ಕುಂದು; ಸ್ವರ್ಗಮಾರ್ಗಕ್ಕೆ ಅಡ್ಡಿ; ಅದು ಪಾಪಕಾರ್ಯ, ಲೋಕ ನಿಂದಿತ. ಆದ್ದರಿಂದ ಅತಿಭೋಜನವನ್ನು ವರ್ಜಿಸಬೇಕು."

'ಅತಿ ಸರ್ವತ್ರ ವರ್ಜಯೇತ್' ಎಂಬುದು ಭೋಜನಕ್ಕೂ ಅನ್ವಯಿಸುತ್ತದೆ. ಜೀರ್ಣಾಂಗಗಳು ಹೆಚ್ಚಿನ ಹೊರೆಯನ್ನು ಸಹಿಸಿಕೊಳ್ಳಲಾರವು. ನಂಜು, ಅಜೀರ್ಣಗಳಾಗಿ ನಾನಾ ರೋಗಗಳು ಹುಟ್ಟುತ್ತವೆ. ಆದ್ದರಿಂದಲೇ ಆಯುಷ್ಯಕ್ಕೆ ಘಾತಕ. ರೋಗಿಯು ಒಳ್ಳೆಯ ಕಾರ್ಯವನ್ನು ನಡೆಸಲಾರನಾದ್ದರಿಂದ ಅತಿಭೋಜನವು ಅಸ್ವರ್ಗ್ಯ. ಅದು ಅಪುಣ್ಯವೂ ಹೌದು, ಎಂದರೆ ಪಾಪಜನಕ. ತನ್ನ ದೇಹಕ್ಕೆ ಆವಶ್ಯಕವಾದ್ದಕ್ಕಿಂತ ಹೆಚ್ಚು ತಿನ್ನಲು ಯಾರಿಗೂ ಅಧಿಕಾರವಿಲ್ಲ. ಹಾಗೆ ತಿನ್ನುವುದು ಪರರ ಅನ್ನವನ್ನು ಕಸಿದುಕೊಂಡಂತೆ. ಅಲ್ಲದೆ ಅನಾರೋಗ್ಯದಿಂದ ವಿಹಿತ ಕರ್ಮವನ್ನು ಮಾಡಲಾರದೆ ಪಾಪವನ್ನೂ ಕಟ್ಟಿಕೊಳ್ಳಬೇಕಾಗುವುದು. ಹೊಟ್ಟೆಬಾಕನಿಗೆ 'ಬಕಾಸುರ' ಎಂಬ ಲೋಕನಿಂದೆ ತಪ್ಪಿದ್ದಲ್ಲ.

ಪಾಂಡವರು ಮಹಾಪ್ರಸ್ಥಾನಕ್ಕೆ ಹೋಗುತ್ತಿರುವಾಗ ಮೊದಲು ದ್ರೌಪದಿ ಬೀಳುತ್ತಾಳೆ. ಆಮೇಲೆ ಸಹದೇವ, ನಕುಲ, ಅರ್ಜುನರು ಬೀಳುತ್ತಾರೆ. ಶರೀರಸಹಿತವಾಗಿ ಸ್ವರ್ಗವನ್ನೇರಲು ಅವರಿಗೆ ಸಾಧ್ಯವಾಗಲಿಲ್ಲ. ಅವರೇಕೆ ಬಿದ್ದರೆಂದು ಕೇಳಿದ ಭೀಮನ ಪ್ರಶ್ನೆಗೆ ಧರ್ಮರಾಯನು ಒಬ್ಬೊಬ್ಬರಲ್ಲಿ ಒಂದೊಂದು ದೋಷವಿತ್ತೆಂದು ಹೇಳುತ್ತಾಹೋಗುತ್ತಾನೆ. ಕಡೆಗೆ ಭೀಮನೂ ಬೀಳುತ್ತಾನೆ. ತನ್ನಲ್ಲಿದ್ದ ದೋಷವೇನೆಂದು ಅವನು ಕೇಳಲಾಗಿ, ಧರ್ಮರಾಯ ''ಅತಿ ಭುಕ್ತಂ ಚ ಭವತಾ'' – ''ನೀನು ಅತಿಯಾಗಿ ತಿನ್ನುತ್ತಿದ್ದೆ !'' ಎಂದು ಉತ್ತರಿಸುತ್ತಾನೆ.

''ಅನ್ನಂ ಬಹು ಕುರ್ವೀತ । ಅನ್ನಂ ನ ನಿಂದ್ಯಾತ್ । ತದ್ವ್ರತಂ'' ಎನ್ನುತ್ತದೆ ಉಪನಿಷತ್ತು. 'ಅನ್ನವನ್ನು ಗೌರವದಿಂದ ಕಾಣಬೇಕು. ಅದು ನಿನ್ನ ವ್ರತವಾಗಿರಲಿ' – ಎಂಬುದು ಸನಾತನದೃಷ್ಟಿ. ''ಪೂಜಯೇದಶನಂ ನಿತ್ಯಂ'' ಎನ್ನುತ್ತಾನೆ ಮನು. ''ಗೃಹಸ್ಥನು ಎರಡು ಊಟಗಳನ್ನು ಮಾತ್ರ ಮಾಡಬೇಕು, ನಡುವೆ ಏನನ್ನೂ ತಿನ್ನಬಾರದು'' ಎಂದು ವಿಧಿಸುತ್ತದೆ ಧರ್ಮಶಾಸ್ತ್ರ. ಕೃಷಿ ಸಮೃದ್ಧವಾದ ಕಾಲದಲ್ಲಿ ಬೋಧಿಸಿದ ನೀತಿ ಇದು. ಇಂದಿನ ದುರ್ಭಿಕ್ಷ ಕಾಲದಲ್ಲಿ ನಡೆಯುವ ಔತಣಕೂಟಗಳೆಷ್ಟು, .ಮೇಜವಾನಿಗಳೆಷ್ಟು ! ತಿನ್ನುವುದೆಷ್ಟು, ಎಸೆಯುವುದೆಷ್ಟು ! ಶುಭಕಾರ್ಯದಲ್ಲಿ

ಮಂಗಳಾಕ್ಷತೆಗೆ ಅಕ್ಕಿಯನ್ನು ಬಳಸುವುದು ದುರ್ವ್ಯಯ – ಎಂದು ಅರ್ಥಹೀನವಾಗಿ ಬೂಟಾಟಿಕೆಯ ಮಾತಾಡುವುದು ಮಾತ್ರ ತಪ್ಪಲಿಲ್ಲ.

ಅಲ್ಪಾನಾಮಪಿ ವಸ್ತೂನಾಂ ಸಂಹತಿಃ ಕಾರ್ಯಸಾಧಿಕಾ |
ತೃಣೈರ್ಗುಣತ್ವಮಾಪನ್ನೈರ್ಬಧ್ಯಂತೇ ಮತ್ತದಂತಿನಃ || || ೫೩ ||

— ಹಿತೋಪದೇಶ, ಮಿತ್ರಲಾಭ-೨೭

''ವಸ್ತುಗಳು ಕ್ಷುಲ್ಲಕವಾಗಿದ್ದರೂ ಅವು ಒಟ್ಟುಗೂಡಿದರೆ ಕಾರ್ಯವನ್ನು ಸಾಧಿಸಬಲ್ಲವು. ಹುಲ್ಲುಕಡ್ಡಿಗಳನ್ನು ಕೂಡಿಸಿ ಹೊಸೆದು ಹಗ್ಗ ಮಾಡಿದಾಗ, ಅವು ಮದ್ದಾನೆಗಳನ್ನೂ ಕಟ್ಟಿಹಾಕಬಲ್ಲವು.''

'ಸಂಘೇ ಶಕ್ತಿಃ ಕಲೌ ಯುಗೇ' ಎಂಬುದು ಇದೇ ಅರ್ಥದ ಇನ್ನೊಂದು ನುಡಿ. ಐಕಮತ್ಯದಲ್ಲಿ ಬಲವುಂಟು. ವ್ಯಷ್ಟಿಗೆ ಅಸಾಧ್ಯವಾದ್ದನ್ನು ಸಮಷ್ಟಿ ಸಾಧಿಸಬಲ್ಲುದು. ಒಬ್ಬ ಬೇಡನು ಬೀಸಿದ್ದ ಬಲೆಯಲ್ಲಿ ಪಾರಿವಾಳಗಳು ಸಿಕ್ಕಿಹಾಕಿಕೊಂಡವು. ಅವುಗಳಲ್ಲೊಂದು ಬುದ್ಧಿಶಾಲಿ ಪಾರಿವಾಳ ಹೇಳಿತಂತೆ, ''ಮಿತ್ರರೆ, ಹೆದರಬೇಡಿರಿ, ನಾವೆಲ್ಲರೂ ಮನಸ್ಸು ಮಾಡಿದರೆ ಈ ಕಷ್ಟದಿಂದ ಪಾರಾಗಬಹುದು. ಎಲ್ಲರೂ ಒಟ್ಟಿಗೆ ಮೇಲಕ್ಕೆ ಹಾರೋಣ. ಈ ಬಲೆಯನ್ನೇ ನಾವು ಎತ್ತಿಕೊಂಡು ಹೋಗಬಹುದು'' ಎಂದು. ಎಲ್ಲ ಪಾರಿವಾಳಗಳೂ ತಮ್ಮ ಸ್ನೇಹಿತನಾದ ಮೂಷಕರಾಜನ ಬಳಿಗೆ ಅದನ್ನೆತ್ತಿಕೊಂಡು ಹೋಗಿ, ಆತನಿಂದ ಬಲೆಯನ್ನು ಕತ್ತರಿಸಿ ಸೆರೆಯಿಂದ ಪಾರಾದವಂತೆ.

ಭಾರತೀಯರು ಒಗ್ಗಟ್ಟಿನಿಂದ ಇದ್ದಿದ್ದರೆ ಈ ರಾಷ್ಟ್ರ ಎಂದಿಗೂ ಪರಾಧೀನವಾಗುತ್ತಿರಲಿಲ್ಲ. ಅಂತಃಕಲಹದಿಂದ ಛಿದ್ರವಾದ್ದರಿಂದಲೇ ಅದು ವಿದೇಶೀಯರ ದಾಸ್ಯಶೃಂಖಲೆಗೆ ಕಟ್ಟುಬಿದ್ದಿತ್ತು. ಪ್ರಜಾಪ್ರಭುತ್ವದ ಅಂತರಂಗವೇ ಐಕಮತ್ಯ. ದ್ವಿತೀಯ ಮಹಾಯುದ್ಧವಾದ ಮೇಲೆ ನಿರಂಕುಶ ಪ್ರಭುತ್ವಗಳು ಒಂದೊಂದಾಗಿ ಉರುಳಲು ಆಯಾ ರಾಷ್ಟ್ರೀಯರ ಐಕಮತ್ಯ ಕಾರಣವಾಯಿತು. ಮಿಲಿಟರಿ ಶಕ್ತಿಯೂ ಜನಶಕ್ತಿಯೆದುರಿಗೆ ತಲ್ಲಣಿಸಿ ಹೋಯಿತು.

ಪ್ರಬಲವಾದ ಈ ಜನಶಕ್ತಿ ಸನ್ಮಾರ್ಗದಲ್ಲಿಯೇ ಕಾಲಿಡುತ್ತದೆಯೆಂಬ ನಂಬಿಕೆಯೇನೂ ಸಲ್ಲದು. ಮತೀಯ ಗಲಭೆಗಳು, ರಾಜಕೀಯ ದೊಂಬಿಗಳು ದಾರಿತಪ್ಪಿದ ಜನಶಕ್ತಿಯ ಫಲ. ಇದೊಂದು ದೈತ್ಯಶಕ್ತಿ. ಕಬಂಧನ ಬಾಹುಗಳಂತೆ ಬಹು ದೂರ ಪ್ರಸರಿಸಬಲ್ಲದು. ಕುಂಭಕರ್ಣನ ಜಠರಶಕ್ತಿಯಂತೆ ಕಂಡದ್ದನ್ನು ನುಂಗಿ ಜೀರ್ಣಿಸಿಕೊಳ್ಳಬಲ್ಲದು. ಸ್ವಾರ್ಥಿಗಳಾದ ಬುದ್ಧಿವಂತರು ಈ ಪ್ರಚಂಡ ಶಕ್ತಿಯನ್ನು ದುರುದ್ದೇಶಕ್ಕಾಗಿ ಬಳಸಿಕೊಳ್ಳುತ್ತಾರೆ. ರೈತರು, ಕಾರ್ಮಿಕರು, ವಿದ್ಯಾರ್ಥಿಗಳು ಈ ಸ್ವಾರ್ಥಿಗಳ ಕೂಟತಂತ್ರಕ್ಕೆ ಸುಲಭವಾಗಿ ವಶವಾಗುತ್ತಾರೆ. ಐಕಮತ್ಯವೆಂಬ ಈ ದೈತ್ಯಶಕ್ತಿಗೆ ಬಾಹುಬಲವಿದೆಯೇ ಹೊರತು ಬುದ್ಧಿಬಲವಿಲ್ಲ. ಇದೊಂದು ಬುಲ್‌ಡೋಜರ್ ಇದ್ದಂತೆ. ಅದರ ಚಾಲಕನು ವಿವೇಕಿಯಾಗಿದ್ದರೆ ರಾಷ್ಟ್ರಕ್ಕೆ ಕ್ಷೇಮ. ಬುಲ್‌ಡೋಜರ್ ಓರೆಕೋರೆಯ ಬಂಡೆದಿಣ್ಣೆಗಳನ್ನು ಉರುಳಿಸಿ ನೆಲವನ್ನು ಹಸನು ಮಾಡಬಲ್ಲದು. ಸುಂದರವಾದ ಉಪಕಾರಿ ಕಟ್ಟಡಗಳನ್ನೂ ಉರುಳಿಸಿ ನಿರ್ನಾಮ ಮಾಡಬಲ್ಲದು.

ಕಾವ್ಯಶಾಸ್ತ್ರವಿನೋದೇನ ಕಾಲೋ ಗಚ್ಛತಿ ಧೀಮತಾಮ್ ।
ವ್ಯಸನೇನ ತು ಮೂರ್ಖಾಣಾಂ ನಿದ್ರಯಾ ಕಲಹೇನ ವಾ ॥ ॥ ೫೪ ॥

— ಹಿತೋಪದೇಶ, ೧-೩೨

"ಕಾವ್ಯ ಮತ್ತು ಶಾಸ್ತ್ರಗಳನ್ನು ಪರಿಶೀಲಿಸುವುದರಿಂದ ಬುದ್ಧಿಶಾಲಿಗಳಿಗೆ ಕಾಲ ಕಳೆಯುತ್ತದೆ. ಮೂರ್ಖರ ಕಾಲವಾದರೋ ಜೂಜು ಮುಂತಾದ ವ್ಯಸನ, ನಿದ್ರೆ ಅಥವಾ ಜಗಳದಿಂದ ಕಳೆಯುತ್ತದೆ."

ಸಮಯವೆಂಬುದು ಬಹುಬೆಲೆಯುಳ್ಳ ಮನುಷ್ಯನ ಆಸ್ತಿ. ಅದನ್ನು ಸರಿಯಾಗಿ ಬಳಸಿಕೊಳ್ಳುವುದು ನಮಗೆ ಸೇರಿದ್ದು. ವಿದ್ಯಾರ್ಜನೆ, ಧನಾರ್ಜನೆ, ಲೋಕೋಪಕಾರ — ಮುಂತಾದ ಉಪಯುಕ್ತ ಕಾರ್ಯಗಳಿಗೆ ಬಳಸಬೇಕಾದ ಈ ಕಾಲವನ್ನು ವ್ಯರ್ಥವಾಗಿ ನೂಕಿದರೆ ಹಣವನ್ನು ಹೊಳೆಗೆ ಎಸೆದಂತೆ. ಆಯುಸ್ಸಿನ ಪರಿಮಿತಿ ನಮಗೆ ಗೊತ್ತಿಲ್ಲ. ಅದು ಯಾವ ಕ್ಷಣದಲ್ಲಾದರೂ

ಮುಗಿಯಬಹುದು. ಬಾಲ್ಯ, ಮುಪ್ಪು, ನಿದ್ರೆ, ರೋಗ – ಇವುಗಳಲ್ಲೇ ಬಹಳ ಆಯುಸ್ಸು ಕಳೆದುಹೋಗುತ್ತದೆ. ಈ ಕಾಲದಲ್ಲಿ ನಿತ್ಯಪ್ರಯಾಣದ ಸಮಯವನ್ನೂ ಇದಕ್ಕೆ ಸೇರಿಸಬಹುದು. ಇನ್ನು ನಮಗೆ ಉಳಿಯುವುದಾದರೂ ಎಷ್ಟು ?

ಹೀಗೆ ಅತ್ಯಂತ ಪರಿಮಿತವಾದ, ಆದರೆ ಬಹುಮೂಲ್ಯದ ಕಾಲವನ್ನು ವ್ಯರ್ಥಮಾಡುವ ಹವ್ಯಾಸ ನಮ್ಮ ಜನರಲ್ಲಿ ಬೇರೂರಿದೆ. ಇಸ್ಪೀಟು ಮುಂತಾದ ಜೂಜಿನ ವ್ಯಸನದವರನ್ನು ಕೇಳಿದರೆ, ಕಾಲವನ್ನು ತಳ್ಳಲು ಈ ಮಾರ್ಗ ಎನ್ನುತ್ತಾರೆ ! ತಾನಾಗಿ ಓಡಿಹೋಗುತ್ತಿರುವ ಕಾಲವನ್ನು ಇವರು 'ತಳ್ಳು'ತ್ತಾರಂತೆ ! ಯೋಗವಾಸಿಷ್ಠದ ಒಂದು ಶ್ಲೋಕ ಹೇಳುತ್ತದೆ: "ಸೋಮಾರಿತನವೆಂಬುದು ಮಾನವನ ಶತ್ರು. ಈ ಶತ್ರು ಇಲ್ಲದಿದ್ದರೆ ಈ ಜಗತ್ತಿನಲ್ಲಿ ಒಬ್ಬ ಬಡವನಾಗಲಿ ವಿದ್ಯಾವಿಹೀನನಾಗಲಿ ಇರುತ್ತಿರಲಿಲ್ಲ" ಎಂದು.

ವಿಶೇಷವಾಗಿ ನೌಕರವರ್ಗದವರಿಗೆ ದುಡಿತದ ಕಾಲ ಪರಿಮಿತವಾಗಿದೆ. ಉಳಿದ ಕಾಲವನ್ನು ಹೇಗೆ ಕಳೆಯುತ್ತಾರೆಂಬುದು ಅಧ್ಯಯನಯೋಗ್ಯವಾದ ವಿಷಯ. ಹಾಳುಹರಟೆಯ ಪುಸ್ತಕಗಳನ್ನೋದುತ್ತ ಕಾಲಕಳೆಯುವ ಗೀಳು ಬಹಳ ಜನರಿಗಿದೆ. ಅದು ಬುದ್ಧಿಯನ್ನು ವಿಕಾಸಗೊಳಿಸುವ, ಆತ್ಮೋನ್ನತಿಗೆ ಸಾಧಕವಾದ ಸಾಹಿತ್ಯವಲ್ಲ. ಆದರಿಂದ ಸಮಯದ ನಷ್ಟವೇ ಹೊರತು ಲಾಭ ಯಾವುದೂ ಇಲ್ಲ. ಒಂದು ಸುಭಾಷಿತ ಹೇಳುತ್ತದೆ : "ಅಂಗದೇಶ ಹೇಗಿದೆ, ವಂಗದೇಶ ಹೇಗಿದೆ ಎಂದು ಜನರು ವ್ಯರ್ಥವಾಗಿ ಕುತೂಹಲದಿಂದ ವಿಚಾರಿಸುತ್ತಾ ಕಾಲಕಳೆಯುತ್ತಾರೆ. ಯಮನಗರಿ ಹೇಗಿದೆಯೆಂದು ಯಾರೂ ವಿಚಾರಿಸುವುದಿಲ್ಲವಲ್ಲ !" ಯಮನಗರಿಯೆಂಬುದು ಉಪಲಕ್ಷಣ. ಇಹಪರಗಳಿಗೆ ಉಪಯುಕ್ತವಾದ, ಸಾರವತ್ತಾದ ಸಾಹಿತ್ಯ–ಎಂದು ಅದರ ಅರ್ಥ. ಪರವಿಲ್ಲದಿದ್ದರೆ ಇಹವಾದರೂ ಇದೆಯಷ್ಟೆ. ಬಾಳಿನಲ್ಲಿ ಒಂದು ನಂಬಿಕೆ, ಆ ನಂಬಿಕೆಯನ್ನು ವಿಸ್ತರಿಸಿ ದೃಢಗೊಳಿಸುವ ವಾಙ್ಮಯವನ್ನು ಅಧ್ಯಯನ ಮಾಡುವುದೇ ಕಾವ್ಯಶಾಸ್ತ್ರವಿನೋದ.

ಪ್ರರೋಹಿಶಾಖಿನಾಂ ಶಾಖಾಸ್ಕಂಧಪರ್ವವಿದಾರಣೇ |
ಉಪಜೀವ್ಯದ್ರುಮಾಣಾಂ ಚ ವಿಂಶತೇರ್ದ್ವಿಗುಣೋ ದಮಃ || || ೫೫ ||

– ಯಾಜ್ಞವಲ್ಕ್ಯಸ್ಮೃತಿ, ೨-೨೨೮

''ಬೆಳೆಯುತ್ತಿರುವ ಮರಗಳ ಕೊಂಬೆಗಳ ಬುಡವನ್ನು ಆಕ್ರಮವಾಗಿ ಕತ್ತರಿಸಿದರೆ, ಹಾಗೆಯೇ ಉಪಕಾರಿ ವೃಕ್ಷಗಳನ್ನು ಕಡಿದರೆ ನಲವತ್ತು ನಾಣ್ಯಗಳನ್ನು ದಂಡವಾಗಿ ವಿಧಿಸಬೇಕು.''

ಸ್ಕಂಧವೆಂದರೆ ಮರದ ಕಾಂಡ; ಬುಡದಿಂದ ನೇರವಾಗಿರುವ ದಪ್ಪ ಭಾಗ. ಅದರಿಂದ ದೊಡ್ಡ ಕೊಂಬೆಗಳೂ ಅವುಗಳಿಂದ ರೆಂಬೆಗಳೂ, ಟೊಂಗೆಗಳೂ ಹೊರಟು ಶಾಖೆ–ಉಪಶಾಖೆಗಳೆನಿಸುತ್ತವೆ. ಮರದ ಕಾಂಡ ಮತ್ತು ದೊಡ್ಡ ಕೊಂಬೆ ಸಂಧಿಸುವ ಸ್ಥಳ ಶಾಖಾಸ್ಕಂಧಪರ್ವ. ಈ ಸ್ಥಳಕ್ಕೆ ಕೊಡಲಿಯನ್ನು ಹಚ್ಚಿ ಕೊಂಬೆಯನ್ನುರುಳಿಸತಕ್ಕವನಿಗೆ ನಲವತ್ತು ನಾಣ್ಯಗಳ ಜುಲ್ಮಾನೆಯನ್ನು ವಿಧಿಸಬೇಕೆಂದು ಯಾಜ್ಞವಲ್ಕ್ಯರು ನಿಯಮಿಸಿದ್ದಾರೆ. ಆ ಕಾಲದ ನಲವತ್ತು ನಾಣ್ಯಗಳೆಂದರೆ ಈಗ ಸಾವಿರ ರೂಪಾಯಿಗಳಿಗಿಂತ ಅಧಿಕವಾದೀತು. ಹಣ್ಣು ಹೂಗಳನ್ನು ಕೊಡುವ, ದಾರಿಗರಿಗೆ ನೆರಳನ್ನೀಯುವ, ಅಥವಾ ಹಕ್ಕಿಗಳಿಗೆ ಆಶ್ರಯವನ್ನಿತ್ತಿರುವ ಮರ ಉಪಜೀವ್ಯದ್ರುಮ. ಕಾಡಿನಲ್ಲಿರುವ ಹಳೆಯ ಮರವನ್ನು ಕಡಿದರೆ ಇಪ್ಪತ್ತು ನಾಣ್ಯಗಳ ಜುಲ್ಮಾನೆ.

ಯಾಜ್ಞವಲ್ಕ್ಯರ ಕಾಲದಲ್ಲಿ ಅರಣ್ಯಗಳ ಕೊರತೆಯೇನೂ ನಮ್ಮ ದೇಶದಲ್ಲಿರಲಿಲ್ಲ. ಅರಣ್ಯಮಯವಾಗಿದ್ದ ನಾಡಿನಲ್ಲಿಯೂ ಸಹ ಮರಗಳ ಬಗೆಗೆ ಆದರ, ವೃಕ್ಷಸಂಪತ್ತನ್ನು ಉಳಿಸಿಕೊಳ್ಳಬೇಕೆಂಬ ಕಳಕಳಿ ಎಷ್ಟಿತ್ತೆಂಬುದು ಈ ಸ್ಮೃತಿವಾಕ್ಯದಿಂದ ಎದ್ದುಕಾಣುತ್ತದೆ. ಧರ್ಮಶಾಸ್ತ್ರಕ್ಕೂ, ವೃಕ್ಷರಕ್ಷಣೆಗೂ ನೇರವಾದ ಸಂಬಂಧವೇನೂ ಇಲ್ಲ. ಆದರೆ ಧರ್ಮವು ಪ್ರಜೆಗಳ ಒಳಿತಿಗಾಗಿ. ಪ್ರಜಾಸಮುದಾಯವೇ ರಾಜ್ಯ. ರಾಜ್ಯದ ಒಳಿತು ವೃಕ್ಷರಕ್ಷಣೆಯಲ್ಲಿರುವುದರಿಂದ ಮರಗಳನ್ನುಳಿಸಿಕೊಳ್ಳುವುದು ರಾಜಧರ್ಮವಾಯಿತು. ರಾಜಧರ್ಮವನ್ನು ಬೋಧಿಸುವುದಕ್ಕಾಗಿ ಈ ಸ್ಮೃತಿವಾಕ್ಯ.

ಆ ಕಾಲದಲ್ಲಿ ಈಗಿನಷ್ಟು ಜನಸಂದಣಿ ಇರಲಿಲ್ಲ. ಸೌದೆಗಳನ್ನು ನುಂಗುವ ಯಂತ್ರಾಗಾರಗಳೂ ಪ್ಲೈವುಡ್ ಕಾರ್ಖಾನೆಗಳೂ ಇರಲಿಲ್ಲ. ಮರಗಳಿಂದಾಗುವ ಗೃಹೋಪಕರಣಗಳನ್ನೂ ಈಗಿನಂತೆ ಅಧಿಕವಾಗಿ ಬಳಸುತ್ತಿರಲಿಲ್ಲ. ಅಂಥ ಸಮಯದಲ್ಲಿ ವೃಕ್ಷಸಂಪತ್ತನ್ನು ಉಳಿಸಿ ಕೊಳ್ಳುವುದಕ್ಕಾಗಿ ಧರ್ಮಶಾಸ್ತ್ರ ಈ ನಿಯಮವನ್ನು ಗೊತ್ತುಮಾಡಿತ್ತು.

ಪಾರುಷ್ಯಮನೃತಂ ಚೈವ ಪೈಶುನ್ಯಂ ಚಾಪಿ ಸರ್ವಶಃ ।
ಅಸಂಬದ್ಧಪ್ರಲಾಪಶ್ಚ ವಾಙ್ಮಯಂ ಸ್ಯಾಚ್ಚತುರ್ವಿಧಮ್ ॥ ॥ ೫೬ ॥

– ಮನುಸ್ಮೃತಿ, ೧೨-೬

"ಕಠೋರವಾದ ನುಡಿ, ಸುಳ್ಳು, ಚಾಡಿ ಹೇಳುವುದು, ಅನುಪಯುಕ್ತ ವಾದ ಹರಟೆ – ಇವು ಮಾತಿನಿಂದಾಗುವ ನಾಲ್ಕು ಬಗೆಯ ಪಾಪಕೃತ್ಯಗಳು."

ಮಾತಾಡುವುದಕ್ಕೂ ಜಾಣ್ಮೆ ಬೇಕು. 'ನುಡಿದರೆ ಮಾಣಿಕ್ಯದ್ದುತಿರಬೇಕು.' ಎದೆಗೆ ಚುಚ್ಚುವಂತಹ, ನೋವಾಗುವ ಮಾತು ಕಠೋರ. ಹೇಳುವುದು ಸತ್ಯವೇ ಆದರೂ ಕೇಳುವವನಿಗೆ ಅಪ್ರಿಯವಾಗುವಂತೆ ನುಡಿಯತಕ್ಕದ್ದಲ್ಲ. ಅಪ್ರಿಯವನ್ನೇ ಮೃದುವಾಗಿ ಹಿತಮಿತ ರೀತಿಯಲ್ಲಿ ತಿಳಿಸಲು ಬರುತ್ತದೆ. ಒಂದು ವೇಳೆ ಅದು ಸುಳ್ಳಾಗಿದ್ದರೆ ಅನೃತದ ಜೊತೆಗೆ ಪಾರುಷ್ಯವೆಂಬ ದೋಷವೂ ಅಂಟಿಕೊಳ್ಳುತ್ತದೆ. ಅರಣ್ಯದಲ್ಲಿ ಶ್ರೀರಾಮನು ಆಯುಧಪಾಣಿಯಾಗಿ ಸಂಚರಿಸುತ್ತಿದ್ದಾಗ, ಸೀತೆಗೆ ಅದು ಹಿತವೆನಿಸಲಿಲ್ಲ. ತಾಪಸರಿಗೆ ಆಯುಧಗಳೇಕೆ ? – ಎಂದು ಅವಳಿಗೆ ತೋರಿತು. ಅದನ್ನು ರಾಮನಿಗೆ ತಿಳಿಸುವುದೆಂತು ? ಹೇಳಿದರೆ ರಾಮನಿಗೆ ಅಪ್ರಿಯವಾಗ ಬಹುದೆಂದೆಣಿಸಿ, ತನ್ನ ಅಭಿಪ್ರಾಯವನ್ನು ತುಂಬ ನವಿರಾಗಿ ಜಾಣ್ಮೆಯಿಂದ ತಿಳಿಸಿ (ಅರಣ್ಯಕಾಂಡ, ಸರ್ಗ ೯) ಕಡೆಯಲ್ಲಿ 'ಸ್ಮಾರಯೇ ತ್ವಾಂ ನ ಶಿಕ್ಷಯೇ' ಎನ್ನುತ್ತಾಳೆ. "ರಾಮ, ಇದು ನಿನಗೆ ಗೊತ್ತಿಲ್ಲದ ವಿಷಯವೇನಲ್ಲ.

ನಾನು ನಿನಗೆ ಜ್ಞಾಪಿಸುತ್ತಿದ್ದೇನೆಯೇ ಹೊರತು ಬೋಧಿಸುತ್ತಿಲ್ಲ." ಈ ಮಾತನ್ನು ಕೇಳಿ ರಾಮನಿಗೆ ತುಂಬ ಸಂತೋಷವೇ ಆಗುತ್ತದೆ. ಆತನು ಪ್ರತಿಯಾಗಿ ಹೇಳುವ ಮಾತೂ ಅಷ್ಟೇ ನವಿರಾದುದು.

ಎದುರಿಗೆ ಹೊಗಳತಕ್ಕವನು ಪರೋಕ್ಷವಾಗಿ ಒಬ್ಬನ ವಿಷಯದಲ್ಲಿ ಸಲ್ಲದ ಮಾತನ್ನಾಡುವುದು ಚಾಡಿ. ವಿಭೀಷಣನು ರಾವಣನ ವಿಷಯವಾಗಿ ರಾಮನಿಗೆ ಹೇಳಿದ್ದು ಚಾಡಿಯಲ್ಲ. ಏಕೆಂದರೆ, ರಾವಣನೆದುರಿಗೇ ಅವನ ತಪ್ಪನ್ನು ವಿಭೀಷಣನು ಹೇಳಿದ್ದಾನೆ. ರಾವಣನ ಕೃತ್ಯವೂ ಲೋಕವಿದಿತವೇ. ಚಾಡಿಯ ಉದ್ದೇಶ ಒಬ್ಬರ ವಿಷಯದಲ್ಲಿರುವ ಸದ್ಭಾವನೆಯನ್ನು ತೊಲಗಿಸಿ ದುರ್ಭಾವನೆಯನ್ನುಂಟುಮಾಡುವುದು.

ಅಸಂಬದ್ಧ ಪ್ರಲಾಪವನ್ನು ಹಾಳುಹರಟೆ ಅಥವಾ ಕಾಡುಹರಟೆ ಎನ್ನಬಹುದು. ಸಾಮಾನ್ಯವಾಗಿ ಪಾಪಕರ್ಮದಲ್ಲಿ ಪರಹಿಂಸೆಯುಂಟು. ಅಸಂಬದ್ಧ ಪ್ರಲಾಪದಲ್ಲಿರುವುದು ಆತ್ಮಹಿಂಸೆ, ಪರಹಿಂಸೆಗಳೆರಡೂ. ಹರಟುವವನು ಅಮೂಲ್ಯವಾದ ತನ್ನ ಕಾಲವನ್ನೂ ಪರರ ಕಾಲವನ್ನೂ ವ್ಯರ್ಥಮಾಡುತ್ತಾನೆ. ಜೊತೆಗೆ ಪರನಿಂದೆ, ಅಸತ್ಯ ಸೇರಿಕೊಳ್ಳುತ್ತವೆ. 'ಸತ್ಯಾಯ ಮಿತಭಾಷಿಣಾಂ' ಎಂದಿದ್ದಾನೆ ಕಾಳಿದಾಸ. 'ರಘುವಂಶದ ಅರಸರು ಸತ್ಯಪಾಲನೆಗಾಗಿ ಮಿತಬಭಾಷಿಗಳು'. ಹರಟೆ ಹೊಡೆಯುವವನು ಮಿತಭಾಷಿಯಲ್ಲ. ಒಂದು ಕ್ಷಣವನ್ನು ಪೋಲುಮಾಡಿದರೂ ಅರ್ಥಹಾನಿ ಎಂದು ಅರ್ಥಶಾಸ್ತ್ರ ಹೇಳಿದರೆ, ಧರ್ಮಹಾನಿಯೂ ಉಂಟೆನ್ನುತ್ತದೆ ಧರ್ಮಶಾಸ್ತ್ರ. ಈ ಕಾಲದಲ್ಲಿ ಅಸಂಬದ್ಧ ಪ್ರಲಾಪದೊಂದಿಗೆ ಅಸಂಬದ್ಧ ಬರವಣಿಗೆಯನ್ನೂ ಸೇರಿಸಿಕೊಳ್ಳಬಹುದು. ಕೆಲವು ರಾಜಕಾರಣಿಗಳನ್ನು ನೆನೆಸಿಕೊಂಡಾಗ ಈ 'ಪಂಚವಿಧ' ಪಾಪಕೃತ್ಯಗಳೂ ಕಣ್ಣಮುಂದೆ ನಿಂತಂತಾಗುತ್ತದೆ.

**ಭೂರ್ಧಾರಯತಿ ಸತ್ಯೇನ ಸತ್ಯೇನೋದಯತೇ ರವಿಃ |**
**ಸತ್ಯೇನ ವಾಯುಃ ಪವತೇ ಸತ್ಯೇನಾಪಃ ಸ್ರವಂತಿ ಚ || || ೫೭ ||**

— ನಾರದಸ್ಮೃತಿ, ೨-೧೯೧

"ಸತ್ಯದಿಂದ ಭೂಮಿಯು ಧಾರಣ ಮಾಡುತ್ತದೆ. ಸತ್ಯದಿಂದ

ಸೂರ್ಯನು ಉದಯಿಸುತ್ತಾನೆ. ಗಾಳಿ ಬೀಸಿ ಮಾಲಿನ್ಯವನ್ನು ಶೋಧಿಸುವುದು ಸತ್ಯದಿಂದ. ನೀರು ಹರಿಯುವುದು ಸತ್ಯದಿಂದ.''

ಯಥಾರ್ಥವಾದದ್ದನ್ನು ಮಾತಿನಿಂದ ವ್ಯಕ್ತಪಡಿಸುವುದು ಸತ್ಯ. ಇದು ಈಗ ರೂಢಿಯಲ್ಲಿರುವ ಅರ್ಥ. ಮೇಲಿನ ಶ್ಲೋಕದಲ್ಲಿ ವಿವಕ್ಷಿತವಾದ ಅರ್ಥ ಇಷ್ಟೇ ಅಲ್ಲ. 'ಸತ್ಯ' ಶಬ್ದದ ಅರ್ಥ ಇನ್ನೂ ವ್ಯಾಪಕವಾದುದು. 'ಸತ್ಯಂ ಜ್ಞಾನಮನಂತಂ ಬ್ರಹ್ಮ' – ಈ ಉಪನಿಷದ್ವಾಕ್ಯದಲ್ಲಿ ಪರಬ್ರಹ್ಮವನ್ನು ಸತ್ಯವೆಂದು ಹೇಳಿದೆ. ಯಾವುದು ಸ್ಥಿರವಾದದ್ದೋ, ಅಚಲವಾದದ್ದೋ, ಬದಲಾವಣೆಯಿಲ್ಲದ್ದೋ, ಶಾಶ್ವತವಾದದ್ದೋ ಅದು ಸತ್ಯ. ಪರಮಾರ್ಥವಾಗಿ ಇರತಕ್ಕ 'ಸತ್' ಯಾವುದೋ ಅದು ಸತ್ಯ.

ಅಸತ್ಯ, ಅನೃತ – ಇವು ಸಮಾನಾರ್ಥದಲ್ಲಿ ಪ್ರಯುಕ್ತವಾಗಿರುವು ದುಂಟು. ಋತವಲ್ಲದ್ದು ಅನೃತ, ಅದೇ ಅಸತ್ಯ. 'ಋತಂ ವದಿಷ್ಯಾಮಿ, ಸತ್ಯಂ ವದಿಷ್ಯಾಮಿ,' 'ಸತ್ಯಂ ತ್ವರ್ತೇನ ಪರಿಷಿಂಚಾಮಿ' ಇತ್ಯಾದಿ ಸ್ಥಳದಲ್ಲಿ ಸೂಕ್ಷ್ಮವಾದ ಅರ್ಥಭೇದವನ್ನು ಹೇಳಬೇಕಾಗುತ್ತದೆ. ಈ ಎರಡು ಶಬ್ದಗಳ ಜೊತೆಗೆ ಧರ್ಮಶಬ್ದವೂ ಸೇರಿಕೊಳ್ಳುತ್ತದೆ. 'ಧಾರಣಾತ್ ಧರ್ಮ ಇತ್ಯಾಹುಃ ಧರ್ಮೋ ಧಾರಯತೇ ಪ್ರಜಾಃ' ಈ ಸ್ಮೃತಿವಾಕ್ಯದಲ್ಲಿ ಧರ್ಮವೇ ಜಗತ್ತನ್ನು ಧರಿಸಿದೆ ಎಂದು ಹೇಳಿದೆ. ಇದರಿಂದ ಋತ, ಸತ್ಯ, ಧರ್ಮ – ಈ ಮೂರೂ ಒಂದೇ ಮೂಲವೆಂದು ಸಿದ್ಧವಾಗುತ್ತದೆ.

ಶಾಸ್ತ್ರೀಯವಾಗಿ ಬುದ್ಧಿಯಲ್ಲಿ ನಿಶ್ಚಿತವಾದದ್ದು ಋತ, ಅದೇ ವಾಕ್ಕಿನಿಂದ ಅಭಿವ್ಯಕ್ತವಾದಾಗ ಸತ್ಯ, ಅದೇ ಕ್ರಿಯಾರೂಪವನ್ನು ತಳೆದಾಗ ಧರ್ಮವೆನಿಸುತ್ತದೆ. ಹೀಗೆ ಮಾನಸಿಕ, ವಾಚಿಕ, ಕಾಯಿಕವಾದ ಒಂದೇ ವಸ್ತು ಜಗತ್ತನ್ನು ಧರಿಸಿದೆ. ಇದು ಅವಶ್ಯಭಾವಿಯಾದ ಈಶ್ವರನಿಯಮ. ಪ್ರತಿಯೊಂದು ಪದಾರ್ಥದ ನಿಶ್ಚಿತ ಸ್ವಭಾವ. ಸರಳವಾಗಿ ಹೇಳುವುದಾದರೆ ಇದೇ ಸ್ವಧರ್ಮ. ಈ ಸ್ವಧರ್ಮದಿಂದ ಒಂದು ಜಡವಸ್ತುವಾಗಲಿ ಪ್ರಾಣಿಯಾಗಲಿ ವಿಚಲಿತ ವಾದರೆ ಕೇಡು ನಿಶ್ಚಿತ.

''ಭೀಷಾಸ್ಮಾದ್ ವಾತಃ ಪವತೇ, ಭೀಷೋದೇತಿ ಸೂರ್ಯಃ....'' ಸ್ವಧರ್ಮವನ್ನು ಪಾಲಿಸಬೇಕೆಂದು ಈಶ್ವರನಿಗೆ ಹೆದರಿ ಗಾಳಿ ಬೀಸುವುದಂತೆ.

ಹೆದರಿಯೇ ಸೂರ್ಯನು ಪ್ರತಿದಿನ ಉದಯಿಸುತ್ತಾನಂತೆ ! ಬೆಂಕಿ ಸುಡದಿದ್ದಲ್ಲಿ, ವಾಯು ಬೀಸದಿದ್ದಲ್ಲಿ, ಆಗಬಹುದಾದ ಅನರ್ಥ ಊಹೆಗೆ ಮೀರಿದ್ದು.

ಜಡವಸ್ತುಗಳು ತಮ್ಮ ಧರ್ಮವನ್ನು ಎಳ್ಳಷ್ಟೂ ಮೀರುವುದಿಲ್ಲ. ಮೃಗ–ಪಕ್ಷಿ, ಕ್ರಿಮಿ–ಕೀಟಗಳೂ ಅಷ್ಟೇ. ಸ್ವಧರ್ಮವನ್ನು ಮೀರತಕ್ಕವನು ಮಾನವನೊಬ್ಬನೇ. ಈತನು ತನ್ನ ಮಾನವಧರ್ಮದಿಂದ ವಿಚಲಿತನಾಗಿ ಪರಧರ್ಮವಾದ ಮಂಗಚೇಷ್ಟೆಗೆ ವಶನಾದ್ದರಿಂದ ತಾನೂ ಸಂಕಟಕ್ಕೆ ಸಿಕ್ಕಿಕೊಳ್ಳುತ್ತಾನೆ, ಭಾರಿ ಗೊಂದಲವನ್ನೆಬ್ಬಿಸಿ ಅನ್ಯರಿಗೂ ವಿಪತ್ತನ್ನು ತರುತ್ತಾನೆ.

ಮಹತಾಪಿ ಪ್ರಯತ್ನೇನ ತಮಿಸ್ರಾಯಾಂ ಪರಾಮೃಶನ್ ।
ಕೃಷ್ಣಶುಕ್ಲವಿವೇಕಂ ಹಿ ನ ಕಶ್ಚಿದಧಿಗಚ್ಛತಿ ॥ ॥ ೫೮ ॥

– ತಂತ್ರವಾರ್ತಿಕ, ೧-೩-೧

"ಕತ್ತಲು ತುಂಬಿದ ರಾತ್ರಿಯಲ್ಲಿ ಎಷ್ಟು ಶ್ರಮದಿಂದ ಕೈದಡವಿ ನೋಡಿದರೂ 'ಇದು ಕಪ್ಪು, ಇದು ಬಿಳುಪು' ಎಂಬ ವಿಭಾಗವನ್ನು ಯಾವನೂ ಗೊತ್ತುಮಾಡಲಾರ."

ಐದು ಜ್ಞಾನೇಂದ್ರಿಯಗಳಲ್ಲಿ ವಸ್ತುವಿನ ರೂಪವನ್ನೂ, ಬಣ್ಣವನ್ನೂ ಗ್ರಹಿಸತಕ್ಕದ್ದು ಕಣ್ಣು ಮಾತ್ರ. ಉಳಿದ ಇಂದ್ರಿಯಗಳಲ್ಲಿ ಕಿವಿ ಶಬ್ದವನ್ನೂ, ತ್ವಗಿಂದ್ರಿಯ (ಚರ್ಮ, ಕೈ) ಸ್ಪರ್ಶವನ್ನೂ ಎಂದರೆ ಶೀತೋಷ್ಣಗಳನ್ನೂ ಮೃದುತ್ವ ಕಠಿಣತ್ವಾದಿಗಳನ್ನೂ ಗ್ರಹಿಸುತ್ತವೆ. ನಾಲಗೆ ರುಚಿಯನ್ನೂ, ಮೂಗು ಗಂಧವನ್ನೂ ತಿಳಿಯಬಲ್ಲವು. ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳೆಂಬ ಐದು ವಿಷಯಗಳನ್ನು ಗ್ರಹಿಸಲು ಐದು ಜ್ಞಾನೇಂದ್ರಿಯಗಳಿವೆ. ಇವುಗಳಲ್ಲಿ ಒಂದರ ಕೆಲಸವನ್ನಿನ್ನೊಂದು ಮಾಡುವುದಿಲ್ಲ. ತ್ವಗಿಂದ್ರಿಯ ರಸವನ್ನು ಗೊತ್ತು ಮಾಡದು. ಆದರೆ ತ್ವಗಿಂದ್ರಿಯದಿಂದ ವಸ್ತುವಿನ ಆಕೃತಿಯನ್ನು–ಇದು ದುಂಡಾಗಿದೆಯೆ, ಚೌಕವಾಗಿದೆಯೆ, ಉದ್ದವಾಗಿದೆಯೆ, ಎಂಬುದನ್ನು– ಅರಿಯಲು ಸಾಧ್ಯ. ಕಣ್ಣು ಆಕೃತಿಯನ್ನೂ ಗ್ರಹಿಸಬಲ್ಲದೆಂಬುದೊಂದು

ವಿಶೇಷ. ಕಣ್ಣಿನ ಇನ್ನೊಂದು ವಿಶೇಷವೇನೆಂದರೆ, ರೂಪಗ್ರಹಣ ಮಾಡುವುದಕ್ಕೆ ಅದು ಹೊರಗಿನ ಬೆಳಕನ್ನಪೇಕ್ಷಿಸುತ್ತದೆ. ಉಳಿದ ಇಂದ್ರಿಯಗಳಿಗೆ ಹೊರಗಿನ ಯಾವ ನೆರವೂ ಬೇಕಿಲ್ಲ.

ಇಂದ್ರಿಯವು ತನ್ನ ವಿಷಯವನ್ನು ಗ್ರಹಿಸಬೇಕಾದರೆ ತಾನು ಸ್ವಚ್ಛವಾಗಿ ಆರೋಗ್ಯದಿಂದಿರಬೇಕು. ಅದಕ್ಕೂ ವಿಷಯಕ್ಕೂ ನಡುವೆ ಅಡ್ಡಿ ಆತಂಕಗಳಿರಬಾರದು. ನಡುವೆ ಗೋಡೆ ಇದ್ದರೆ ಕಣ್ಣು ವಸ್ತುವಿನ ರೂಪವನ್ನು ಗ್ರಹಿಸದು.

ವಾಸ್ತವದಲ್ಲಿ ಇಂದ್ರಿಯಗಳೆಲ್ಲ ಉಪಕರಣಗಳು. ಇವುಗಳ ಹಿಂದೆ ನಿಂತು ಎಲ್ಲ ವಿಷಯಗಳನ್ನೂ ಗ್ರಹಿಸತಕ್ಕದ್ದು ಮನಸ್ಸು–ಬುದ್ಧಿ. ಉಪಕರಣಗಳಂತೆ ಮನಸ್ಸೂ ಸಹ ಸ್ವಚ್ಛವಾಗಿದ್ದರೆ ಮಾತ್ರ ವಸ್ತುವಿನ ನಿಜಸ್ವರೂಪ ತಿಳಿಯುತ್ತದೆ. ಮನಸ್ಸು ಕೆಟ್ಟಿರುವವನಿಗೆ, ಪೂರ್ವಗ್ರಹ ಬಾಧಿತನಿಗೆ ಸತ್ಯವೆಂದೂ ಗೋಚರಿಸದು. ಕಲುಷಿತವಾದ ಬುದ್ಧಿಯು ಪದಾರ್ಥದ ಯಥಾರ್ಥತೆಯನ್ನರಿಯಲು ಅಶಕ್ತವಾಗುತ್ತದೆ. ಆಗ ಸುಳ್ಳು ಸತ್ಯವಾಗಿಯೂ ಸತ್ಯವು ಸುಳ್ಳಾಗಿಯೂ ಕಾಣುತ್ತದೆ. ಕಪ್ಪು ಯಾವುದು, ಬಿಳುಪು ಯಾವುದು – ಎಂಬುದು ತಿಳಿಯುವುದೇ ಇಲ್ಲ.

ಕಣ್ಣಿಗೆ ಪೊರೆ ಬಂದಂತೆ ಕೆಲವರ ಬುದ್ಧಿಗೂ ತೆರೆ ಬಂದಿರುತ್ತದೆ. ರಾಮ ರಾವಣನಿಗೆ ಕೈಲಾಗದ ಮನುಷ್ಯನಾಗಿ ಕಾಣಿಸಿದ. ಸತೀಶಿರೋಮಣಿಯಾದ ಸೀತಾದೇವಿ ದುರ್ಬಲಮನಸ್ಸಿನ ಮನುಷ್ಯಳಾಗಿ ತೋರಿದಳು. ದುರ್ಯೋಧನನಿಗೆ ಪಾಂಡವರು ಹುಟ್ಟುವೈರಿಗಳಾಗಿ ಗೋಚರಿಸಿದರು. ಈ 'ತೆರೆಯ ರೋಗ' ಇಂದಿನ ರಾಜಕಾರಣಿಗಳಿಗೂ ತಪ್ಪಿದ್ದಲ್ಲ, ಕಾವ್ಯ ವಿಮರ್ಶಕರಿಗೂ ತಪ್ಪಿದ್ದಲ್ಲ.

ಲೋಭಃ ಸ್ವಪ್ನೋಽಧೃತಿಃ ಕ್ರೌರ್ಯಂ ನಾಸ್ತಿಕ್ಯಂ ಭಿನ್ನವೃತ್ತಿತಾ |
ಯಾಚಿಷ್ಣುತಾ ಪ್ರಮಾದಶ್ಚ ತಾಮಸಂ ಗುಣಲಕ್ಷಣಮ್ || || ೫೯ ||

– ಮನುಸ್ಮೃತಿ, ೧೨-೩೩

"ಹಣದಲ್ಲಿ ಅಧಿಕವಾದ ಆಸೆ, ಹೆಚ್ಚಾಗಿ ನಿದ್ರಿಸುವುದು, ಅಸಂತುಷ್ಟಿ, ಪರಹಿಂಸೆ, ನಾಸ್ತಿಕತೆ, ಆಚಾರಲೋಪ, ಬೇಡುವ ಸ್ವಭಾವ, ಎಚ್ಚರಿಕೆಯನ್ನು ವಹಿಸದೆ ದುಡುಕುವುದು—ಇವು ತಾಮಸಗುಣಗಳ ಲಕ್ಷಣ."

ಸತ್ತ್ವ, ರಜಸ್ಸು, ತಮಸ್ಸು – ಎಂಬ ಮೂರು ಗುಣಗಳು ಎಲ್ಲ ಮಾನವರಲ್ಲಿಯೂ ಇರುತ್ತವೆ. ಕೆಲವರಲ್ಲಿ ಒಂದು ಅಧಿಕವಾಗಿ ಉಳಿದವು ಕಡಮೆಯಾಗಿ ಇರಬಹುದು. ಇವು ಮೂರೂ ಇಲ್ಲದ ಪ್ರಾಣಿ ಇಲ್ಲ. ಇವುಗಳಲ್ಲಿ ತಮೋಗುಣ ಮನುಷ್ಯನನ್ನು ಕೆಳಮಟ್ಟಕ್ಕೆ ತಳ್ಳತಕ್ಕದ್ದು. ಮೇಲ್ಕಂಡ ಲೋಭಾದಿಗಳು ತಮೋಗುಣದಿಂದ ಪ್ರವೃತ್ತವಾಗುತ್ತವೆ – ಎನ್ನುತ್ತಾನೆ ಮನುಸ್ಮೃತಿಕಾರ.

ನಾಸ್ತಿಕ್ಯವೂ ತಮೋಗುಣಜನ್ಯವೆಂದಿರುವುದು ಗಮನಾರ್ಹ. 'ಇಲ್ಲ' ಎಂದು ಹೇಳುವ ಒಂದು ಮಾನಸ ಪ್ರವೃತ್ತಿ 'ನಾಸ್ತಿಕ್ಯ.' ಯಾವುದು ಕಣ್ಣಿಗೆ ಕಾಣುವುದಿಲ್ಲವೋ, ಕೈಗೆ ಸಿಗುವುದಿಲ್ಲವೋ ಅದು 'ಇಲ್ಲ.' ದೇವರಿಲ್ಲ, ದೇಹಾತಿರಿಕ್ತ ಆತ್ಮನಿಲ್ಲ, ಆದ್ದರಿಂದಲೇ ಪುನರ್ಜನ್ಮವಿಲ್ಲ, ಧರ್ಮಾಧರ್ಮಗಳು ಜನ್ಮಾಂತರದಲ್ಲಿ ಫಲವನ್ನು ಕೊಡುತ್ತವೆ ಎಂಬುದಿಲ್ಲ – ಎನ್ನುವುದು ನಾಸ್ತಿಕತೆ. ಇದು ತಾಮಸಗುಣದ ಲಕ್ಷಣವೆಂದಿರುವ ಮನುವಿನ ಆಶಯವೇನಿರಬಹುದು ?

ಸತ್ತ್ವರಜೋಗುಣಗಳು ಬುದ್ಧಿಶಕ್ತಿಯನ್ನು ತೀವ್ರವಾಗಿ ವಿಚಾರ ಮಾಡಲು ಪ್ರೇರಿಸುತ್ತವೆ. ತಮೋಗುಣವು ವಿಚಾರಶಕ್ತಿಯನ್ನು ಮೊಟಕಿಸುತ್ತದೆ. ತಮಸ್ಸೆಂದರೆ ಕತ್ತಲೆ. ಮುನ್ನೋಟಕ್ಕೆ ಅಡ್ಡಿ ಬರುವ ಪರದೆ ಇದ್ದಂತೆ ಅದು. ನಾಸ್ತಿಕತೆ ವಿಚಾರಜನ್ಯವಾದ್ದಲ್ಲ, ವಿಚಾರ ಮಾಡಲು ನಿರಾಕರಿಸಿದ್ದರಿಂದ ಹುಟ್ಟಿದ್ದು ಅದು. 'ನಾಸ್ತಿ' ಎನ್ನಲು ಬುದ್ಧಿಕ್ಲೇಶವೇನುಂಟು? 'ಕಣ್ಣಿಗೆ ಕಾಣದ್ದರಿಂದ ಇಲ್ಲ. ಜಗತ್ತಿನ ವೈಚಿತ್ರ್ಯವೆಲ್ಲವೂ ವಸ್ತುಸ್ವಭಾವ' ಎನ್ನುತ್ತಹೋದರೆ ಸರಿ, ನಾಸ್ತಿಕನ ಕರ್ತವ್ಯ ಮುಗಿಯಿತು. ಆಸ್ತಿಕನಿಗಾದರೋ ಕಣ್ಣಿಗೆ ಕಾಣದ್ದನ್ನೂ ಅನುಭವಗೋಚರವಲ್ಲದ್ದನ್ನೂ ಸ್ಥಾಪಿಸಬೇಕಾಗಿದೆ. ಅವನ ಜವಾಬ್ದಾರಿ ಅಧಿಕ. ವಿಚಾರಶಕ್ತಿಗೆ ಆಸ್ತಿಕತೆ ಒರೆಗಲ್ಲಾಗುತ್ತದೆ.

ಸೂಕ್ಷ್ಮಾತಿಸೂಕ್ಷ್ಮವಾದ ವಸ್ತು 'ಅಸ್ತಿ' ಎಂದು ಹೇಳಿದವರು ಮಹಾಪ್ರಾಜ್ಞರೇ ಹೊರತು ಅಲ್ಪಪ್ರಜ್ಞರಲ್ಲ.

ಆಸ್ತಿಕರಲ್ಲಿ ಅವಿದ್ಯಾವಂತರ ಸಂಖ್ಯೆ ಅಧಿಕವಾಗಿರುವುದರಿಂದ ಅದು ಮೌಢ್ಯವೆಂದು ಸಿದ್ಧವಾಗುವುದಿಲ್ಲ. ಮೇಧಾವಿಗಳಾದ ವಿಜ್ಞಾನಿಗಳು ಕಂಡುಹಿಡಿದ ಉಪಕರಣಗಳನ್ನು ಪಾಮರರೂ ಬಳಸುತ್ತಾರೆ. ಅದರಿಂದ ಆ ಉಪಕರಣಗಳನ್ನು ಪಾಮರರು ಕಂಡುಹಿಡಿದದ್ದೆಂದು ಹೇಳಲಾದೀತೆ ? 'ವಿಚಾರವಾದಿ'ಗಳೆಂಬ ಹೆಸರಿನಿಂದ ನಾಸ್ತಿಕತೆಯನ್ನು ಪ್ರಚಾರ ಮಾಡತಕ್ಕವರಿಗೆ ಮನುವಿನ ಉಕ್ತಿ ಒಂದು ಸವಾಲಾಗಿ ನಿಲ್ಲುತ್ತದೆ.

ಸಭಾ ವಾ ನ ಪ್ರವೇಷ್ಟವ್ಯಾ ವಕ್ತವ್ಯಂ ವಾ ಸಮಂಜಸಮ್ |
ಅಬ್ರುವನ್ ವಿಬ್ರುವನ್ ವಾಽಪಿ ನರೋ ಭವತಿ ಕಿಲ್ಬಿಷೀ || || ೬೦ ||

– ಮನುಸ್ಮೃತಿ, ೮-೧೩

"ಸಭೆಯನ್ನು (ಯಾರೆಂದರವರು) ಪ್ರವೇಶಿಸಬಾರದು. ಒಂದು ವೇಳೆ ಪ್ರವೇಶಿಸಿದರೆ ಸಮಂಜಸವಾಗಿ ಮಾತನಾಡಬೇಕು. (ಸತ್ಯವು ತಿಳಿದಿದ್ದರೂ) ಯಾವಾತನು ಮಾತನಾಡದೆ ಸುಮ್ಮನಿರುತ್ತಾನೋ ಅಥವಾ ಅದಕ್ಕೆ ವಿರುದ್ಧವಾಗಿ ಸುಳ್ಳು ಹೇಳುತ್ತಾನೋ ಆತನು ಪಾಪಿಯಾಗುತ್ತಾನೆ."

ಸಭೆಯೆನ್ನುವುದು ದೊಡ್ಡ ಅರ್ಥವುಳ್ಳ ಶಬ್ದ. ಸಭೆಯೆಂದರೆ ಧರ್ಮಸಭೆ, ನ್ಯಾಯಸಭೆ – ಎಂದು ಪ್ರಾಚೀನ ಕಾಲದ ವ್ಯವಹಾರ. ಈಗ ಪ್ರಜಾಪ್ರಭುತ್ವವನ್ನಂಗೀಕರಿಸಿ ವಿಧಾನಸಭೆ, ಲೋಕಸಭೆ, ಶಾಸನಸಭೆ—ಎಂದು ಯಾವುದಕ್ಕೆ ಹೇಳುತ್ತೇವೋ ಅಂತಹದು ಹಿಂದಿನ ಕಾಲದ ಧರ್ಮಸಭೆ. 'ಭಾ' ಎಂದರೆ ಪ್ರಕಾಶ. ಪ್ರಕಾಶದಿಂದ ಸಹಿತವಾದದ್ದು ಸಭಾ. 'ಸಹ ಭಾಂತಿ ಅತ್ರ, ಸಮಾನಾಃ ಭಾಂತಿ ಅತ್ರ' – ಎಂದೂ ಸಭಾ ಶಬ್ದದ ವ್ಯುತ್ಪತ್ತಿ ಇದೆ. 'ಸದಸ್ಯರು ಜೊತೆಗೂಡಿ ಇಲ್ಲಿ ಪ್ರಕಾಶಿಸುತ್ತಾರೆ, ಸಮಾನವಾಗಿ ಪ್ರಕಾಶಿಸು

ತ್ತಾರೆ' ಎಂದರ್ಥ. ಸತ್ಯ ಧರ್ಮಗಳಿಂದ ವಿರಾಜಿಸುವುದೇ ಪ್ರಕಾಶ. ಯಾವ ಸ್ಥಳದಲ್ಲಿ ಸದಸ್ಯರು ಸತ್ಯ–ಧರ್ಮಗಳನ್ನು ಪಾಲಿಸುತ್ತ, ತಮ್ಮ ವಿದ್ಯಾ ಬಲದಿಂದ ಪ್ರಕಾಶಿಸುವರೋ ಅದು ಸಭೆ.

ನ ಸಾ ಸಭಾ ಯತ್ರ ನ ಸಂತಿ ವೃದ್ಧಾಃ
ನ ತೇ ವೃದ್ಧಾ ಯೇ ನ ವದಂತಿ ಸತ್ಯಮ್ ||

– ಎಂದು ಮಹಾಭಾರತ ಹೇಳುತ್ತದೆ. 'ಎಲ್ಲಿ ಹಿರಿಯರಿಲ್ಲವೋ ಅದು ಸಭೆಯಲ್ಲ. ಯಾರು ಸತ್ಯವನ್ನು ನುಡಿಯುವುದಿಲ್ಲವೋ ಅವರು ಹಿರಿಯರೇ ಅಲ್ಲ !'

'ಸಭಾ ವಾ ನ ಪ್ರವೇಷ್ಟವ್ಯಾ' ಎನ್ನುವ ಮನುವಿನ ತಾತ್ಪರ್ಯ ಹೀಗೆ: ಸಭಾಸದನಿಗೆ (ಶಾಸಕನಿಗೆ) ತುಂಬ ಹೊಣೆ ಇರುತ್ತದೆ. ಅದನ್ನು ನಿರ್ವಹಿಸುವುದು ಕಠಿಣ. ಆ ಜವಾಬ್ದಾರಿಯನ್ನು ಹೊತ್ತು ಕರ್ತವ್ಯಪಾಲನೆ ಮಾಡಬಲ್ಲವನು ಶಾಸನಸಭೆಯನ್ನು ಪ್ರವೇಶಿಸಬೇಕು, ಅದಿಲ್ಲವಾದರೆ ಶಾಸಕನಾಗುವುದೇ ಬೇಡ. ಶಾಸಕನಾಗದಿದ್ದರೆ ಪಾಪವೇನೂ ಬರುವುದಿಲ್ಲ. ಶಾಸಕನಾಗಿ ಸಭೆಯನ್ನು ಪ್ರವೇಶಿಸುತ್ತೀಯೋ, ಹಾಗಿದ್ದರೆ ಸಭೆಯಲ್ಲಿ ಸಮಂಜಸವಾಗಿ ಮಾತನಾಡು. ಸತ್ಯವನ್ನು ಎತ್ತಿಹಿಡಿ. ಪ್ರಜೆಗಳಿಗೆ ನ್ಯಾಯವನ್ನು ದೊರಕಿಸಿ ಕೊಡಲು ಯತ್ನಿಸು. ಯಾರದೋ ಒತ್ತಡಕ್ಕೆ ಒಳಗಾಗಿ, ಅಥವಾ ಸ್ವಾರ್ಥ, ಅಸೂಯೆ, ಸೇಡಿನ ಮನೋಭಾವ ಮುಂತಾದವುಗಳಿಗೆ ಒಳಗಾಗಿ ಸತ್ಯವನ್ನು ಮರೆಮಾಚುವುದು ಮಹಾಪರಾಧವಾಗುತ್ತದೆ. ಅದು ಪಾಪ, ಅಧರ್ಮ.

ಮನುಸ್ಮೃತಿಕಾರನು ನಿರ್ದೇಶಿಸಿದ ಧರ್ಮಸಭಾವ್ಯವಹಾರವನ್ನೂ ಇಂದಿನ ಶಾಸನಸಭೆಗಳ ವ್ಯವಹಾರಗಳನ್ನೂ ಕುತೂಹಲಿಗಳು ಹೋಲಿಸಿ ನೋಡಬಹುದು.

ಸಂಭೂಯ ವಣಿಜಾಂ ಪಣ್ಯಮನರ್ಘೇಣೋಪರುಂಧತಾಮ್ |
ವಿಕ್ರೀಣತಾಂ ವಾ ವಿಹಿತೋ ದಂಡ ಉತ್ತಮಸಾಹಸಃ || || ೬೧ ||

– ಯಾಜ್ಞವಲ್ಕ್ಯಸ್ಮೃತಿ, ೨-೨೫೦

"ವರ್ತಕರು ಒಗ್ಗಟ್ಟಾಗಿ ತಮಗೆ ಬೇಕಾದ ವಿಕ್ರೇಯ ವಸ್ತುವನ್ನು ಅಲ್ಪ ಬೆಲೆಗೆ ಕೇಳಿ ಉತ್ಪಾದಕರನ್ನು ತೊಂದರೆಪಡಿಸುತ್ತಿದ್ದರೆ, ಮತ್ತು ತೋರಿದ ಹೆಚ್ಚಿನ ಬೆಲೆಗೆ ಮಾರುತ್ತಿದ್ದರೆ, ಆ ವರ್ತಕರಿಗೆ ರಾಜನು ಅತ್ಯಧಿಕ ಜುಲ್ಮಾನೆಯನ್ನು ವಿಧಿಸಬೇಕು."

ವಾಣಿಜ್ಯ ವೃತ್ತಿಯಲ್ಲಿ ಲಾಭಬಡುಕತನದಿಂದಾಗಿ ನೈತಿಕತೆ ಹಿಂದೆಯೂ ಇರಲಿಲ್ಲವೆಂಬುದಕ್ಕೆ ಯಾಜ್ಞವಲ್ಕ್ಯಸ್ಮೃತಿಯ ಈ ಮಾತು ಸಾಕ್ಷಿಯಾಗುತ್ತದೆ. ಈ ಬಗೆಯ ನೀತಿಹೀನ ಪ್ರವೃತ್ತಿ ತ್ರಿಕಾಲಾಬಾಧಿತ ! ಹಿಂದೆ ಈ ಬಗೆಯ ಪಣ್ಯವ್ಯವಹಾರ ವಿಶೇಷವಾಗಿ ಕೃಷಿಯ ಉತ್ಪನ್ನಗಳಿಗೆ ಸಂಬಂಧಿಸಿತ್ತು. ಈಗಿರುವಂತೆ ಕಾರ್ಖಾನೆಗಳ ಉತ್ಪನ್ನಗಳು ಅಧಿಕವಾಗಿರಲಿಲ್ಲ. ಬಟ್ಟೆ, ಮಣ್ಣಿನ ಪಾತ್ರೆ, ಹಿತ್ತಾಳೆ, ತಾಮ್ರ, ಕಬ್ಬಿಣ ಮುಂತಾದ ಲೋಹದ ಸಾಮಗ್ರಿಗಳು ಪರಿಮಿತ. ಇವೆಲ್ಲ ವಸ್ತುಗಳನ್ನು ಉತ್ಪಾದಕರಿಂದ ಬಳಕೆದಾರರಿಗೆ ತಲಪಿಸುವ ಮಧ್ಯಸ್ಥರು ವ್ಯಾಪಾರಿಗಳು. ಅತ್ತ ಉತ್ಪಾದಕರಿಗೆ ಕನಿಷ್ಠ ಬೆಲೆಯ ಸಂದಾಯ, ಇತ್ತ ಬಳಕೆದಾರರಿಂದ ಗರಿಷ್ಠ ಬೆಲೆಯ ವಸೂಲಿ. ಉತ್ಪಾದಕರೂ ಬಳಕೆದಾರರೂ ಪರಸ್ಪರಾವಲಂಬಿಗಳು. ಮಧ್ಯಸ್ಥರಾದ ಧನಿಕರಿಂದ ಇವರಿಬ್ಬರ ಶೋಷಣೆ ನಡೆಯುತ್ತದೆ.

ಈ ಶೋಷಣೆಯ ಮೂಲತತ್ತ್ವ ಯಾವುದು ? ಕನಿಷ್ಠಶ್ರಮದಿಂದ ಗರಿಷ್ಠ ಲಾಭವನ್ನು ಗಳಿಸುವುದು. ಇಂದಿನ ಆರ್ಥಿಕ ಮತ್ತು ರಾಜಕೀಯ ಅವ್ಯವಸ್ಥೆಯಿಂದಾಗಿ, ಈ ತಂತ್ರವು ವರ್ತಕರಿಗೆ ಮಾತ್ರ ಸೀಮಿತವಾಗದೆ ಎಲ್ಲೆಡೆಯೂ ವ್ಯಾಪಿಸಿದೆ. ಕಾರ್ಮಿಕರಿಗೆ ಕೆಲಸ ಕಡಮೆಯಾಗಬೇಕು, ಕೂಲಿ ಹೆಚ್ಚಬೇಕು. ನೌಕರರಿಗೆ ರಜಾ ಸೌಲಭ್ಯ ಅಧಿಕವಾಗಬೇಕು, ವೇತನ ಏರಬೇಕು. ಕಡಮೆ ಶ್ರಮಕ್ಕೆ ಅಧಿಕ ಫಲವೆಂಬುದು ಜೀವನಸೂತ್ರವಾಗಿ ಬಿಟ್ಟಿದೆ.

ಗ್ರಂಥಕರ್ತರಿಗೆ ಶೇಕಡ ಹತ್ತು ಭಾಗ ಸಂಭಾವನೆಯನ್ನು ಕೊಡುವುದಕ್ಕೂ ಪ್ರಕಾಶಕರು ಹಿಂಜರಿಯುತ್ತಾರೆ. ಮಾರಾಟಗಾರರಿಗೆ ಮಾತ್ರ ಶೇಕಡ ನಲವತ್ತು ಭಾಗವನ್ನು ಕೊಡುವುದಕ್ಕೆ ಅವರು ಸಿದ್ಧರಾಗಿರುತ್ತಾರೆ.

ಪೂರ್ವೇ ವಯಸಿ ತತ್ ಕುರ್ಯಾತ್
ಯೇನ ವೃದ್ಧಃ ಸುಖಂ ವಸೇತ್ ।
ಯಾವಜ್ಜೀವೇನ ತತ್ ಕುರ್ಯಾತ್
ಯೇನ ಪ್ರೇತ್ಯ ಸುಖಂ ವಸೇತ್ ॥ ॥ ೬೨ ॥

— ಮಹಾಭಾರತ, ಉದ್ಯೋಗಪರ್ವ ೩೫-೬೮

"ವೃದ್ಧನಾದ ಮೇಲೆ ಸುಖವಾಗಿರಲು ಯಾವುದು ಅಪೇಕ್ಷಿತವೋ ಅದನ್ನು ಪೂರ್ವವಯಸ್ಸಿನಲ್ಲಿಯೇ ಮಾಡಿ ಮುಗಿಸಬೇಕು. ಸತ್ತ ಮೇಲೆ ಜನ್ಮಾಂತರದಲ್ಲಿ ಯಾವುದರಿಂದ ಸುಖವಾಗುವುದೋ ಅದನ್ನು ಈ ಜನ್ಮಪೂರ್ತಿಯಾಗಿ ಮಾಡುತ್ತಿರಬೇಕು."

ನಾವು ಮಾಡುವ ಪ್ರತಿಯೊಂದು ಕೆಲಸಕ್ಕೂ ಕಾಲದ ಕ್ಲ್ಪಪ್ತಿಯುಂಟು. ಕಾಲದ ನಿಯಮಕ್ಕೆ ಒಳಪಟ್ಟಾಗ ಮಾತ್ರ ಅದು ವ್ಯವಸ್ಥಿತವೂ ಬಲವತ್ತರವೂ ಆಗುತ್ತದೆ. ಬೆಳಗ್ಗೆ, ಮಧ್ಯಾಹ್ನ, ಸಂಜೆ, ರಾತ್ರಿ–ಎಂಬುದೂ ಸಹ ಸ್ಥೂಲವಾದ ಕಾಲವಿಭಾಗ. ಬೆಳಗ್ಗೆ ವಿದ್ಯಾರ್ಜನೆ, ಹಗಲು ದುಡಿತ, ರಾತ್ರಿ ವಿಶ್ರಾಂತಿ – ಎಂಬುದು ಪ್ರಕೃತಿನಿಯಮ. ಇದನ್ನು ವ್ಯತ್ಯಾಸಗೊಳಿಸಿದರೆ ಎಲ್ಲವೂ ಅವ್ಯವಸ್ಥಿತವಾಗುವುದಲ್ಲದೆ ಯಾವುದೂ ಉದ್ದಿಷ್ಟಫಲವನ್ನು ಸರಿಯಾಗಿ ನೀಡದು. ಹೀಗೆಯೇ ಬಾಲ್ಯದಲ್ಲಿ ವಿದ್ಯಾಭ್ಯಾಸ, ಅನಂತರ ದುಡಿತದಿಂದ ಧನಾರ್ಜನೆ – ಇವು ಕ್ರಮಬದ್ಧವಾಗಿ ನಡೆದರೆ ಮುಪ್ಪಿನಲ್ಲಿ ವಿಶ್ರಾಂತಿಸುಖ ಲಭ್ಯ. ಅಲ್ಲದೆ ಮುಂದೆ ತಾನು ಪಶ್ಚಾತ್ತಾಪಪಡಬೇಕಾದ ಯಾವ ಕಾರ್ಯವನ್ನೂ ಯೌವನದಲ್ಲಿ ಆಚರಿಸದಿದ್ದರೆ ಮಾತ್ರ ಮುಪ್ಪಿನಲ್ಲಿ ಶಾಂತಿ ದೊರೆತೀತು. ಮತ್ತು ತಾನು ವ್ಯರ್ಥವಾಗಿ ಕಾಲವನ್ನು ಕಳೆಯಲಿಲ್ಲ, ತನ್ನ ಕರ್ತವ್ಯವನ್ನು ಪೂರ್ಣವಾಗಿ ನೆರವೇರಿಸಿದ್ದೇನೆ — ಎಂಬ ಆತ್ಮತೃಪ್ತಿಯೂ ಶಾಂತಿಗೆ ಕಾರಣವಾಗುತ್ತದೆ. ಪುಣ್ಯಗ್ರಂಥಾವಲೋಕನ, ಭಗವಂತನ ಪುಣ್ಯನಾಮಸ್ಮರಣೆ—ಇವು ಮುಪ್ಪಿನಲ್ಲಿ ತಾರಕಗಳು.

ಶ್ರೀ ಶಂಕರಾಚಾರ್ಯರು ಭಿಕ್ಷಾಟನೆಗೆ ಹೋಗಿದ್ದಾಗ ಒಬ್ಬ ಮುದುಕ ವ್ಯಾಕರಣವನ್ನು ಅಭ್ಯಾಸ ಮಾಡುತ್ತಿದ್ದನಂತೆ. 'ಡುಕುಞ್ ಕರಣೇ' ಎಂದು

ಗಟ್ಟಿಯಾಗಿ, ಅದೂ ತಪ್ಪಾಗಿ ಉರುಹಾಕುತ್ತಿದ್ದ. ಅವನ ಅವಸ್ಥೆಯನ್ನು ಕಂಡು ಆಚಾರ್ಯರಿಗೆ ಮರುಕವಾಯಿತು. 'ಭಜ ಗೋವಿಂದಂ ಭಜ ಗೋವಿಂದಂ, ಗೋವಿಂದಂ ಭಜ ಮೂಢಮತೇ' ಎಂದು ಬುದ್ಧಿವಾದ ಹೇಳಿದರು. ಮರಣಕಾಲ ಬಂದಾಗ 'ನ ಹಿ ನ ಹಿ ರಕ್ಷತಿ ಡುಕುರುಞ್ ಕರಣೇ' ಎಂದು ಎಚ್ಚರಿಸಿದರು. ಅದರ ತಾತ್ಪರ್ಯವಿಷ್ಟೆ : ವ್ಯಾಕರಣವನ್ನಾಗಲಿ, ಇನ್ನೊಂದು ಶಾಸ್ತ್ರವನ್ನಾಗಲಿ ಕಲಿಯುವ ಕಾಲ ನಿನಗೆ ಕಳೆದುಹೋಯಿತು. ಈಗ ನಿನಗೆ ಅದರಿಂದೇನೂ ಪ್ರಯೋಜನವಾಗದು. ಮರಣಕಾಲ ಸಮೀಪಿಸಿದೆ. ವ್ಯಾಕರಣಶಾಸ್ತ್ರ ಕಾಪಾಡುತ್ತದೆಯೆ ? ದೇವರ ಸ್ಮರಣೆ ಮಾಡುತ್ತ ಶಾಂತವಾಗಿರು — ಎಂದು.

ಈ ಬುದ್ಧಿವಾದ ಇಂದು ಹಲವರಿಗೆ ಹಿಡಿಸುವುದಿಲ್ಲ. ರಾಜಕಾರಣಿಗಳಿಗಂತೂ ಇದು ಬಹುದೂರ. ನಾವು ದೇವದೂತರೆಂದೂ ರಾಜಕಾರಣದಲ್ಲಿ ತೊಡಗಿ ದೇಶವನ್ನು ಉದ್ಧಾರ ಮಾಡುತ್ತಿದ್ದೇವೆಂದೂ ಇವರು ತಿಳಿದುಕೊಂಡಿದ್ದಾರೆ.

ಉದ್ಧರಿಸುವೆನು ಜಗವನೆಂಬ ಹೇ ಸಖನೆ ನಿ–
ನ್ನುದ್ಧಾರವೆಷ್ಟಾಯ್ತೊ–ಮಂಕುತಿಮ್ಮ

ಅನಂತಪಾರಂ ಕಿಲ ಶಬ್ದಶಾಸ್ತ್ರಂ
ಸ್ವಲ್ಪಂ ತಥಾಯುರ್ಬಹವಶ್ಚ ವಿಘ್ನಾಃ ।
ಸಾರಂ ತತೋ ಗ್ರಾಹ್ಯಮಪಾಸ್ಯ ಫಲ್ಗು
ಹಂಸೈರ್ಯಥಾ ಕ್ಷೀರಮಿವಾಂಬುಮಧ್ಯಾತ್ ॥ ॥ ೬೩ ॥

— ಪಂಚತಂತ್ರ

"ಶಬ್ದಮಯವಾದ ಶಾಸ್ತ್ರಕ್ಕೆ ಕೊನೆ ಇಲ್ಲ. ನಮ್ಮ ಆಯುಸ್ಸಾದರೋ ಸ್ವಲ್ಪ. ವಿಘ್ನಗಳೂ ಬಹಳ. ಆದ್ದರಿಂದ ಅಸಾರವಾದ್ದನ್ನು ತ್ಯಜಿಸಿ, ಹಂಸವು ನೀರನ್ನು ಬೇರ್ಪಡಿಸಿ ಹಾಲನ್ನು ಕುಡಿಯುವಂತೆ, ಸಾರವಾದ್ದನ್ನು ಸ್ವೀಕರಿಸಬೇಕು."

'ಹಂಸಕ್ಷೀರನ್ಯಾಯ' ಎಂಬುದು ಪ್ರಸಿದ್ಧವಾದ ನ್ಯಾಯ. ಹಾಲನ್ನೂ ನೀರನ್ನೂ ಸೇರಿಸಿಟ್ಟರೆ, ನೀರನ್ನು ಬೇರ್ಪಡಿಸಿ ಹಾಲನ್ನು ಮಾತ್ರ ಹಂಸವು ಕುಡಿಯುವುದಂತೆ. ಹಾಗೆ, ಒಂದು ಗ್ರಂಥದಲ್ಲಿ ದೋಷಗಳಿದ್ದ ಅವನ್ನು ಗಣಿಸದೆ, ಗುಣಗಳನ್ನು ಮಾತ್ರ ಗ್ರಹಿಸಿ ಸಂತೋಷಪಡಬೇಕು – ಎಂದು ನಿವೇದಿಸುವಾಗ ಈ ನ್ಯಾಯವನ್ನು ಬಳಸುತ್ತಾರೆ.

ಯಾವನೂ ಸಕಲ ಶಾಸ್ತ್ರಗಳಲ್ಲಿಯೂ ಪಾರಂಗತನಾಗಿ ಸರ್ವಜ್ಞ ನಾಗಲಾರ. ಒಂದು ಜನ್ಮದಲ್ಲಿ ಒಂದೇ ವಿದ್ಯೆ ಎಂದು ಪ್ರಾಚೀನರ ಹೇಳಿಕೆ ಇದೆ. ಆದರೆ ಎಲ್ಲ ಬಗೆಯ ತಿಳಿವಳಿಕೆಯೂ ಮನುಷ್ಯನಿಗೆ ಬೇಕಾಗುತ್ತದೆ. ಲೌಕಿಕವೂ ಬೇಕು, ಪಾರಮಾರ್ಥಿಕವೂ ಬೇಕು. ಒಂದು ಲೌಕಿಕದಲ್ಲಿಯೇ ನೂರಾರು ಬಗೆಯ ಶಾಸ್ತ್ರಗಳುಂಟು. ಯಾವುದನ್ನು ಕಲಿಯಬೇಕು, ಯಾವುದನ್ನು ಬಿಡಬೇಕೆಂಬ ಪ್ರಶ್ನೆ ಎದುರಾದಾಗ 'ಸಾರವಾದ್ದನ್ನು ಗ್ರಹಿಸು' ಎನ್ನುತ್ತದೆ ಈ ನೀತಿ. ಒಂದೊಂದು ಬಗೆಯ ವಿಜ್ಞಾನದಲ್ಲಿ ಒಬ್ಬೊಬ್ಬನ ಜೀವನಕ್ಕೆ ಬೇಕಾಗತಕ್ಕದ್ದು ಒಂದೊಂದು ನಮೂನೆಯದು. ಅದರಲ್ಲಿ ಒಂದರ ತಿಳಿವಳಿಕೆ ಆಳವಾಗಿದ್ದು, ಉಳಿದದ್ದರ ಜ್ಞಾನ ಸಾಮಾನ್ಯವಾಗಿದ್ದರೂ ಸಾಕಾಗುತ್ತದೆ. ಈ ಸಾಮಾನ್ಯಜ್ಞಾನ ಉಂಟಲ್ಲ, ಅದೇ ಸಾರಭೂತವಾದ ವಿಷಯದ ಜ್ಞಾನ. ರಾಶಿರಾಶಿ ಪುಸ್ತಕಗಳೆಲ್ಲವನ್ನೂ ಓದಲು ಸಾಧ್ಯವಿಲ್ಲ. ತನ್ನ ಅಭಿರುಚಿಗೆ ತಕ್ಕದ್ದನ್ನು ಓದುಗನು ಆರಿಸಿಕೊಳ್ಳುತ್ತಾನೆ. ಮುಖ್ಯಾಂಶ ಗಳನ್ನೋದಿ ಉಳಿದದ್ದನ್ನು ಕೈಬಿಡುವುದೇ ಲೇಸು. ಬೇರೆ ಕೆಲಸವಿಲ್ಲದವನೂ, ಬೇಸರವಿಲ್ಲದವನೂ ಪೂರ್ತಿಯಾಗಿ ಎಲ್ಲವನ್ನೂ ಓದಿಯಾನು.

ಹಂಸಕ್ಷೀರನ್ಯಾಯವು ವ್ಯಕ್ತಿಗಳಿಗೆ, ಅವರ ಚಾರಿತ್ರ್ಯಕ್ಕೆ, ಹಾಗೂ ಲೋಕಪರಿಸ್ಥಿತಿಗೆ ಸಹ ಸಂಬಂಧಿಸುತ್ತದೆ. ಮಾನವನೇ ನಿರ್ಮಿಸಿಕೊಂಡ ಸರಕಾರ, ಸಮಾಜ, ಸಂಘ–ಸಂಸ್ಥೆಗಳಲ್ಲಿಯೂ ಗುಣದೋಷಗಳೆರಡೂ ಇರುವುದು ಸಹಜವೇ. ಅವುಗಳಲ್ಲಿರುವ ಗುಣಗಳನ್ನು ಕಂಡು ಮೆಚ್ಚುವುದೇ ಸಾರಗ್ರಾಹಿತೆ. ಇದೊಂದು ಅಮೂಲ್ಯವಾದ ಗುಣಸಂಪತ್ತು. ವಾಲ್ಮೀಕಿ ಮುನಿಗಳು ಶ್ರೀರಾಮನನ್ನು 'ಸಾರಗ್ರಾಹಿ' ಎಂದು ಪ್ರಶಂಸೆ ಮಾಡಿದ್ದಾರೆ.

ನ ಚಂದ್ರೇಣ ನ ಚೌಷಧ್ಯಾ ನ ಸೂರ್ಯೇಣ ನ ವಹ್ನಿನಾ ।
ಸಾಮ್ನೈವ ವಿಲಯಂ ಯಾತಿ ವಿದ್ವೇಷಪ್ರಭವಂ ತಮಃ ॥ ॥ ೭೪ ॥

– ಪಂಚತಂತ್ರ, ಮಿತ್ರಭೇದ

"ಹಗೆತನದಿಂದಾದ ಕತ್ತಲೆ ಚಂದ್ರನಿಂದಾಗಲಿ, ಮೂಲಿಕೆಯಿಂದಾಗಲಿ ಹೋಗುವುದಿಲ್ಲ. ಅದು ಸೂರ್ಯನಿಂದಲೂ ಬೆಂಕಿಯಿಂದಲೂ ಸಹ ನಾಶವಾಗುವುದಿಲ್ಲ. ಆ ಕತ್ತಲೆ ಸಾಮದಿಂದಲೇ ಹೋಗತಕ್ಕದ್ದು."

ನಾವು ಕಾಣುವ ಕತ್ತಲೆಗೆ ಚಂದ್ರಾದಿಗಳಿಂದ ಶಮನ ಉಂಟು. ಮೂಲಿಕೆ ಎಂದರೆ ಬೆಳಕು ಬೀರುವ ಒಂದು ಬಗೆಯ ವನಸ್ಪತಿ: ಜ್ಯೋತಿರ್ಲತೆ ಎನ್ನುತ್ತಾರೆ. ಅದು ರಾತ್ರಿ ಬೆಳಕು ಬೀರುತ್ತದೆಯೆಂದೂ ಹಿಮಾಲಯದಲ್ಲಿ ವಿದ್ಯಾಧರ ಸ್ತ್ರೀಯರು ಆ ಬೆಳಕಿನಲ್ಲಿ ಪ್ರೇಮಪತ್ರಗಳನ್ನು ಬರೆಯುತ್ತಿದ್ದ ರೆಂದೂ ಕುಮಾರಸಂಭವದಲ್ಲಿ ಕಾಳಿದಾಸ ವರ್ಣಿಸಿದ್ದಾನೆ.

ವೈರದಿಂದ ಹುಟ್ಟುವ ಕಹಿ ಅನುಭವವೇ ಕತ್ತಲೆ. ಈ ಕಹಿ ಅಂತರಂಗಕ್ಕೆ ಗೋಚರ. ಇದು ಹುಟ್ಟಿತೆಂದರೆ ಮನುಷ್ಯನ ವಿವೇಕ ಹಿಮ್ಮೆಟ್ಟುತ್ತದೆ. ಇದು ಕರ್ತವ್ಯ, ಇದು ಅಕರ್ತವ್ಯ – ಎಂಬ ವಿವೇಚನೆ ಅಳಿಸಿಹೋಗುತ್ತದೆ. ಸೇಡು ತೀರಿಸಬೇಕೆಂಬ ಛಲ ಹುಟ್ಟುತ್ತದೆ. ಒಂದು ತಪ್ಪಿನಿಂದ ಇನ್ನೊಂದು ತಪ್ಪು. ಸರಪಳಿಯಂತೆ ಇದು ನಮ್ಮನ್ನೇ ಬಂಧಿಸಿ ಅನರ್ಥಕ್ಕೆ ಈಡುಮಾಡುತ್ತದೆ.

ಇದಕ್ಕೆ ಪರಿಹಾರವೇನು ? ಕಾರ್ಯಸಾಧನೆಗೆ ಸಾಮ, ದಾನ, ಭೇದ, ದಂಡ ಎಂಬ ನಾಲ್ಕು ಉಪಾಯಗಳುಂಟು. ದಂಡೋಪಾಯ ಪ್ರಬಲವಾದರೂ ಅದು ಎಲ್ಲೆಡೆಯೂ ನಡೆಯತಕ್ಕದ್ದಲ್ಲ. ಒಬ್ಬ ವ್ಯಕ್ತಿ ಇನ್ನೊಬ್ಬನ ಮೇಲೆ ದಂಡೋಪಾಯವನ್ನು ಕೈಗೊಳ್ಳುವುದು ಕಾನೂನುಬಾಹಿರ. ಸರಕಾರವೇ ಇನ್ನೊಂದು ರಾಷ್ಟ್ರದ ಮೇಲೆ ದಂಡವನ್ನು ಪ್ರಯೋಗಿಸಿದರೂ ಇದರ ಕಿಡಿ ಪೂರ್ತಿ ಆರುವುದೇ ಇಲ್ಲ. ಯುದ್ಧದಲ್ಲಿಯೇ ಮುಂದಿನ ಯುದ್ಧದ ಬೀಜ ಅಡಗಿರುತ್ತದೆ.

ಪ್ರಿಯವಾಕ್ಯಪ್ರದಾನೇನ ಸರ್ವೇ ತುಷ್ಯಂತಿ ಜಂತವಃ |
ತಸ್ಮಾತ್ತದೇವ ವಕ್ತವ್ಯಂ ವಚನೇ ಕಾ ದರಿದ್ರತಾ ||

– ಎಂಬ ನುಡಿ ಅರ್ಥವತ್ತಾದುದು. ಹಣವನ್ನು ಕೊಡಲು ದಾರಿದ್ರ್ಯವಿದ್ದರೂ ಒಳ್ಳೆಯ ಮಾತಿಗೆ ದಾರಿದ್ರ್ಯವಿಲ್ಲವಷ್ಟೆ ! ಸಾಮ, ದಾನ, ಭೇದಗಳಿಂದ ಕಾರ್ಯವು ಸಾಧ್ಯವಾಗದಿದ್ದರೆ ದಂಡವನ್ನು ಪ್ರಯೋಗಿಸಬೇಕೆಂದು ನೀತಿಯುಂಟು. ದಂಡೋಪಾಯವೂ ಕಾರ್ಯಕಾರಿಯಾಗದಿದ್ದಾಗ ಏನು ಮಾಡಬೇಕು ? ಮತ್ತೆ ಸಾಮಕ್ಕೇ ಹಿಂದಿರುಗಬೇಕು !

ಪಂಜಾಬು ಸಮಸ್ಯೆಯಿಂದಾದ ಕತ್ತಲೆಯೇ ನಿದರ್ಶನ. ಹುಟ್ಟಬಾರದ ಕತ್ತಲೆ ಹೇಗೋ ಹುಟ್ಟಿತು. ಇದು ಹೊಗೆಯಿಂದಾದ ಕತ್ತಲೆ. ಬುಡದಲ್ಲಿ ಬೆಂಕಿ ಇದೆ. ಇದನ್ನು ಪೂರ್ಣ ತೊಡೆಯದಿದ್ದಲ್ಲಿ ಇಡೀ ಜನಾಂಗಕ್ಕೇ ಅಪಾಯ ಉಂಟು. ಬಿದಿರಿನಲ್ಲಿ ಹುಟ್ಟಿದ ಬೆಂಕಿ ಬಿದಿರಿಗೇ ಕಂಟಕವಾಗುವ ಪರಿಸ್ಥಿತಿ ಇದು. ಇದಕ್ಕೆ ಪರಿಹಾರ ಸಾಮೋಪಾಯ ಒಂದೇ. ಸಾಮದಿಂದಾಗುವ ಶಾಂತಿ ಸ್ಥಿರವಾದದ್ದು. ಉಳಿದ ಉಪಾಯಗಳ ಫಲ ತಾತ್ಕಾಲಿಕ.

ತತ್ತದುತ್ಪ್ರೇಕ್ಷಮಾಣಾನಾಂ ಪುರಾಣೈರಾಗಮೈರ್ವಿನಾ |
ಅನುಪಾಸಿತವೃದ್ಧಾನಾಂ ವಿದ್ಯಾ ನಾತಿಪ್ರಸೀದತಿ || || ೭೫ ||

– ವಾಕ್ಯಪದೀಯ, ೨-೪೯೪

"ಪ್ರಾಚೀನವಾದ ವೇದಶಾಸ್ತ್ರಗಳನ್ನು ಅಭ್ಯಾಸ ಮಾಡದೆ, ಹಿರಿಯರನ್ನು ಸೇವಿಸದೆ ಇರತಕ್ಕವರು ತೋರಿದಂತೆ ಊಹಿಸಲು ಹೊರಟರೆ, ವಿದ್ಯೆ ಒಲಿಯುವುದಿಲ್ಲ."

'ಪುಸ್ತಕೇಷು ಚ ಯಾ ವಿದ್ಯಾ' ಎಂದು ಹಿಂದಿನವರು ಪುಸ್ತಕವಿದ್ಯೆಯನ್ನು ಹಳಿದಿದ್ದಾರೆ. ಪ್ರತಿಯೊಂದು ವಿದ್ಯೆಯಲ್ಲಿಯೂ ಕೆಲವು ರಹಸ್ಯಸ್ಥಾನಗಳಿರುತ್ತವೆ. ಅವನ್ನು ಗುರುಮುಖದಿಂದರಿತು ಸ್ವತಃ ಪ್ರಯೋಗದಿಂದ

ದೃಢಪಡಿಸಿಕೊಳ್ಳಬೇಕಾಗುತ್ತದೆ. ವೇದ ಶಾಸ್ತ್ರ ಪುರಾಣಗಳ ವಿಷಯದಲ್ಲಂತೂ ಈ ಮಾತು ಪೂರ್ಣ ಸತ್ಯ. ಈಗಲಾದರೋ ಪುಸ್ತಕಗಳ ಪ್ರಪಂಚವೇ ಇದೆ. ಅರ್ಥವಾಗದ ಶಬ್ದಕ್ಕೆ ಅರ್ಥ ಹೇಳಲು ಶಬ್ದಾರ್ಥಕೋಶಗಳಿವೆ. ಅವನ್ನು ನೋಡಿ ತೋರಿದಂತೆ ಅರ್ಥ ಹೇಳುವ ಪ್ರವೃತ್ತಿ ಕಾಣಿಸಿಕೊಂಡಿದೆ. ಹಾಗೆ ಹೇಳಿದಾಗ ಪೂರ್ವಾಪರ ವಿರೋಧಗಳು ಬರುತ್ತವೆಂಬುದನ್ನೂ ಈ ಜನರು ಗಮನಿಸುವುದೇ ಇಲ್ಲ! 'ಅಪವರ್ಗೇ ತೃತೀಯಾ' ಎಂಬ ಒಂದು ಸೂತ್ರ ಉಂಟು. ಇದರ ಅರ್ಥವನ್ನು ಒಬ್ಬ ಬುದ್ಧಿವಂತರು ಹೀಗೆ ಹೇಳಿದರು: ಅಪವರ್ಗವೆಂದರೆ ಮೋಕ್ಷ, ತೃತೀಯಾ ಎಂದರೆ ತೃತೀಯಾ ಪ್ರಕೃತಿ = ನಪುಂಸಕ. ಮೋಕ್ಷಕ್ಕೆ ನಪುಂಸಕನು ಅಧಿಕಾರಿ – ಎಂದು ತೀರ್ಪುಕೊಟ್ಟರು! (ಇದಾದರೋ ಪಾಣಿನಿಯ ವ್ಯಾಕರಣಸೂತ್ರ. ತೃತೀಯಾ ವಿಭಕ್ತಿಯನ್ನು ಈ ಸೂತ್ರ ವಿಧಿಸುತ್ತದೆ.)

'ಯನ್ಮೇ ಮಾತಾ ಲುಲುಭೇ' ಎಂಬ ಮಂತ್ರ ಅಪರಕರ್ಮದಲ್ಲಿ ಬರುತ್ತದೆ. ತನ್ನ ತಾಯಿ ಅನ್ಯಪುರುಷನನ್ನು ಕಾಮಿಸಿರಬಹುದೆಂಬ ಸೂಚನೆ ಅದರಲ್ಲುಂಟು. 'ಎಲ್ಲಾದರೂ ಉಂಟೆ ? ನನ್ನ ತಾಯಿಯ ವಿಷಯದಲ್ಲಿ ಸಂದೇಹವೆ ?' – ಎಂದು ಒಬ್ಬ ಮಹನೀಯರು ಇದನ್ನು ಉಚ್ಚರಿಸಲು ಒಪ್ಪಲಿಲ್ಲ. ಹೀಗೆ ಹೇಳುವುದೆಂದರೆ ಹೆಂಗಸರ ಮೇಲೆ ಗಂಡಸರ ದಬ್ಬಾಳಿಕೆ ಯೆಂದು ಅವರ ಹೇಳಿಕೆ. ಆದರೆ ಪ್ರತಿದಿನ ಗಂಡಸು 'ಪದ್ಭ್ಯಾಮುದರೇಣ ಶಿಶ್ನಾ' ಎಂದು ಎರಡು ಹೊತ್ತೂ ಹೇಳಿ ತನ್ನಲ್ಲಿಯೇ ತಪ್ಪನ್ನು ಹೊರಿಸಿ ಕೊಳ್ಳುತ್ತಾನಲ್ಲ ? ಈ ವಾಕ್ಯವನ್ನು ಅಗಸ್ತ್ಯರೂ ಹೇಳುತ್ತಿದ್ದರು. ವಸಿಷ್ಠರೂ ಹೇಳುತ್ತಿದ್ದರು ! ಶ್ರೀರಾಮನು ವಾಲಿಯನ್ನು ಕೊಂದದ್ದು ಅಧರ್ಮವೆಂದು ಈ ಜನರ ಹೇಳಿಕೆ. 'ರಾಮೋ ಧರ್ಮಭೃತಾಂ ವರಃ' ಎಂದು ವಾಲ್ಮೀಕಿಗಳೇ ಮತ್ತೆ ಮತ್ತೆ ಹೇಳಿದ್ದಾರಲ್ಲವೆ? ''ಶುಚಿದೇಶದಲ್ಲಿ ದರ್ಭಪವಿತ್ರಪಾಣಿಯಾಗಿ ಪೂರ್ವಾಭಿಮುಖನಾಗಿ ಕುಳಿತು'' ಪಾಣಿನಿಯು ವ್ಯಾಕರಣವನ್ನು ಬರೆದನೆಂದು ಪತಂಜಲಿ ಹೇಳಿದ್ದಾನೆ. ಒಂದು ವ್ಯಾಕರಣದ ವಿಷಯದಲ್ಲಿಯೇ ಇಂತಹ ನಿಷ್ಠೆ ಅವರಿಗಿತ್ತು. ಈಗಲಾದರೋ ಚಪ್ಪಲಿಯನ್ನು ಮೆಟ್ಟಿ ಸಿಗರೇಟ್ ಎಳೆಯುತ್ತ ಬಾಟಲಿಯನ್ನು ಹೀರುತ್ತ 'ಇದು ಧರ್ಮ, ಇದು ಅಧರ್ಮ'

ಎಂದು ಗೀಚುತ್ತ 'ಆ ಋಷಿ ಅಯೋಗ್ಯ, ಈ ಆಚಾರ್ಯ ಗೂಂಡಾ' ಎನ್ನುವ ಬುದ್ಧಿಜೀವಿಗಳು ಹುಟ್ಟಿಕೊಂಡಿದ್ದಾರೆ.

ವಿತ್ತಮೇವ ಕಲೌ ನೄಣಾಂ ಜನ್ಮಾಚಾರಕುಲೋದಯಃ |
ಧರ್ಮನ್ಯಾಯವ್ಯವಸ್ಥಾಯಾಂ ಕಾರಣಂ ಬಲಮೇವ ಹಿ || || ೬೬ ||

— ಭಾಗವತ, ೧೨-೨-೨

"ಕಲಿಯುಗದಲ್ಲಿ ಹಣವೇ ಮನುಷ್ಯರಿಗೆ ಜಾತಿ, ಆಚಾರ, ಗುಣಗಳನ್ನು ಗೊತ್ತುಮಾಡುವ ಸಾಧನ. ಇದು ಧರ್ಮ, ಇದು ನ್ಯಾಯ — ಎಂದು ವ್ಯವಸ್ಥೆಮಾಡಲು ಬಲವೇ ಕಾರಣ."

ಒಂದು ಕಾಲದಲ್ಲಿ ನಮ್ಮ ಸಮಾಜವು ಚಾತುರ್ವರ್ಣ್ಯದ ವ್ಯವಸ್ಥೆಯನ್ನು ಒಪ್ಪಿಕೊಂಡಿತ್ತು. ವಿದ್ಯೆ, ತಪಸ್ಸು, ಲೋಕೋಪಕಾರ ಬುದ್ಧಿ, ಉದ್ಯೋಗ, ವ್ಯವಹಾರ—ಮುಂತಾದವನ್ನವಲಂಬಿಸಿ ನಾಲ್ಕು ಗುಂಪಾದ ಸಮಾಜ, ವೃತ್ತಿಗೆ ಅನುಸಾರವಾಗಿ ನಾಲ್ಕು ಜಾತಿಗಳೆಂದು ವ್ಯವಸ್ಥೆ ಮಾಡಿಕೊಂಡಿತ್ತು. ತಮ್ಮತಮ್ಮ ವೃತ್ತಿಗಳಲ್ಲಿ ದಕ್ಷತೆ, ಕೌಶಲ, ಆಸಕ್ತಿಗಳು ಬೆಳೆಯಬೇಕಾದರೆ ತಂದೆತಾಯಿಗಳಿಂದ ಒದಗುವ ಸಂಸ್ಕಾರ ಅತ್ಯಾವಶ್ಯಕ — ಎಂಬ ನಂಬಿಕೆ ಇದಕ್ಕೆ ಮೂಲ.

ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ—ಈ ನಾಲ್ಕು ವರ್ಣಗಳಲ್ಲಿ ಪ್ರತಿಯೊಂದಕ್ಕೂ ವಿಶಿಷ್ಟವಾದ ಜನ್ಮ, ಆಚಾರ, ಗುಣಗಳ ನಿಯಮ ಉಂಟು. ಕಾಲಕ್ರಮದಲ್ಲಿ ಆಚಾರ, ಗುಣಗಳ ನಿಯಮ ತಪ್ಪಿಹೋಗಿ ಜನ್ಮವೊಂದೇ ನಿರ್ಣಾಯಕವಾಯಿತು. ಉದಾಹರಣೆಗೆ – ವಿದ್ಯೆ (ವೈದಿಕ ವಿದ್ಯೆ), ತಪಸ್ಸು, ಜನ್ಮಗಳು ಬ್ರಾಹ್ಮಣ್ಯದ ಲಕ್ಷಣವಾಗಿತ್ತು. ವಿದ್ಯೆ, ತಪಸ್ಸುಗಳಿಲ್ಲದವನು 'ಜಾತಿ ಬ್ರಾಹ್ಮಣ' ಎಂಬ ನಿಂದೆಗೆ ಗುರಿಯಾಗಿದ್ದ.

ಮೇಲ್ಕಂಡ ಮೂರರಲ್ಲಿ ಯಾವುದಕ್ಕೂ ಈಗ ಕಾಸಿನ ಬೆಲೆ ಉಳಿದಿಲ್ಲ. ಈಗ ಸಮಾಜದಲ್ಲಿ ಸ್ಥಾನಮಾನಗಳನ್ನೂ ಭಾಗ್ಯ –ಬವಣೆಗಳನ್ನೂ ನಿರ್ಣಯಿಸ

ತಕ್ಕದ್ದು ಹಣ ಒಂದೇ. ಈಗ ಇರುವುದು ಶ್ರೀಮಂತ, ಬಡವ – ಎಂದು ಎರಡೇ ಜಾತಿ. ಇದು ಶಾಶ್ವತವಾದ ಜಾತಿವ್ಯವಸ್ಥೆ. ನಾವು ಭಾಗವತವನ್ನು ನಂಬುವುದಾದರೆ, ಯಾವ ರಾಜಕೀಯವೂ ಇದನ್ನು ಮಾರ್ಪಡಿಸದು !

ಇದು ಧರ್ಮ, ಇದು ನ್ಯಾಯ—ಎಂಬುದನ್ನು ಹಿಂದೆ ಜ್ಞಾನಿಗಳೂ ವಯೋವೃದ್ಧರೂ ನಿರ್ಣಯಿಸುತ್ತಿದ್ದರು. ಅವರ ಸಲಹೆಯಂತೆ ರಾಜ ನಡೆಯುತ್ತಿದ್ದ. ಕಲಿಯುಗದಲ್ಲಾದರೋ ನ್ಯಾಯ—ಧರ್ಮಗಳನ್ನು ಸರಿಯಾಗಿ ಹೇಳತಕ್ಕವರೂ, ಪಾಲಿಸತಕ್ಕವರೂ ವಿರಳ. ಈಗ ಅವನ್ನು ಗೊತ್ತುಮಾಡ ತಕ್ಕದ್ದು ಸರ್ಕಾರವೂ ಅಲ್ಲ, ಮಠವೂ ಅಲ್ಲ, ನ್ಯಾಯಾಲಯವೂ ಅಲ್ಲ. ಬಲ ಒಂದೇ ಅದನ್ನು ಗೊತ್ತುಪಡಿಸುತ್ತದೆ. ಬಲವೆಂದರೆ ಯಾವುದು ? ಕೆಲವೆಡೆ ದೇಹಬಲವೇ ನ್ಯಾಯವನ್ನು ನಿರ್ಣಯಿಸುತ್ತದೆ ! ರಾಜಕೀಯ ಬಲ, ಅಧಿಕಾರ ಬಲ, ಸ್ಥಾನಬಲ, ಸಂಘಬಲ, ಧನಬಲ, ಕೂಗಾಟದ ಬಲ–ಎಂದು ಹಲವಾರು ಬಲಗಳುಂಟು. ಈ ಬಲವೇ ಧರ್ಮ–ನ್ಯಾಯಗಳನ್ನು ನಿರ್ಣಯಿಸಿಕೊಡುತ್ತದೆ.

**ಶಕ್ತಃ ಪರಜನೇ ದಾತಾ ಸ್ವಜನೇ ದುಃಖಜೀವಿನಿ |**
**ಮಧ್ವಾಪಾತೋ ವಿಷಾಸ್ವಾದಃ ಸ ಧರ್ಮಪ್ರತಿರೂಪಕಃ || || ೬೭ ||**

— ಮನುಸ್ಮೃತಿ, ೧೧-೯

"ತನ್ನವರು ಕಷ್ಟದಿಂದ ಜೀವಿಸುತ್ತಿರುವಾಗ, ಅವರನ್ನು ಸರಿಯಾಗಿ ಪಾಲಿಸಲು ಶಕ್ತನಾಗಿದ್ದರೂ ಉಪೇಕ್ಷಿಸಿ ಪರರಿಗೆ ಕೊಡತಕ್ಕವನಿರು ತ್ತಾನೆ. ಹಾಗೆ ಕೊಡುವುದು ಧರ್ಮವಾಗದು; ಅದು ಧರ್ಮದಂತೆ ಕಾಣುತ್ತದೆ ಮಾತ್ರ. ನೋಡಲು ಜೇನಿನಂತಿರುತ್ತದೆ : ಅದರ ರುಚಿ ಕಹಿಯೇ."

ದಾನ ಮಾಡುವುದು ಪ್ರಶಂಸನೀಯವಾದ ಧರ್ಮಕಾರ್ಯ ಹೌದು. ಅದಕ್ಕೆ ಪಾತ್ರಾಪಾತ್ರವಿವೇಚನೆ ಬೇಕು. ಪಾತ್ರನಿಗೆ ಕೊಡದೆ ಅಪಾತ್ರನಿಗೆ

ದಾನ ಮಾಡುವುದು ಧರ್ಮವಲ್ಲ. ಅದು ಹಣದ ಪೋಲು ಎನ್ನುತ್ತದೆ ವಿದುರನೀತಿ.

ಕರೆದಪಾತ್ರಂಗಿತ್ತು ಪಾತ್ರನ
ಪರಿಹರಿಸಲೀ ಎರಡರಿಂ ಸಂ-
ಹರಣವಹುದಾರ್ಜಿಸಿದ ಬಲುಧನವರಸ ಕೇಳೆಂದ ||

ದಾನವನ್ನು ಸ್ವೀಕರಿಸಲು ಹಲವಾರು ಪಾತ್ರಗಳಿದ್ದಾಗ ಪ್ರಥಮಾರ್ಹತೆ ಯಾರಿಗೆ ? 'ಸ್ವಜನ' ಎನ್ನುತ್ತದೆ ಮನುಸ್ಮೃತಿ. ತನ್ನ ಹೆಂಡತಿ ಮಕ್ಕಳು, ವೃದ್ಧರಾದ ತಾಯಿ ತಂದೆಗಳು, ತನ್ನನ್ನು ನಂಬಿಕೊಂಡಿರುವ ಅಶಕ್ತ ಬಂಧುವರ್ಗ, ಭೃತ್ಯರು — ಇವರೆಲ್ಲ ಸ್ವಜನರು. ಇವರು ಕಷ್ಟದಲ್ಲಿ ನರಳುತ್ತಿರುವಾಗ ಇವರನ್ನು ಉಪೇಕ್ಷಿಸಿ ಅನ್ಯರಿಗೆ ಕೊಟ್ಟು ಅವರನ್ನು ಪೋಷಿಸುವುದು ಅಧರ್ಮ. 'ಮನೆಗೆ ಮಾರಿ, ಪರರಿಗೆ ಉಪಕಾರಿ' ಎಂಬ ಗಾದೆಯೇ ಇದೆ. ಅರ್ಜುನನು ಯುದ್ಧರಂಗಕ್ಕೆ ಬಂದಾಗ ವೈರಿಗಳಾದ ಕೌರವರ ವಿಷಯದಲ್ಲಿಯೂ ಕಾರುಣ್ಯ ಹುಟ್ಟಿತು; ತನ್ನನ್ನು ನಂಬಿದವರಿಗೆ ಭಿಕ್ಷಾಪಾತ್ರೆಯನ್ನು ಕೊಡಲು ಸಿದ್ಧನಾದ. ಆಗ ಶ್ರೀಕೃಷ್ಣನು ಅರ್ಜುನನದು 'ಅಸ್ಥಾನ ಕಾರುಣ್ಯ'ವೆಂದು ಜರಿದು ಬುದ್ಧಿ ಹೇಳಿದ.

ಈ ನೀತಿಯು ವ್ಯಕ್ತಿಗೆ ಸಂಬಂಧಿಸಿದಂತೆ ರಾಷ್ಟ್ರಕ್ಕೂ ಅನ್ವಯಿಸುತ್ತದೆ. ನಾವು ಟಿಬೆಟ್ಟಿನವರನ್ನು ಕರೆದು ಆಶ್ರಯ ಕೊಡುತ್ತೇವೆ; ಬಾಂಗ್ಲಾದವರನ್ನು ಸೇರಿಸುತ್ತೇವೆ. ಶ್ರೀಲಂಕೆಯ ತಮಿಳರಿಗೆ ಇಲ್ಲಿ ನೆಲೆಯುಂಟು. ಅವರಿಗೆ ಕಾಲೊನಿಯನ್ನು ನಿರ್ಮಿಸಿ ಉಳಲು ಹೊಲವನ್ನು ಕೊಟ್ಟು ಇರಲು ಮನೆಯನ್ನು ಕಟ್ಟಿಸಿಕೊಡುತ್ತೇವೆ. ಈ ರಾಷ್ಟ್ರದಲ್ಲಿಯೇ ಹುಟ್ಟಿ ಬೆಳೆದ ಮಣ್ಣಿನಮಕ್ಕಳು ಮಣ್ಣಾಗಿಹೋದರೂ ಚಿಂತೆಯಿಲ್ಲ; ನಮಗೆ ಏಷಿಯಾಡ್ ಬೇಕು, ಟಿ.ವಿ. ಬೇಕು, ಗಗನಗಾಮಿಗಳಾಗಿ ವಿಮಾನದಲ್ಲಿಯೇ ಸಂಚರಿಸಬೇಕು, ಇಳಿದುಕೊಳ್ಳಲು ಪಂಚತಾರಾ ಹೋಟಲ್ಲುಗಳೇ ಬೇಕು. ನಾವು ಅಡ್ಡ ನೋಡುತ್ತೇವೆ, ಮೇಲೆ ನೋಡುತ್ತೇವೆ; ಕಾಲಿನ ಬುಡವನ್ನು ನೋಡಿ ಹೆಜ್ಜೆ ಇಡುವುದಿಲ್ಲ !

ಶೋಚಂತಿ ಜಾಮಯೋ ಯತ್ರ ವಿನಶ್ಯತ್ಯಾಶು ತತ್ಕುಲಮ್ ।
ನ ಶೋಚಂತಿ ತು ಯತ್ರೈತಾ ವರ್ಧತೇ ತದ್ಧಿ ಸರ್ವದಾ ॥ ॥ ೭೮ ॥

— ಮನುಸ್ಮೃತಿ, ೩-೫೭

"ಯಾವ ಕುಟುಂಬದಲ್ಲಿ ಹೆಣ್ಣುಮಕ್ಕಳು ಕಷ್ಟಕ್ಕೆ ಸಿಕ್ಕಿ ಶೋಕಿಸುತ್ತಿರುವರೋ, ಆ ಕುಟುಂಬವು ಬಹುಬೇಗನೆ ನಾಶವಾಗುತ್ತದೆ. ಈ ಹೆಣ್ಣುಮಕ್ಕಳು ಶೋಕಿಸದೆ ಆನಂದದಲ್ಲಿದ್ದರೆ ಆ ಕುಟುಂಬವು ಯಾವಾಗಲೂ ಏಳಿಗೆಯನ್ನು ಪಡೆಯುತ್ತದೆ."

ಸ್ತ್ರೀಯರಿಂದಲೇ ಕುಟುಂಬ ನಡೆಯುತ್ತಿರುವುದು. ಸ್ತ್ರೀಯಿಲ್ಲದ ಮನೆ ಹಾಳುಬಿದ್ದ ದೇವಾಲಯದಂತೆ. ಮನೆಯಲ್ಲೊಬ್ಬ ಕುಟುಂಬಿನಿ ಇಲ್ಲದಿದ್ದರೆ– 'ಸೇವಿತಂ ಸರ್ವಸಂಪದ್ಭಿರಪಿ ತದ್ ಭವನಂ ವನಮ್' ಎಂದು ಕವಿಯೊಬ್ಬ ಉದ್ಗರಿಸಿದ್ದಾನೆ. "ಸರ್ವಸಂಪತ್ತುಗಳು ತುಂಬಿದ್ದರೂ ಅದು ಭವನವಲ್ಲ, ವನ."

ಮನುಸ್ಮೃತಿಕಾರನು ಮೇಲ್ಕಂಡ ಮಾತನ್ನು ಹೇಳುವಾಗ ಪುರುಷ ಪ್ರಧಾನವಾದ ಸಮಾಜವಿತ್ತೆಂಬುದು ಗಮನಾರ್ಹ. ಸಂಪಾದಿಸತಕ್ಕವನು ಗಂಡಸು. ಹೊಟ್ಟೆಯಪಾಡಿಗೆ ಅವನನ್ನೇ ನಂಬಿಕೊಂಡಿತ್ತು ಸಂಸಾರ. ಇಂತಹ ಪರಿಸ್ಥಿತಿಯಲ್ಲಿ 'ನ ಸ್ತ್ರೀ ಸ್ವಾತಂತ್ರ್ಯಮರ್ಹತಿ' ಎಂದು ಹೇಳಿದ, ಮನು. ಯಾವ ರಾಜನ ರಾಜ್ಯದಲ್ಲಿ ಪ್ರಜೆಗಳು ಕಷ್ಟದಿಂದ ನರಳುವರೋ ಆ ರಾಜ್ಯ ಕುಸಿದುಬೀಳುತ್ತದೆ ಎಂದು ನೀತಿಶಾಸ್ತ್ರ ಸಾರುತ್ತದೆ. ಅಂತೆಯೇ ಕುಟುಂಬದ ಮುಖ್ಯ ಪ್ರಜೆಯಾದ ನಾರಿಯು ಅಳಲುತ್ತಿದ್ದರೆ ಕುಟುಂಬವು ಮುರಿದು ಬೀಳುತ್ತದೆಯೆಂಬುದು ಅಚ್ಚರಿಯಲ್ಲ. ಕೌಸಲ್ಯೆಯ ಅಳಲಿನಿಂದ, ಅಂತಃಪುರ ಸ್ತ್ರೀಯರ ಗೋಳಾಟದಿಂದ ದಶರಥನ ಅರಮನೆ ಸ್ಮಶಾನಸದೃಶವಾಯಿತು; ದ್ರೌಪದಿಯ ಕಣ್ಣೀರಿನಿಂದ ಕೌರವಕುಲ ಬೆಂದುಹೋಯಿತು.

ಪ್ರಜಾಪ್ರಭುತ್ವಯುಗದಲ್ಲಿಯೂ ಪ್ರಜೆಯೇನೂ ಸರ್ವತಂತ್ರ ಸ್ವತಂತ್ರನಲ್ಲ, ಕಾನೂನುಗಳ ಸಂಕೋಲೆಯಲ್ಲಿ ಅವನು ಬಂಧಿತನೇ. ಕೇಂದ್ರ

ಸರ್ಕಾರದ ಸ್ವಾತಂತ್ರ್ಯ ರಾಜ್ಯಸರ್ಕಾರಗಳಿಗಿಲ್ಲ. ರಾಷ್ಟ್ರಪತಿಗೆ ಸಹ ಸರ್ವಸ್ವಾತಂತ್ರ್ಯವಿಲ್ಲ. ಒಂದಾನೊಂದು ಪರಿಮಿತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಸ್ವತಂತ್ರನೇ. ಸ್ವಾತಂತ್ರ್ಯದ ಪರಿಮಿತಿಯಲ್ಲಿ ಶಿಸ್ತು ನಿಂತಿದೆ. ಶಿಸ್ತಿನಿಂದ ರಾಜ್ಯ ನಿಂತಿದೆ.

ಸಂಪಾದಿಸಿ ತರುವ ಭಾರ ಗಂಡನದಾದರೆ, ವೆಚ್ಚ ಮಾಡುವ ಜವಾಬ್ದಾರಿ ಹೆಂಡತಿಯದು. ಸಂಸಾರವನ್ನು ಹೇಗೆ ತೂಗಿಸಿಕೊಂಡು ಹೋಗಬೇಕೆಂಬುದು ಅವಳಿಗೆ ಸೇರಿದ್ದು. 'ವ್ಯಯೇ ಚೈನಾಂ ನಿಯೋಜಯೇತ್' ಎನ್ನುತ್ತಾನೆ, ಮನು. ಹೀಗೆ ದಂಪತಿಗಳಿಗೆ ನಾನಾ ಬಗೆಯ ಜವಾಬ್ದಾರಿಗಳನ್ನು ಹಂಚಿ ವ್ಯವಸ್ಥೆ ಮಾಡುತ್ತದೆ ಧರ್ಮಶಾಸ್ತ್ರ. ವಿಪತ್ತುಗಳಿಂದ ಕುಟುಂಬವನ್ನು ರಕ್ಷಿಸುವ ಭಾರ ಗಂಡಸಿನದು, ಹೆಂಗಸಿನದಲ್ಲ. ಆತ್ಮರಕ್ಷಣೆಯನ್ನು ಮಾಡಿಕೊಳ್ಳಲೂ ಹೆಂಗಸು ಅಸಮರ್ಥಳು. ಸ್ತ್ರೀಯರ ವಿಷಯದಲ್ಲಿ ಅನುಕಂಪೆಯಿಂದ ಹೇಳಿದ ಮಾತು "ನ ಸ್ತ್ರೀ ಸ್ವಾತಂತ್ರ್ಯಮರ್ಹತಿ."

**ಅಜರಾಮರವತ್ ಪ್ರಾಜ್ಞೋ ವಿದ್ಯಾಮರ್ಥಂ ಚ ಸಾಧಯೇತ್ |**
**ಗೃಹೀತ ಇವ ಕೇಶೇಷು ಮೃತ್ಯುನಾ ಧರ್ಮಮಾಚರೇತ್ ||** || ೬೯ ||

— ಸಮಯೋಚಿತ ಪದ್ಯಮಾಲಿಕಾ

"ನನಗೆ ಮುಪ್ಪು ಇಲ್ಲ, ಮರಣವೂ ಇಲ್ಲ–ಎಂಬಂತೆ ಬುದ್ಧಿಶಾಲಿ ಯಾದವನು ವಿದ್ಯೆಯನ್ನೂ, ಧನವನ್ನೂ ಸಂಪಾದಿಸಬೇಕು. ಮೃತ್ಯು ಬಂದು ಜುಟ್ಟನ್ನು ಹಿಡಿದುಕೊಂಡಿದೆಯೋ ಎಂಬಂತೆ ಧರ್ಮವನ್ನಾಚ ರಿಸಬೇಕು."

ಮಾನವಜೀವನ ಬಹಳ ಸಂಕೀರ್ಣವಾದುದು. ಇದನ್ನು ಯಶಸ್ವಿಯಾಗಿ ನಿರ್ವಹಿಸುವುದಕ್ಕೆ ಚಾಕಚಕ್ಯತೆ ಬೇಕು. ಕೌಶಲ ಬೇಕು. ಕ್ರೋಧ-ಕ್ಷಮೆ, ಧೈರ್ಯ-ಭಯ ಮುಂತಾದ ಅನ್ಯೋನ್ಯ ವಿರುದ್ಧ ದ್ವಂದ್ವ ಧರ್ಮಗಳನ್ನು ಅವನು ಸಮಯೋಚಿತವಾಗಿ ತನ್ನಲ್ಲಿ ಅಳವಡಿಸಿಕೊಳ್ಳಬೇಕಾಗುತ್ತದೆ.

ಈ ಜಗತ್ತು ಭಗವಂತನ ಲೀಲಾರಂಗಸ್ಥಳ, ಇಲ್ಲಿ ಆತನಿಗೆ ಮೆಚ್ಚುಗೆಯಾಗುವಂತೆ ನಮ್ಮ ನಮ್ಮ ಪಾತ್ರವನ್ನು ಚೆನ್ನಾಗಿ ಅಭಿನಯಿಸಬೇಕಾಗಿದೆ.

ವಿದ್ಯೆಯಿಂದ ಶ್ರೇಯಸ್ಸು; ಧನದಿಂದ ಪ್ರೇಯಸ್ಸು. ಇವೆರಡೂ ನಮಗೆ ಬೇಕಾದವು. ಇವೆರಡೂ ಅಪಾರವಾದ ಪ್ರಯತ್ನದಿಂದ ಲಭ್ಯವಾಗತಕ್ಕವು. ಈ ಪ್ರಯತ್ನಕ್ಕೆ ಅದಮ್ಯವಾದ ಉತ್ಸಾಹ ಆವಶ್ಯಕ. ಮುಪ್ಪು–ಮರಣಗಳ ಚಿಂತೆ ಉತ್ಸಾಹಕ್ಕೆ ತಣ್ಣೀರೆರಚುತ್ತದೆ. ಆದ್ದರಿಂದ ವಿದ್ಯಾರ್ಜನೆ ಮತ್ತು ಧನಾರ್ಜನೆಯ ಕಾಲದಲ್ಲಿ ಮುಪ್ಪು–ಮರಣಗಳ ಚಿಂತೆಯನ್ನು ಹಚ್ಚಿಕೊಳ್ಳಬಾರದು – ಎನ್ನುತ್ತದೆ ನೀತಿಶಾಸ್ತ್ರ. ಧರ್ಮಾಚರಣೆಯ ವಿಷಯ ಬಂದಾಗ ಅದೇ ಚಿಂತೆಯನ್ನು ಬಲವಾಗಿ ಅಂಟಿಸಿಕೊಳ್ಳಬೇಕೆನ್ನುತ್ತದೆ ಅದೇ ನೀತಿಶಾಸ್ತ್ರ.

ಧರ್ಮಕಾರ್ಯವನ್ನಾಚರಿಸುವಾಗ ನಾವು ಏನನ್ನೂ ಸಂಪಾದಿಸುವುದಿಲ್ಲ. ಮಾಡಿದ ಹಳೆಯ ಸಾಲವನ್ನು ತೀರಿಸುತ್ತೇವೆ, ಅಷ್ಟೆ – ಎಂದು ಭಾವಿಸಬೇಕು. ನಮ್ಮ ವಿದ್ಯೆ, ಧನ, ಭೋಗಸಾಮಗ್ರಿ, ಸುಖ—ಎಲ್ಲವೂ ಜನತೆಯ ನೆರವಿನಿಂದ ಬಂದವು, ಆಕಾಶದಿಂದ ಉದುರಿದವುಗಳಲ್ಲ. ಜನರಿಲ್ಲದೆ ನಾವು ಏಕಾಕಿಯಾಗಿ ಉಳಿದರೆ, ಅನಾಥರಾಗಿಬಿಡುತ್ತೇವೆ, ನಾವು ಏನನ್ನೂ ಸಾಧಿಸಲಾಗುವುದಿಲ್ಲ—ಎಂಬುದನ್ನು ನೆನಪಿನಲ್ಲಿಡಬೇಕು. ನಮ್ಮ ಶರೀರಕ್ಕೂ ಕೂಡ ನಾವು ಋಣಿಗಳು. ಶರೀರದ ನೆರವಿನಿಂದಲೇ ವಿದ್ಯೆ, ಅರ್ಥ, ಧರ್ಮ. ಶರೀರವಾದರೋ ಪಾಂಚಭೌತಿಕವಾದದ್ದು. ಪಂಚಭೂತಗಳ ಋಣವನ್ನು ತೀರಿಸುವುದೂ ಧರ್ಮವೆನಿಸುತ್ತದೆ. ಅದರ ವಿಭಿನ್ನ ಪ್ರಕಾರವೇ ಯಜ್ಞ; ಅದೇ ಕ್ರತು. ಅತ್ಯಂತ ವಿಶಾಲವಾದ ಅರ್ಥದಲ್ಲಿ ಪ್ರಯುಕ್ತವಾದದ್ದು 'ಯಜ್ಞ' ಶಬ್ದ. 'ಏವಂ ಬಹುವಿಧಾ ಯಜ್ಞಾ ವಿತತಾಬ್ರಹ್ಮಣೋ ಮುಖೇ.'

ಮನುಷ್ಯನು ಲೌಕಿಕ–ಪಾರಮಾರ್ಥಿಕಗಳೆರಡರ ನಡುವೆ ನಡೆಯಬೇಕಾಗುತ್ತದೆ. ಈ ಸಾಮರ್ಥ್ಯವುಳ್ಳ ಮಾನವ ಮಾತ್ರ ಉತ್ತಮವಾಗಿ ತನ್ನ ಪಾತ್ರವನ್ನು ನಿರ್ವಹಿಸಬಲ್ಲ.

ಅನುಮಂತಾ ವಿಶಸಿತಾ ನಿಹಂತಾ ಕ್ರಯವಿಕ್ರಯೀ |
ಸಂಸ್ಕರ್ತಾ ಚೋಪಹರ್ತಾ ಚ ಖಾದಕಾಶ್ಚೇತಿ ಘಾತಕಾಃ || || ೭೦ ||

— ಮನುಸ್ಮೃತಿ, ೩-೧೦೫

"ಪ್ರಾಣಿಯನ್ನು ಕೊಲ್ಲುವುದಕ್ಕೆ ಒಪ್ಪಿಗೆಯಿತ್ತವನು, ಅಂಗಗಳನ್ನು ಕತ್ತರಿಸಿ ವಿಂಗಡಿಸತಕ್ಕವನು, ಕೊಂದವನು, ಕೊಳ್ಳುವವನು, ಮಾರುವವನು, ಬೇಯಿಸಿ ಹದಗೊಳಿಸತಕ್ಕವನು, ಬಡಿಸಕ್ಕವನು, ತಿನ್ನತಕ್ಕವನು – ಇವರೆಲ್ಲರೂ ಪ್ರಾಣಿಘಾತುಕರೇ ಸರಿ."

ಪ್ರಾಣಿಯನ್ನು ನೇರವಾಗಿ ಕೊಲ್ಲತಕ್ಕವನೊಬ್ಬನೇ ಘಾತುಕನಲ್ಲ. ಮೇಲ್ಕಂಡ ಎಲ್ಲರಿಗೂ ಇದರಲ್ಲಿ ಹಂಚಿಕೆ ಇದೆ. ಕೊಲ್ಲುವುದರಿಂದ ಹಿಡಿದು ತಿಂದು ಮುಗಿಸುವವರೆಗೆ ಎಲ್ಲರೂ ದೋಷಿಗಳು. ಹಿಂಸೆಗೆ ಹಿಂಜರಿಯುವ ಮನೋಭಾವ ಯಾರಿಗಿದೆಯೋ ಅವನು ಈ ಒಂದು ಕಾರ್ಯದಲ್ಲಿಯೂ ಭಾಗಿಯಾಗುವುದಿಲ್ಲ. ಕದಿಯತಕ್ಕವನು ಹೇಗೆ ಅಪರಾಧಿಯೋ ಹಾಗೆಯೇ ಕಳ್ಳಮಾಲನ್ನು ಕೊಳ್ಳತಕ್ಕವನೂ ಅಪರಾಧಿ. ಲಂಚ ತೆಗೆದುಕೊಳ್ಳುವುದು ನಮ್ಮಲ್ಲಿ ಕಾನೂನಿಗೆ ವಿರುದ್ಧ. ಲಂಚ ಕೊಡತಕ್ಕವನನ್ನೂ ದಂಡಿಸುವಂತಿದ್ದರೆ ಅದರ ಹಾವಳಿ ಎಷ್ಟೋ ತಪ್ಪುತ್ತಿತ್ತು.

ಮನು ಹೇಳಿದ ನೀತಿಯ ತಿರುಳಿನಂತೆ, ಈ ಪ್ರಜಾಪ್ರಭುತ್ವಯುಗದಲ್ಲಿ ಸರ್ಕಾರದ ತಪ್ಪು, ನ್ಯೂನತೆಗಳಿಗೆ ಸರ್ಕಾರವನ್ನು ಬೆಂಬಲಿಸುವ ಶಾಸಕರು ಹೊಣೆ. ಶಾಸಕರ ತಪ್ಪುಗಳಿಗೆ ಅವರನ್ನಾರಿಸಿದ ಪ್ರಜೆಗಳು ಹೊಣೆ. ಆದ್ದರಿಂದಲೇ ಸರ್ಕಾರವು ಮಾಡುವ ತಪ್ಪಿನ ಫಲವನ್ನು ಪ್ರಜೆಗಳು ಉಣ್ಣಬೇಕಾಗುತ್ತದೆ.

ಹಿಂದಿನ ಕಾಲದ ರಾಜಪ್ರಭುತ್ವ ನಾವು ತಿಳಿದುಕೊಂಡಷ್ಟು ನಿರಂಕುಶವಾಗಿರಲಿಲ್ಲ. ಧರ್ಮದ ಅಂಕುಶ ರಾಜಪ್ರಭುತ್ವವನ್ನು ನಿಯಮಿಸುತ್ತಿತ್ತು.

ರಾಜ್ಞೋಽಪಚಾರಾತ್ ಪೃಥಿವೀ ಸ್ವಲ್ಪಸಸ್ಯಾ ಭವೇತ್ ಕಿಲ |
ಅಲ್ಪಾಯುಷಃ ಪ್ರಜಾಃ ಸರ್ವಾ ದರಿದ್ರಾ ರೋಗಭಾಗಿನಃ ||

– ಎಂದು ನಿರ್ಣಯಿಸಲಾಗಿತ್ತು. ರಾಜ್ಯದಲ್ಲಿ ಮಳೆ ಬೆಳೆಗಳಾಗದಿದ್ದರೆ, ಪ್ರಜೆಗಳು ಅಲ್ಪಾಯುಷ್ಯರೂ ದರಿದ್ರರೂ ರೋಗಿಗಳೂ ಆದರೆ, ರಾಜನ ಅಪಚಾರವೇ ಕಾರಣವೆಂದು ತಿಳಿಯಲಾಗಿತ್ತು. ಕಾಳಿದಾಸನ ಅಭಿಜ್ಞಾನ ಶಾಕುಂತಲದಲ್ಲಿ ಕಣ್ವಾಶ್ರಮದಿಂದ ಋಷಿಗಳು ತನ್ನನ್ನು ನೋಡಲು ಬಂದಿದ್ದಾರೆಂದು ಕೇಳಿ ದುಷ್ಯಂತನು ಒಳಗೊಳಗೇ ಹೆದರುತ್ತಾನೆ. "ಆ ಪ್ರಾಂತದಲ್ಲಿ ಮಳೆಬೆಳೆಗಳಾಗದಿರಬಹುದೆ? ನಾನು ಯಾವ ಅಧರ್ಮ ಕಾರ್ಯವನ್ನು ಮಾಡಿದ್ದೇನು ?" – ಎಂದು ಚಿಂತಾಕುಲನಾಗುತ್ತಾನೆ.

ಜನರಲ್ಲಿ ಈಗ ನೀತಿಯ ಮಟ್ಟ ತಳಮಟ್ಟಿದೆಯೆಂದು ಎಲ್ಲರೂ ಗೊಣಗುತ್ತಲೇ ಇದ್ದಾರೆ. 'ಯಥಾ ರಾಜಾ ತಥಾ ಪ್ರಜಾಃ' ಎಂಬುದನ್ನೀಗ 'ಯಥಾ ಪ್ರಜಾಃ ತಥಾ ರಾಜಾ' ಎಂದು ಬದಲಾಯಿಸಿಕೊಳ್ಳಬೇಕಾಗಿದೆ. ರಾಜಪ್ರಭುತ್ವವಾಗಲಿ ಪ್ರಜಾಪ್ರಭುತ್ವವಾಗಲಿ, ಅದನ್ನು ನಿಯಂತ್ರಿಸಕ್ಕದ್ದು ಧರ್ಮ ಒಂದೇ.

ಬುದ್ಧಿವೃದ್ಧಿಕರಾಣ್ಯಾಶು ಧನ್ಯಾನಿ ಚ ಹಿತಾನಿ ಚ |
ನಿತ್ಯಂ ಶಾಸ್ತ್ರಾಣ್ಯವೇಕ್ಷೇತ ನಿಗಮಾಂಶ್ಚೈವ ವೈದಿಕಾನ್ || || ೭೧ ||

— ಮನುಸ್ಮೃತಿ, ೩-೧೯

"ಬುದ್ಧಿಶಕ್ತಿಯನ್ನು ಬೆಳೆಸುವ ಗ್ರಂಥಗಳನ್ನೂ, ಧನಾರ್ಜನೆಗೆ ಉಪಯುಕ್ತವಾದವುಗಳನ್ನೂ, ಪರಹಿತಕ್ಕೆ ಉಪಯೋಗಿಸಬಹುದಾದ ಶಾಸ್ತ್ರಗಳನ್ನೂ ಅಲ್ಲದೆ ವೇದಾರ್ಥವನ್ನು ವಿವರಿಸುವ ದರ್ಶನಾದಿ ಗ್ರಂಥಗಳನ್ನೂ ಸಹ ಯಾವಾಗಲೂ ಓದುತ್ತಿರಬೇಕು."

ನಾವು ಯಾವ ಬಗೆಯ ಪುಸ್ತಕಗಳನ್ನೋದಿ ಜ್ಞಾನಾರ್ಜನೆ ಮಾಡಿಕೊಳ್ಳಬೇಕೆಂಬ ಆಧುನಿಕ ಪ್ರಶ್ನೆಗೆ ಮನುಸ್ಮೃತಿಕಾರನು ಕೊಟ್ಟಿರುವ ಪ್ರಾಚೀನ ಉತ್ತರ ಇದು. ಅಂದರೆ, ಮಾನವನು ಆರ್ಜಿಸಲೇಬೇಕಾದ ಜ್ಞಾನ ಯಾವುದು ?

ಬುದ್ಧಿವೃದ್ಧಿಕರಾಣಿ = ಪ್ರಾಚೀನರ ಅಭಿಪ್ರಾಯದಂತೆ ತರ್ಕ, ವ್ಯಾಕರಣ ಶಾಸ್ತ್ರಗಳು ಬುದ್ಧಿಯನ್ನು ಬೆಳೆಸತಕ್ಕವು. ಸೂಕ್ಷ್ಮವಾದ ವಿಚಾರಪರಂಪರೆ ಇವುಗಳಲ್ಲಿರುವುದರಿಂದ ವಿಚಾರಶಕ್ತಿ ಪ್ರಚೋದಿತವಾಗಿ ಬುದ್ಧಿಗೆ ಹೊಸ ಆಯಾಮ ದೊರೆಯುತ್ತದೆ. ಅನ್ಯಶಾಸ್ತ್ರಗಳ ವ್ಯಾಸಂಗಕ್ಕೆ ಬೇಕಾದ ತಳಹದಿ ಸಿಗುವುದು ಇವುಗಳಿಂದಲೇ. ಧನ್ಯಾನಿ = ಧನಾರ್ಜನೆಗೆ ಉಪಯುಕ್ತವಾದವುಗಳು. ಓದಿನಿಂದಾಗಬೇಕಾದ ಅನಿವಾರ್ಯ ಪ್ರಯೋಜನ ಧನಾರ್ಜನೆ. ತನ್ನ ಜೀವನವೃತ್ತಿಗೆ ಬೇಕಾದ ಗ್ರಂಥಗಳೆಲ್ಲ ಈ ಗುಂಪಿಗೆ ಸೇರುತ್ತವೆ : ಕೃಷಿ, ವಾಣಿಜ್ಯ, ವಿಜ್ಞಾನ ಮುಂತಾದವು. ಪ್ರತಿಯೊಬ್ಬನೂ ತನ್ನ ಉದ್ಯೋಗ ಕ್ಷೇತ್ರದಲ್ಲಿ ನಿಷ್ಣಾತನಾಗಿ ಹೊಸ ಹೊಸ ಜ್ಞಾನವನ್ನು ಗಳಿಸಲು ಆಯಾ ಗ್ರಂಥಗಳ ಓದು ಅತ್ಯಾವಶ್ಯಕ. ಹಿತಾನಿ = ಪರೋಪಕಾರಕ್ಕೆ ನೆರವಾಗುವಂತಹವು : ಪ್ರಾಚೀನರ ಎಣಿಕೆಯಂತೆ ಶಿಶುವೈದ್ಯ, ಪಶುವೈದ್ಯ, ವಾಸ್ತುರಚನೆ ಮೊದಲಾದವು. ಇವನ್ನು ಎಲ್ಲರೂ ಸ್ವಲ್ಪವಾದರೂ ತಿಳಿದಿರಬೇಕೆಂದು ಮನುವಿನ ಆಶಯ. ಅಂದರೆ ಸಮಯ ಬಂದಾಗ ಇವುಗಳ ನೆರವಿನಿಂದ ನೆರೆಹೊರೆಯವರಿಗೆ ಉಪಕರಿಸಬಹುದು. ಒಬ್ಬನು ಪ್ರತಿಯೊಂದು ವಿದ್ಯೆಯಲ್ಲಿಯೂ ಪರಿಣತನಾಗಲು ಸಾಧ್ಯವಿಲ್ಲ. ಆದರೆ ಸಾಮಾನ್ಯಜ್ಞಾನ (General Knowledge) ಇರಲೇಬೇಕೆಂದು ಮನು ಸೂಚಿಸುತ್ತಾನೆ. ಅನಂತರ, ವೈದಿಕಾನ್ ನಿಗಮಾನ್ = ವೇದಸಮ್ಮತವಾದ ಅಧ್ಯಾತ್ಮಗ್ರಂಥಗಳನ್ನು ಓದುತ್ತಿರಬೇಕು. ಈ ಓದು ತನ್ನ ಶ್ರೇಯಸ್ಸಿಗಾಗಿ. ಹೀಗೆ ಇಹ – ಪರಗಳಿಗೆ ಉಪಯುಕ್ತವಾದವುಗಳನ್ನು ಸದಾ ಅಧ್ಯಯನ ಮಾಡುತ್ತಿರಬೇಕೆಂದು ವಿಧಿ. ಮನು ಹೇಳಿದ ಈ ಮೂಲತತ್ತ್ವಗಳು ಎಂದೆಂದಿಗೂ ನಿಲ್ಲತಕ್ಕವು.

ಹಾಗಾದರೆ ಮನೋರಂಜನೆಗಾಗಿ ಕಾವ್ಯ, ನಾಟಕಗಳನ್ನೋದಬಹುದೊ? ಅವಶ್ಯವಾಗಿ ಓದಬಹುದು. ಶಾಸ್ತ್ರವು ಅದನ್ನು ನಿಷೇಧಿಸಿಲ್ಲ. ಉತ್ತಮ ಕಾವ್ಯವು ಕಾಂತಾಸಂಮಿತವೆನಿಸಿ ನೀತಿಬೋಧಕವಾಗಿರುತ್ತದೆ. ಶ್ರೀಮದ್ರಾಮಾಯಣ, ಮಹಾಭಾರತಗಳು ಕಾವ್ಯಗಳೇ. ಮನೋರಂಜನೆ ಮನುಷ್ಯಸಹಜ ಪ್ರವೃತ್ತಿ. ಆದರೆ, ಕೆಟ್ಟ ಕಾವ್ಯಗಳನ್ನು ಓದಬೇಡ ಎಂಬ ನಿಷೇಧ ಮಾತ್ರ ಇದ್ದೇ ಇದೆ.

**ಪಾದೋಽಧರ್ಮಸ್ಯ ಕರ್ತಾರಂ ಪಾದಃ ಸಾಕ್ಷಿಣಮೃಚ್ಛತಿ |**
**ಪಾದಃ ಸಭಾಸದಃ ಸರ್ವಾನ್ ಪಾದೋ ರಾಜಾನಮೃಚ್ಛತಿ || || ೭೨ ||**

**— ಮನುಸ್ಮೃತಿ, ೮-೧೮**

"ದುಷ್ಕೃತ್ಯವು ನಡೆದಾಗ ಪಾಪದ ಕಾಲುಭಾಗ ಅದನ್ನು ಮಾಡಿದವನಿಗೂ ಕಾಲುಭಾಗ ನೋಡಿದವನಿಗೂ ಕಾಲುಭಾಗ ಸಭಾಸದರಿಗೂ ಉಳಿದ ಕಾಲುಭಾಗ ರಾಜನಿಗೂ ಸೇರುತ್ತದೆ."

ಇಂದು ಶಾಲಾ–ಕಾಲೇಜುಗಳು ಬೆಳೆದು ವಿದ್ಯಾವಂತರ ಸಂಖ್ಯೆ ಹೆಚ್ಚಿದಷ್ಟೂ ಅಪರಾಧಗಳು ಅಧಿಕವಾಗುತ್ತಿರುವುದೊಂದು ವಿಪರ್ಯಾಸ.

ದುಷ್ಕೃತ್ಯದಿಂದ ಪಾಪ ಬರುವುದೆಂದೂ, ಪಾಪದ ಫಲವನ್ನು ಅನುಭವಿಸಲೇಬೇಕೆಂದೂ ಹಿಂದಿನವರು ಬೋಧಿಸುತ್ತಿದ್ದರು. ಈ ನಂಬಿಕೆ ಅನಕ್ಷರಸ್ಥನಾದ ಹಳ್ಳಿಗನಲ್ಲಿಯೂ ದೃಢಮೂಲವಾಗಿತ್ತು. ಆಗಲೂ ದುಷ್ಕೃತ್ಯಗಳು ನಡೆಯುತ್ತಿದ್ದವು. ಪಾಪದ ಭಯವಿದ್ದರೂ ರಜೋಗುಣ ತಮೋಗುಣಗಳು ಮನುಷ್ಯನ ಬುದ್ಧಿಯನ್ನು ಮುಸುಕಿ ಮರುಳುಮಾಡುತ್ತವೆ. ಪಾಪ–ಪುಣ್ಯಗಳಲ್ಲಿ ನಂಬಿಕೆಗೆ ಅಥವಾ ಆಸ್ತಿಕತೆಗೆ ಪ್ರಯೋಜನವೆಂದರೆ, ದುರ್ಬುದ್ಧಿಗೆ ಆದಷ್ಟು ಕಡಿವಾಣ ಹಾಕುವುದು. ಆದ್ದರಿಂದ ದುಷ್ಕೃತ್ಯಗಳ ಸಂಖ್ಯೆ ಪರಿಮಿತವಾಗಿತ್ತು. ಕೃತ್ಯವನ್ನೆಸಗಿದ ಮೇಲೆ ಜನರು ಪಶ್ಚಾತ್ತಾಪ ಪಡುತ್ತಿದ್ದರು, ದುಡುಕಿದೆವೆಂದು ವ್ಯಥೆ ಪಡುತ್ತಿದ್ದರು.

ಈಗ ಅಂತಹ ಪ್ರಶ್ನೆ ಇಲ್ಲ. ಪಾಪದ ಭಯ ಹುಟ್ಟುವುದೇ ಇಲ್ಲ. ಬುದ್ಧಿಜೀವಿಗಳು ಜಾಣತನದಿಂದ ಪುಸ್ತಕಗಳನ್ನು ಬರೆದು, ಭಾಷಣಗಳನ್ನು ಕೊರೆದು, ಆಸ್ತಿಕತೆಯನ್ನೂ ಪುನರ್ಜನ್ಮದ ನಂಬಿಕೆಯನ್ನೂ ತಮ್ಮ 'ವಿಜ್ಞಾನಬಲ'ದಿಂದ ತೊಡೆದುಹಾಕುತ್ತಿದ್ದಾರೆ. ಜನರ 'ಮೌಢ್ಯ'ವನ್ನು ಹೋಗಲಾಡಿಸಿ 'ಜನಸೇವೆ' ಮಾಡುತ್ತಿದ್ದಾರೆ. ಪಾಪಪುಣ್ಯಗಳಿಲ್ಲವೆನ್ನತಕ್ಕವನು ಪೊಲೀಸಿನವರಿಗೆ ಅಂಜುತ್ತಾನೆಯೆ ?

ನಾವು ಮನುವಿನ ಮಾತನ್ನು ಮತ್ತೊಮ್ಮೆ ಮನನಮಾಡಿಕೊಳ್ಳಬೇಕು: ರಾಜನೆಂದರೆ ಈ ಕಾಲದಲ್ಲಿ ಮಂತ್ರಿ. ಸಭಾಸದರೆಂದರೆ ಶಾಸಕರು. ಸಾಕ್ಷಿ

ಎಂದರೆ ಕೋರ್ಟಿನಲ್ಲಿ ಸಾಕ್ಷ್ಯ ಹೇಳತಕ್ಕವನೆಂದಲ್ಲ, ಕೃತ್ಯವನ್ನು ಕಂಡವನೂ ತಿಳಿದವನೂ ಸಹ ಸಾಕ್ಷಿಯೇ. ನೆರೆಮನೆಯಲ್ಲಿ ಆರ್ತನಾದವನ್ನು ಕೇಳಿ ಕಿಟಕಿ ಮುಚ್ಚತಕ್ಕವನೊಬ್ಬ ಸಾಕ್ಷಿಯೆನಿಸುತ್ತಾನೆ. ಇವರೆಲ್ಲರೂ ಪಾಪವನ್ನು ಹಂಚಿಕೊಳ್ಳತಕ್ಕವರೇ. ರಾಷ್ಟ್ರದಲ್ಲಿ ಯಾವ ದುಷ್ಕೃತ್ಯ ನಡೆದರೂ ಅದಕ್ಕೆ ಪ್ರತಿಯೊಬ್ಬ ಶಾಸಕನೂ ಮಂತ್ರಿಯೂ ಹೊಣೆ–ಎನ್ನುತ್ತಾನೆ ಮನು. ಪಾಪವು ಕಾನೂನಿನ ಚೌಕಟ್ಟಿನಿಂದಾಗಲಿ ವಕಾಲತ್ತಿನ ಬಲದಿಂದಾಗಲಿ ತಪ್ಪಿಸಿಕೊಳ್ಳುವಂತಹುದಲ್ಲ.

**ಭಾರೋಽವಿವೇಕಿನಃ ಶಾಸ್ತ್ರಂ ಭಾರೋ ಜ್ಞಾನಂ ಚ ರಾಗಿಣಃ |**
**ಅಶಾಂತಸ್ಯ ಮನೋ ಭಾರೋ ಭಾರೋಽನಾತ್ಮವಿದೋ ವಪುಃ || || ೭೩ ||**

— ಯೋಗವಾಸಿಷ್ಠ , ವೈರಾಗ್ಯ, ೧೩-೧೩

"ಅವಿವೇಕಿಗೆ ಶಾಸ್ತ್ರವು ಹೊರೆ. ವಿಷಯಲಂಪಟನಿಗೆ ತತ್ತ್ವಜ್ಞಾನ ಹೊರೆ. ಶಾಂತಿಯಿಲ್ಲದವನಿಗೆ ಮನಸ್ಸೇ ಹೊರೆ. ಆತ್ಮಜ್ಞಾನವಿಲ್ಲದವನಿಗೆ ಶರೀರವೇ ಹೊರೆ."

ತನಗೆ ಹಿತ ಯಾವುದು, ಅಹಿತ ಯಾವುದು ? – ಎಂದು ಆಲೋಚಿಸಿ ತಿಳಿದುಕೊಳ್ಳುವ ಬುದ್ಧಿಯೇ ವಿವೇಕ. ವಿವೇಕವಿಲ್ಲದವನಿಗೆ ಶಾಸ್ತ್ರವು ಹೊರೆ ಎನಿಸುತ್ತದೆ. ಅವನು ಬುದ್ಧಿಗೆ ಶ್ರಮವನ್ನು ಕೊಡಲಾರ. ಹಗುರವಾದ ಮನೋರಂಜನೆ ಅವನಿಗೆ ಬೇಕು; ಬುದ್ಧಿಯ ಬೆಳವಣಿಗೆ ಅವನಿಗೆ ಬೇಕಿಲ್ಲ. ಸಹಜವಾಗಿಯೇ ಅವನು ವಿಷಯಲಂಪಟನಾಗುವುದರಲ್ಲಿ ಅಚ್ಚರಿಯಿಲ್ಲ. ಅಂಥವನಿಗೆ ತತ್ತ್ವಜ್ಞಾನ ಬಹುದೂರ. ವಿಮರ್ಶಾತ್ಮಕವಾದ ಸಾಹಿತ್ಯ, ಸಂಗೀತ, ಇತಿಹಾಸ ಮೊದಲಾದ ಲೌಕಿಕಶಾಸ್ತ್ರಗಳೂ ಸಹ ಆತನಿಗೆ ಕಹಿಯೆನಿಸುತ್ತವೆ. ಅವನ ಆಸೆಗಳಿಗೇನೂ ಕೊರತೆ ಇರುವುದಿಲ್ಲ. ಕನಸಿನ ಗೋಪುರಗಳಂತೆ ಅವುಗಳು ಭಗ್ನವಾದಾಗ ತೊಳಲುತ್ತಾನೆ.

ವಿವೇಕವೂ ಶಾಸ್ತ್ರಬಲವೂ ಇಲ್ಲದಾಗ ಕಷ್ಟವನ್ನೆದುರಿಸುವ ಶಕ್ತಿ ಎಲ್ಲಿಂದ ಬರಬೇಕು ? ಚಿಕ್ಕದೂ ಬಹು ದೊಡ್ಡದಾಗಿ ಕಾಣಿಸುತ್ತದೆ. ವ್ಯಾಯಾಮದಿಂದ

ದೇಹಕ್ಕೆ ಬಲ ಬರುವಂತೆ ಶಾಸ್ತ್ರಪರಿಶೀಲನೆಯಿಂದ ಬುದ್ಧಿಗೆ ಬಲ ಬರುತ್ತದೆ, ಅದು ಬೆಳೆಯುತ್ತದೆ. ದುರ್ಬಲ ಶರೀರವು ರೋಗಗಳಿಗೆ ಆಗರವಾದರೆ ದುರ್ಬಲ ಮನಸ್ಸು ಚಿಂತೆಗಳಿಗೆ ಆಗರ, ಅದಕ್ಕೆ ಶಾಂತಿ ಇಲ್ಲ. 'ಅಶಾಂತಸ್ಯ ಕುತಃ ಸುಖಂ ?' ಶಾಂತಿಯಿಲ್ಲದವನಿಗೆ ಸುಖವೆಲ್ಲಿ ? ಚಿಂತೆಗಳ ಮೂಟೆಯನ್ನು ಹೊತ್ತ ಮನಸ್ಸೇ ಭಾರವೆನಿಸುತ್ತದೆ.

ಯಾವ ಪ್ರಾಣಿಗೂ ಇಲ್ಲದ ಸಕಲ ಶರೀರೇಂದ್ರಿಯ ಸಂಪತ್ತು ಮಾನವನಿಗೆ ಲಭಿಸಿದೆ. ಇದರ ಸದ್ವಿನಿಯೋಗ ಹೇಗೆ ? ನಾವು ಬದುಕುವುದಕ್ಕಾಗಿ ಊಟ ಮಾಡಬೇಕೋ, ಊಟ ಮಾಡುವುದಕ್ಕಾಗಿ ಬದುಕಬೇಕೋ ? – ಎಂಬುದು ಪ್ರಶ್ನೆ. ಎರಡನೆಯದನ್ನು ಒಪ್ಪುವುದಾದರೆ ಹೇಳಬೇಕಾದ್ದೇನೂ ಇರುವುದಿಲ್ಲ. ಮೊದಲನೆಯದನ್ನೊಪ್ಪುವುದಾದರೆ, ಬದುಕಿನ ಗುರಿ ಏನು ಎಂದು ನಿರ್ಧರಿಸಿಕೊಳ್ಳಬೇಕು. ಆತ್ಮಜ್ಞಾನವೇ ಬದುಕಿನ ಗುರಿ ಎಂದು ನಿರ್ಧರಿಸಿದ್ದಾರೆ ಶಾಸ್ತ್ರಕಾರರು. ಇನ್ನು ಯಾವ ಪ್ರಾಣಿಗೂ ಇಲ್ಲದ ಶರೀರೇಂದ್ರಿಯ ಸಂಪತ್ತು, ವಿಚಾರಶಕ್ತಿ ಇರುವುದು ಮನುಷ್ಯನಿಗೆ ಮಾತ್ರ. ಆತ್ಮಜ್ಞಾನಕ್ಕಾಗಿ ಯತ್ನಿಸದ ಮಾನವನಿಗೆ ಈ ಶರೀರ ಹೊರೆಯೇ. ಏಕೆಂದರೆ ಪ್ರಾಣಿಗಳು ಮಾನವನಿಗಿಂತ ಸುಖವಾಗಿವೆ; ಅವು ಅವನಷ್ಟು ಜೀವನ ಸಮಸ್ಯೆಗಳನ್ನು ಎದುರಿಸಬೇಕಾಗಿಲ್ಲ!

ಯತ್ ಶ್ರುತಂ ನ ವಿರಾಗಾಯ ನ ಧರ್ಮಾಯ ನ ಶಾಂತಯೇ |
ಸುಬದ್ಧಮಪಿ ಶಬ್ದೇನ ಕಾಕವಾಶಿತಮೇವ ತತ್ || || ೭೪ ||

— ಮಹಾಭಾರತ

"ವೈರಾಗ್ಯ, ಧರ್ಮ, ಮನಃಶಾಂತಿ – ಇವುಗಳಲ್ಲೊಂದು ಫಲವನ್ನೂ ನೀಡದ ಯಾವ ವಿದ್ಯೆಯುಂಟೋ, ಅದು ಎಷ್ಟೇ ಶಬ್ದಜಾಲದಿಂದ ರಚಿತವಾಗಿದ್ದರೂ ಕಾಗೆಯ ಕೂಗೇ ಸರಿ."

ವಿದ್ಯೆಯೆಂದರೆ ಜ್ಞಾನ. ವಿದ್ಯಾಭ್ಯಾಸವೆಂದರೆ ಜ್ಞಾನಸಂಪಾದನೆ ಯೆಂದರ್ಥ. ಜ್ಞಾನಕ್ಕೆ ಒಂದು ವಿಷಯವಿರಬೇಕು. ವಿಷಯವಿಲ್ಲದೆ ಜ್ಞಾನವಿಲ್ಲ.

ಲೋಕದಲ್ಲಿ ಹಲವಾರು ವಿಷಯಗಳುಂಟು. ಅವುಗಳಲ್ಲಿ ಕೆಲವು ಉಪಯುಕ್ತ; ಕೆಲವು ಅನುಪಯುಕ್ತ, ಅನರ್ಥಕಾರಿ. ಇವುಗಳಲ್ಲಿ ಯಾವುದರ ಜ್ಞಾನ ಸರಿಯಾದ ವಿದ್ಯೆ ಎನಿಸುತ್ತದೆ ? 'ಅರ್ಥಕರೀ ಚ ವಿದ್ಯಾ' ಎಂಬ ಹೇಳಿಕೆ ಯುಂಟು. ಧನಸಂಪಾದನೆಗೆ ವಿದ್ಯೆ ಉಪಯುಕ್ತವಾಗಬೇಕು. ಆದರೆ ಹಣವನ್ನು ಸಂಪಾದಿಸುವ ಹಲವಾರು ಮಾರ್ಗಗಳಲ್ಲಿ ವಿದ್ಯೆಯೂ ಒಂದಾದರೆ, ವಿದ್ಯೆಯ ವೈಶಿಷ್ಟ್ಯವಾದರೂ ಏನು ? ವಿದ್ಯಾವಂತನಿಗೆ ಹೆಚ್ಚಿನ ಮಾನ್ಯತೆ ಏಕೆ ?

'ವಿದ್ಯಾ ದದಾತಿ ವಿನಯಂ' ಎಂದು ನಮ್ಮವರ ನಿಷ್ಕರ್ಷೆ. ವಿದ್ಯಾವಿಹೀನರಲ್ಲಿ ಕಾಣಲಾಗದ ಒಂದು ಅಸಾಧಾರಣವಾದ ಜೀವನವಿಧಾನವೇ ವಿನಯ. ಸಾವಿರಾರು ವರ್ಷಗಳಿಂದ ಸಾವಿರಾರು ಜನರ ಲೋಕಾನುಭವದಿಂದ ಮತ್ತು ಆಳವಾದ ಚಿಂತನದಿಂದ ಫಲಿತವಾದ ವಿದ್ಯಾಫಲವೇ ವಿನಯ. ನಾನು, ನನ್ನದು ಎಂಬ ಅತ್ಯಂತ ವ್ಯಾಮೋಹವೇ ರಾಗ. ರಾಗದಿಂದ ವಿಗತವಾದದ್ದು ವಿರಾಗ. ನಾನು ಎಂಬುದಕ್ಕೆ ಆಸ್ಪದವಾದ ಶರೀರವಾಗಲಿ, ನನ್ನದು ಎಂದುಕೊಳ್ಳುವ ಆಸ್ತಿ ಮನೆಗಳಾಗಲಿ ಶಾಶ್ವತವಲ್ಲ – ಎಂಬ ಅರಿವು ಮೂಡಿದಾಗ ಈ ಅತ್ಯಂತ ವ್ಯಾಮೋಹ ತೊಲಗುತ್ತದೆ. ನಮಗೆ ರಾಗವು ಪರಿಮಿತವಾಗಿ ಬೇಕಾಗುತ್ತದೆ. ಅದಿಲ್ಲದೆ ವ್ಯವಹಾರವೇ ನಡೆಯದು.

ವಿದ್ಯೆಯ ಇನ್ನೊಂದು ಫಲ ಧರ್ಮದ ಅರಿವು. ಇದರಿಂದ ಆತ್ಮೋನ್ನತಿ, ರಾಷ್ಟ್ರದ ಉನ್ನತಿ. ಧರ್ಮದ ಜಾಗೃತಿಯನ್ನುಂಟುಮಾಡಿ ನಡೆನುಡಿಗಳನ್ನು ತಿದ್ದಬೇಕಾದದ್ದು ವಿದ್ಯೆ. ಧರ್ಮವೆಂದರೆ ಸದಾಚಾರ ಸಂಹಿತೆ, ಮತೀಯ ಆಚರಣೆಯಲ್ಲ.

ಮನಃಶಾಂತಿಯು ವಿದ್ಯೆಯ ಮುಖ್ಯವಾದ ಫಲ. ಇದು ವಿರಾಗ ಮತ್ತು ಧರ್ಮಾಧರ್ಮಗಳ ಜ್ಞಾನದಿಂದ ಹುಟ್ಟತಕ್ಕದ್ದು. ಜೀವನದಲ್ಲಿ ತೃಪ್ತಿ, ನೆಮ್ಮದಿಗಳು ಇದರ ಲಕ್ಷಣ. ಯಾವಾತನ ಮನಸ್ಸು ಸದಾ ಶಾಂತವಾಗಿರು ವುದೋ ಅವನೇ ಸರ್ವಶಾಸ್ತ್ರಗಳನ್ನು ಬಲ್ಲವನು.

ಹಾಗಲ್ಲದೆ ಚಮತ್ಕಾರವಾಗಿ ಮಾತನ್ನಾಡಿ ಸಭಾಸದರನ್ನು ತಲೆದೂಗಿಸುವ ವಾಗ್ವೈಖರಿಯೆಲ್ಲವೂ ಕಾಕವಾಶಿತ. ಇಂದಿನ ವಿಜ್ಞಾನವು ವಿರಾಗ, ಧರ್ಮ,

ಶಾಂತಿಗಳನ್ನು ನೀಡಲು ಸಮರ್ಥವಾದರೆ ಅದು ವಿದ್ಯೆಯಾಗುತ್ತದೆ, ಇಲ್ಲದಿದ್ದರೆ ಡೊಂಬರಾಟವೇ.

**ನ ಜಾನಪದಿಕಂ ದುಃಖಮೇಕಃ ಶೋಚಿತುಮರ್ಹತಿ |**
**ಅಶೋಚನ್ ಪ್ರತಿ ಕುರ್ವೀತ ಯದಿ ಪಶ್ಯೇದುಪಕ್ರಮಮ್ || || ೭೫ ||**

— ಮಹಾಭಾರತ, ಶಾಂತಿಪರ್ವ

"ಸಾರ್ವಜನಿಕವಾದ ಎಂದರೆ ಸಾರ್ವತ್ರಿಕ ಆಪತ್ತುಗಳು ಪ್ರಾಪ್ತವಾದಾಗ ವ್ಯಕ್ತಿಯು ಅಳುತ್ತ ಕೂಡಬಾರದು. ಶೋಕವನ್ನು ಬದಿಗಿರಿಸಿ ಪರಿಸ್ಥಿತಿಯನ್ನು ನಿವಾರಿಸಲು ಮಾಡಬೇಕಾದ ಪ್ರಯತ್ನವನ್ನು ಆರಂಭಿಸಬೇಕು."

ಪ್ರಪಂಚದ ಕೋಟಲೆಗಳನ್ನು ಹೇಗೆ ಎದುರಿಸಬೇಕೆಂದು ಶುಕರಿಗೆ ಬೋಧನೆ ಮಾಡುವಾಗ ನಾರದರು ಹೇಳಿದ ಮಾತು ಇದು. ವೈಯಕ್ತಿಕವಾಗಿ ಸಂಕಟಗಳು ಒದಗಿದಾಗ ಜನ ತಮ್ಮ ಶಕ್ತಿಮೀರಿ ಪ್ರಯತ್ನಿಸಿ ಅವನ್ನು ನಿವಾರಿಸಿಕೊಳ್ಳುತ್ತಾರೆ. ಆದರೆ ಜನಸಮುದಾಯಕ್ಕೆಲ್ಲ ಸರ್ಕಾರಗಳ ಧೋರಣೆಯಿಂದಲೋ ಪ್ರಕೃತಿ ವಿಕೋಪದಿಂದಲೋ ವಿಪತ್ತು ಎರಗಿದಾಗ ಜನರ ಪ್ರಯತ್ನಶೀಲತೆ ಕುಗ್ಗುತ್ತದೆ. ಕೆಲವರು 'ಇದು ನನಗೆ ತಟ್ಟಿಲ್ಲವಲ್ಲ, ನಾನೇಕೆ ತಲೆಕೆಡಿಸಿಕೊಳ್ಳಲಿ ?' – ಎಂದು ಉದಾಸೀನಭಾವ ತಳೆಯುತ್ತಾರೆ; ತಮ್ಮ ಮನೆಗೂ ಬೆಂಕಿಬಿದ್ದಾಗ ಮಾತ್ರ ಎಚ್ಚರಾಗುತ್ತಾರೆ. ಈ ಸ್ವಭಾವವನ್ನು ತಾಮಸ ಎಂದು ವರ್ಗೀಕರಿಸಬಹುದು. ಇನ್ನೊಂದು ವರ್ಗದ ಜನ ಸ್ವಭಾವತಃ ಕಾರ್ಯಶೀಲರಾದರೂ, ಸಾರ್ವಜನಿಕ ಸಮಸ್ಯೆಗಳ ಬಗೆಗೆ ಅವರಿಗೆ ಕಾಳಜಿ ಇದ್ದರೂ, 'ಇಷ್ಟು ದೊಡ್ಡ ಸಮಸ್ಯೆಯನ್ನು ನಾನು ಮೈಮೇಲೆ ಹಾಕಿಕೊಳ್ಳಲಾದೀತೆ ? ನಾನೇಕೆ ಸುಟ್ಟುಕೊಳ್ಳಲಿ ?' ಎಂದು ಸುಮ್ಮನಿರುತ್ತಾರೆ; ಆದರೆ ಬೇರೆಯವರು ಉತ್ಸಾಹ ತಳೆದಲ್ಲಿ ಇವರೂ ಬೆಂಬಲಿಸಿಯಾರು. ಇದನ್ನು ರಾಜಸ ಸ್ವಭಾವವೆನ್ನಬಹುದು. ಸಾತ್ತ್ವಿಕ ಸ್ವಭಾವದವರಾದರೋ ಸಾರ್ವಜನಿಕ ಆಪತ್ತುಗಳು ಎದುರಾದಾಗಲೂ ಸಮಸ್ಯೆಯ ಗಾತ್ರದಿಂದ ಎದೆಗುಂದದೆ,

ಅನ್ಯಪ್ರೇರಣೆಗೂ ಕಾಯದೆ, ತಾವಾಗಿ ಪರಿಹಾರ ಪ್ರಯತ್ನಗಳನ್ನು ನಡೆಸಲು ಉಪಕ್ರಮಿಸುತ್ತಾರೆ, ತಮಗೆ ಬೇಕಾದ ಸಾಧನಗಳನ್ನೂ ಜನಬೆಂಬಲವನ್ನೂ ಯೋಜಿಸಿಕೊಳ್ಳುತ್ತಾರೆ. ಶೋಕಪಡುತ್ತ ಕೂಡುವುದಿಲ್ಲ. ಈ ಬಗೆಯ ಕಾರ್ಯಶ್ರದ್ಧೆ ಉತ್ತಮ ಮನುಷ್ಯತ್ವದ ಲಕ್ಷಣವೆಂದಿದ್ದಾರೆ ನಾರದರು.

**ನಮಂತಿ ಫಲಿತಾ ವೃಕ್ಷಾ ನಮಂತಿ ಚ ಬುಧಾ ಜನಾಃ |**
**ಶುಷ್ಕಕಾಷ್ಠಾನಿ ಮೂರ್ಖಾಶ್ಚ ಭಿದ್ಯಂತೇ ನ ನಮಂತಿ ಚ || || ೭೬ ||**

— ಸುಭಾಷಿತಸುಧಾನಿಧಿ

"ಹಣ್ಣುಬಿಟ್ಟ ಮರಗಳು ಬಾಗುತ್ತವೆ. ವಿದ್ವಾಂಸರಾದ ಜನರು ವಿನಯದಿಂದ ಬಾಗುತ್ತಾರೆ. ಒಣಗಿದ ಕಟ್ಟಿಗೆಗಳು ಮುರಿದು ಹೋಗುತ್ತವೆ, ಬಾಗುವುದಿಲ್ಲ. ಹಾಗೆಯೇ ಮೂರ್ಖ ಜನರೂ ನಾಶವಾದಾರೇ ಹೊರತು ಬಾಗುವುದಿಲ್ಲ."

ಮರಗಳು ಹಣ್ಣಿನ ಭಾರಕ್ಕೆ ಬಾಗುವುದುಂಟು. ಹಣ್ಣಿಲ್ಲದ ಮರಗಳು ಸೆಟೆದುಕೊಂಡಿರುತ್ತವೆ. ಹಣ್ಣುಗಳು ಪರರಿಗೆ ದಾನಮಾಡುವುದಕ್ಕಾಗಿ, ತಮಗಾಗಿ ಅಲ್ಲ. ಹಾಗೆಯೇ ದಾನಿಯಾದವನಲ್ಲಿ ವಿನಯ (ಬಾಗುವುದು) ಅಪೇಕ್ಷಿತವಾದ ಗುಣ. ಹೃದಯವು ಕರಗಿ ಅನುಕಂಪೆಯಿಂದ ಕೊಡತಕ್ಕವನಲ್ಲಿ ವಿನಯ ಎದ್ದುಕಾಣುತ್ತದೆ. ಕೀರ್ತಿಯ ಹಂಬಲದಿಂದ ಕೊಡತಕ್ಕವನಲ್ಲಿ 'ಅಹಂ' ಎದ್ದು ಬೀಗುತ್ತದೆ. ಉಪನಿಷತ್ತು ಹೇಳುತ್ತದೆ, 'ಹ್ರಿಯಾದೇಯಂ, ಭಿಯಾ ದೇಯಂ' ಎಂದು. 'ಲಜ್ಜೆಯಿಂದ ಕೊಡಬೇಕು, ಹೆದರುತ್ತ ಕೊಡಬೇಕು.' ಲಜ್ಜೆ ಏತಕ್ಕಾಗಿ ? 'ನಾನು ಕೊಡುವುದು ಅತ್ಯಲ್ಪ' ಎಂದು ಲಜ್ಜೆ. ಹೆದರಿಕೆ ಏಕೆ ? 'ಈ ಅಲ್ಪದಿಂದ ಕಾರ್ಯವಾಗದೆ, ಯಾಚಕನಿಗೆ ತೃಪ್ತಿಯಾಗದೆ ಹೋದೀತೇನೊ' ಎಂದು ಹೆದರಿಕೆ.

'ವಿದ್ಯಾ ವಿವಾದಾಯ' ಎಂದು ಲೋಕದಲ್ಲಿ ಪ್ರಸಿದ್ಧಿ. ವಿದ್ಯಾಮದ, ಧನಮದ, ಅಧಿಕಾರಮದಗಳು ಮದ್ಯದ ಮದಕ್ಕಿಂತ ಪ್ರಬಲವಾದವು.

ಮದ್ಯದ ಮದ ಸ್ವಲ್ಪ ಹೊತ್ತು ಮಾತ್ರ ಇರತಕ್ಕುದಾದರೆ, ಉಳಿದ ಮದಗಳು ಸದಾ ಇರತಕ್ಕವು. ಹಾಗಾದರೆ 'ನಮಂತಿ ಚ ಬುಧಾ ಜನಾಃ', 'ವಿದ್ಯಾ ದದಾತಿ ವಿನಯಂ' ಎಂಬ ಸುಭಾಷಿತಗಳ ಗತಿ ಏನು ? ವಿದ್ಯೆಯು ನೀರಿದ್ದಂತೆ. ವಸ್ತುವಿನಲ್ಲಿ ಸಹಜವಾಗಿ ಇದ್ದ ಗುಣಸಂಪತ್ತನ್ನು ಬೆಳೆಸುತ್ತದೆ. ಕಬ್ಬಿಗೆ ಎರೆದ ನೀರು ಸಿಹಿರಸವನ್ನು ಬೆಳೆಸುತ್ತದೆ. ನಿಂಬೆಗೆ ಎರೆದ ನೀರು ಹುಳಿರಸವನ್ನು ಬೆಳೆಸುತ್ತದೆ ! ವಿದ್ಯಾರಣ್ಯಸ್ವಾಮಿಗಳು ಗ್ರಂಥವನ್ನು ರಚಿಸುವಾಗ 'ಸ್ವಬೋಧ ಪರಿಶುದ್ಧಯೇ' – 'ನನ್ನ ತಿಳಿವಳಿಕೆಯನ್ನು ಸ್ವಚ್ಛಪಡಿಸಿಕೊಳ್ಳುವುದಕ್ಕಾಗಿ' ಎಂದು ಹೇಳಿದರು. ಜಗನ್ನಾಥ ಪಂಡಿತನು 'ಕೋऽಸ್ತಿ ಧನ್ಯೋ ಮದನ್ಯಃ' – 'ನನಗಿಂತ ಧನ್ಯನಾದ ಕವಿ ಯಾವನಿದ್ದಾನೆ ?' ಎಂದು ಬೀಗಿದನು.

ಒಣಗಿದ ಮರ ಹಮ್ಮಿನಿಂದ ಸೆಟೆದು ನಿಂತಿರುತ್ತದೆ. ಅದು ಗಾಳಿಗೂ ಜಗ್ಗದು, ಬಗ್ಗಿಸಲು ಯತ್ನಿಸಿದರೂ ಬಗ್ಗದು. ಅದಕ್ಕೆ ಫಲ ಕೊಡಲಿಯ ಚಿಕಿತ್ಸೆಯೇ. ಸೀತೆಯನ್ನು ಶ್ರೀರಾಮನಿಗೆ ಒಪ್ಪಿಸಿ ವಿಪತ್ತಿನಿಂದ ಪಾರಾಗು – ಎಂದು ಯಾರುಯಾರು ಬೋಧಿಸಿದರೂ ರಾವಣನು ಜಗ್ಗಲಿಲ್ಲ. ಯಾರಿಗೂ ತಲೆಬಾಗುವುದಿಲ್ಲವೆಂದು ಮೂರ್ಖತನ ಹಿಡಿದು ಕೊನೆಗೆ ತಾನೇ ನಾಶವಾದ.

**ಕವೀನಾಂ ಪ್ರತಿಭಾ ಚಕ್ಷುಃ ಶಾಸ್ತ್ರಂ ಚಕ್ಷುರ್ವಿಪಶ್ಚಿತಾಮ್ |**
**ಜ್ಞಾನಂ ಚಕ್ಷುರ್ಮಹರ್ಷೀಣಾಂ ಚರಾಶ್ಚಕ್ಷುರ್ಮಹೀಕ್ಷಿತಾಮ್ || || ೭೭ ||**

— ರಾಮಾಯಣಮಂಜರೀ, ಅರಣ್ಯಕಾಂಡ, ೭೪೦

"ಕವಿಗಳಿಗೆ ಪ್ರತಿಭೆಯೇ ಕಣ್ಣು; ಪಂಡಿತರಿಗೆ ಶಾಸ್ತ್ರವು ಕಣ್ಣು ; ಮಹರ್ಷಿಗಳಿಗೆ ಜ್ಞಾನವು ಕಣ್ಣು ; ರಾಜರಿಗೆ ಗೂಢಚಾರರೇ ಕಣ್ಣು."

ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ – ಇವನ್ನು ಜ್ಞಾನೇಂದ್ರಿಯಗಳೆನ್ನುತ್ತಾರೆ. ಸ್ಥೂಲವಾಗಿ ಕಾಣುವ ಇವು ವಾಸ್ತವದಲ್ಲಿ ಇಂದ್ರಿಯಗಳ ಆಧಾರಸ್ಥಾನಗಳು. ಇವುಗಳಲ್ಲಿ ಚಕ್ಷುರಿಂದ್ರಿಯದ (ಕಣ್ಣಿನ) ಪಾತ್ರ ಬಹು ದೊಡ್ಡದು. 'ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ.' ಈ

ಎಲ್ಲ ಇಂದ್ರಿಯಗಳಿಂದಾಗುವ ಜ್ಞಾನವು ಪ್ರತ್ಯಕ್ಷವೇ ಆದರೂ ಕಣ್ಣಿಂದ ನೋಡಿದ್ದು ಪ್ರತ್ಯಕ್ಷವೆಂಬ ರೂಢಿ ಕಣ್ಣಿನ ಪ್ರಾಶಸ್ತ್ಯದಿಂದ ಬಂದದ್ದು. ಈ ಇಂದ್ರಿಯಗಳು ನೇರವಾಗಿ ತಮಗೆ ಸಂಬಂಧ ಹೊಂದಿದ ವಿಷಯಗಳನ್ನು ಮಾತ್ರ ಗ್ರಹಿಸುತ್ತವೆ. ದೂರದಲ್ಲಿರುವ ಮತ್ತು ವ್ಯವಹಿತವಾದ ವಸ್ತುವನ್ನು ಇವು ತಿಳಿಯಲಾರವು.

ಮನಸ್ಸು ಇಂದ್ರಿಯಗಳ ಅಧಿರಾಜ. ಅದು ಇಂದ್ರಿಯಗಳಿಂದ ಕೆಲಸ ಮಾಡಿಸಿ ಅವು ತಂದುಕೊಟ್ಟ ವಸ್ತುಗಳನ್ನಲ್ಲದೆ ಸ್ವತಂತ್ರವಾಗಿಯೂ ವಸ್ತು ವಿಷಯಗಳನ್ನು ಸಂಗ್ರಹಿಸುತ್ತದೆ. ಆಲೋಚಿಸುವುದು, ವಿಕಲ್ಪಿಸುವುದು, ನಿಶ್ಚಯಿಸುವುದು, ಇವೆಲ್ಲ ಮನಸ್ಸಿನ ಕ್ರಿಯೆ. ಕವಿಗಳಲ್ಲಿ ಅದು ಪ್ರತಿಭೆಯಾಗಿ ಪರಿಣಮಿಸುತ್ತದೆ. ಸಂಸ್ಕಾರಗಳಿಂದ ಪರಿಷ್ಕೃತವಾದ ಮನಸ್ಸಿನ ವ್ಯಾಪಾರವೇ ಪ್ರತಿಭೆ. ಅದು ಎಷ್ಟು ಸೂಕ್ಷ್ಮವಾದ ಇಂಗಿತವನ್ನಾದರೂ ಅರಿಯಬಲ್ಲದು.

ಮಹರ್ಷಿಗಳಿಗೆ ಸ್ವತಃಸಿದ್ಧವಾದ ಅಲೌಕಿಕ ಜ್ಞಾನವೇ ಕಣ್ಣು. ಅವರು ಹೇಳಿದುದೇ ಶಾಸ್ತ್ರ. ಮಹರ್ಷಿಗಳು ತತ್ತ್ವದರ್ಶಿಗಳು. ವಿದ್ವಾಂಸರು ತತ್ತ್ವವಾದಿಗಳು, ತತ್ತ್ವದರ್ಶಿಗಳಲ್ಲ. ಕವಿಪ್ರತಿಭೆ ಎಡವೀತು, ಶಾಸ್ತ್ರವು ತೊದಲೀತು, ಋಷಿಗಳ ಜ್ಞಾನವು ಮಾತ್ರ ಅಪ್ರತಿಹತ. ''ಋಷೀಣಾಮಪಿ ಯಜ್ಜ್ಞಾನಂ ತದಪ್ಯಾಗಮಪೂರ್ವಕಂ'' – ''ಋಷಿಗಳ ಜ್ಞಾನವೂ ವೇದಮೂಲ ವಾದದ್ದು'' ಎನ್ನುತ್ತಾನೆ, ಮಹಾದಾರ್ಶನಿಕ ಭರ್ತೃಹರಿ.

ರಾಜ್ಯವಾಳುವವರಿಗೆ ಗೂಢಚಾರರೇ ಕಣ್ಣು. ಸರ್ಕಾರವು ಪ್ರತಿದಿನವೂ ದೇಶವಿದೇಶಗಳ ಆಗುಹೋಗುಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕಾಗುತ್ತದೆ. ಯಾವ ರಾಷ್ಟ್ರವೂ ಅನ್ಯರಾಷ್ಟ್ರವನ್ನು ಪೂರ್ಣವಾಗಿ ನಂಬುವುದಿಲ್ಲ. ಸ್ನೇಹದ ಒಪ್ಪಂದಗಳನ್ನು ಮಾಡಿಕೊಂಡರೂ ಹೃದಯವು ಏನನ್ನೋ ತುಡಿಯುತ್ತಲೇ ಇರುತ್ತದೆ. ಈ ವಿಜ್ಞಾನಯುಗದಲ್ಲಂತೂ ಗುಪ್ತಚಾರ ದಳದ ಕಾರ್ಯಭಾರ ಬಹು ದೊಡ್ಡದು; ಅನಿವಾರ್ಯವಾದದ್ದು. ರಾಜ ಕಾರಣದ ಯಶಸ್ಸು ಬಹುಪಾಲು ಇದನ್ನವಲಂಬಿಸಿರುತ್ತದೆ. ಗುಪ್ತಚಾರ ದಳವಿಲ್ಲದ ರಾಷ್ಟ್ರ ಕುರುಡು.

ನಿತ್ಯಂ ಕೋಪಾತ್ತಪೋ ರಕ್ಷೇತ್ ಶ್ರಿಯಂ ರಕ್ಷೇಚ್ಚ ಮತ್ಸರಾತ್ |
ವಿದ್ಯಾಂ ಮಾನಾವಮಾನಾಭ್ಯಾಮಾತ್ಮಾನಂ ಚ ಪ್ರಮಾದತಃ || || ೭೮ ||

— ಸುಭಾಷಿತಸುಧಾನಿಧಿ

"ಕೋಪದಿಂದ ಕೆಡದಂತೆ ತಪಸ್ಸನ್ನೂ, ಹೊಟ್ಟೆಕಿಚ್ಚಿನಿಂದ ಕೆಡದಂತೆ ಐಶ್ವರ್ಯವನ್ನೂ ಯಾವಾಗಲೂ ರಕ್ಷಿಸಿಕೊಳ್ಳಬೇಕು. ಮಾನಾವಮಾನ ಗಳಿಂದ ಹ್ರಾಸಗೊಳ್ಳದಂತೆ ವಿದ್ಯೆಯನ್ನೂ, ಎಚ್ಚರಗೇಡಿತನದಿಂದ ಹಾಳಾಗದಂತೆ ಆತ್ಮವನ್ನೂ ನೋಡಿಕೊಳ್ಳಬೇಕು."

ತಪಸ್ಸು ಕಷ್ಟಸಾಧ್ಯವಾದದ್ದು. ಇಂದ್ರಿಯಗಳ ಜಯ ಸುಲಭವಲ್ಲ. ಅದಮ್ಯವಾದ ಭೋಗೇಚ್ಛೆಯನ್ನು ಅದುಮಿ ಏಕಾಂತದಲ್ಲಿ ಧ್ಯಾನಾಭ್ಯಾಸದಿಂದ ಸಂಪಾದಿಸಿದ ತಪೋಬಲವು ತಪಸ್ವಿಗಳಿಗೆ ಅಮೂಲ್ಯವಾದದ್ದು, ಸಂಚಿತವಾದ ತಪಃಶಕ್ತಿ ಕೋಪವೆಂಬ ಕಾಲುವೆಯಿಂದ ಹರಿದುಹೋಗುತ್ತದೆ. ಬಹುಕಾಲದಿಂದ ತಡೆಹಿಡಿದ ಮನೋವೃತ್ತಿಯು ಚಿಕ್ಕ ರಂಧ್ರ ಕಾಣಿಸಿದರೂ ರಭಸದಿಂದ ನುಗ್ಗಿಬಿಡುತ್ತದೆ ! ಇದು ಪ್ರಕೃತಿಸಿದ್ಧವಾದ್ದರಿಂದಲೇ 'ನಿತ್ಯಂ ಕೋಪಾತ್ ತಪೋ ರಕ್ಷೇತ್' ಎಂಬ ಹಿತನುಡಿ.

ಐಶ್ವರ್ಯವನ್ನು ಉಳಿಸಿಕೊಳ್ಳಬೇಕಾದರೆ ಅಸೂಯೆಯನ್ನು ಬಿಡಬೇಕು. ತಾನೇನು ಕಡಮೆಯೆಂದು ಇನ್ನೊಬ್ಬರ ಮೇಲಿನ ಅಸೂಯೆಯಿಂದ ಇಲ್ಲದ ಆಡಂಬರ, ಸ್ಪರ್ಧೆ; ಇನ್ನೊಬ್ಬನನ್ನು ಕೆಳಗಿಳಿಸಬೇಕೆಂಬ ಛಲ; ಕೋರ್ಟು ಕಛೇರಿಗಳನ್ನು ಹತ್ತುವುದು, ದುರ್ವ್ಯಾಜ್ಯಗಳು - ಹೀಗೆ ಹಣವನ್ನು ಪೋಲು ಮಾಡುವುದರ ಮೂಲದಲ್ಲಿ ಅಸೂಯೆ ಕುಳಿತಿರುತ್ತದೆ.

ವಿದ್ಯೆಯನ್ನು ಮಾನಾವಮಾನಗಳಿಗೆ ಅಳುಕದೆ ರಕ್ಷಿಸಿಕೊಳ್ಳಬೇಕು. ಮಾನವೆಂದರೆ ಸಂಮಾನ, ಗೌರವ, ಕೀರ್ತಿಲಾಭ. ಇದಕ್ಕೆ ಆಶಿಸಿದಾಗ ವಿದ್ಯೆಯ ಪರಮಫಲವಾದ ವಿನಯ ಹಿಮ್ಮೆಟ್ಟುತ್ತದೆ. ವಿನಯವೆಂದರೆ ಒಳ್ಳೆಯ ನಡವಳಿಕೆ. ಅದೇ ವಿದ್ಯೆಗೆ ಭೂಷಣ. ವಿದ್ಯಾವಂತನನ್ನು ಕೀರ್ತಿ ಹಿಂಬಾಲಿಸಬೇಕೇ ಹೊರತು ಈತನೇ ಕೀರ್ತಿಯನ್ನರಸಬಾರದು. ಇನ್ನೊಬ್ಬರಿಗೆ ಅವಮಾನವಾಗದಂತೆ ನಡೆದರೆ ವಿದ್ಯೆಗೆ ಭೂಷಣ. ಅಲ್ಲದೆ ವಿದ್ಯಾರ್ಥಿ

ಯಾದವನು ಮಾನಕ್ಕೆ ಹಿಗ್ಗದೆ ಅವಮಾನಕ್ಕೆ ಜಗ್ಗದೆ ಸತತ ಅಭ್ಯಾಸದಲ್ಲಿ ತೊಡಗಿದರೆ ಮಾತ್ರ ವಿದ್ಯಾದೇವತೆ ಅವನಿಗೆ ಒಲಿಯುವಳು.

ಶರೀರವು ಆತ್ಮನ ಉತ್ಕರ್ಷಕ್ಕೂ ಸಹಕಾರಿ, ಅಪಕರ್ಷಕ್ಕೂ ಸಹಕಾರಿ. 'ಶರೀರಮಾದ್ಯಂ ಖಲು ಧರ್ಮಸಾಧನಂ'. ಅದೇ ಶರೀರವು ಸ್ವಾರ್ಥ ಪ್ರಯುಕ್ತವಾದಾಗ, ಇಂದ್ರಿಯಲೋಲುಪತೆಗೆ ಮರುಳಾದಾಗ ಅಧರ್ಮ ಸಾಧನವೂ ಆಗುತ್ತದೆ. ತಪಸ್ಸು, ಐಶ್ವರ್ಯ, ವಿದ್ಯೆ – ಇವು ಶರೀರದಿಂದಲೇ ಲಭ್ಯವಾಗತಕ್ಕವು. ಸರಿಯಾಗಿ ಇವುಗಳ ವಿನಿಯೋಗವಾದಲ್ಲಿ ಇವೇ ಆತ್ಮನ ಉತ್ಕರ್ಷಕ್ಕೆ ಕಾರಣಗಳಾಗುತ್ತವೆ. ಪ್ರಮಾದದಿಂದ ಇವುಗಳನ್ನು ತಪ್ಪು ದಾರಿಯಲ್ಲಿ ವಿನಿಯೋಗಿಸಿದಾಗ ಇವೇ ಆತ್ಮನನ್ನು ಕೊರಕಲಿಗೆ ತಳ್ಳುತ್ತವೆ. ಆತ್ಮನು ತನ್ನ ಉತ್ಕರ್ಷಕ್ಕಾಗಿ ಹೊತ್ತುತಂದ ಶರೀರ ಮನಸ್ಸುಗಳೇ ಪ್ರಮಾದವೆಸಗಿದರೆ, ಇವನನ್ನು ಅವು ಜಜ್ಜಿಬಿಡುತ್ತವೆ.

**ದರಿದ್ರೋ ಯಸ್ತ್ವಸಂತುಷ್ಟಃ ಕೃಪಣೋ ಯೋಽಜಿತೇಂದ್ರಿಯಃ |**
**ಗುಣೇಷ್ವಸಕ್ತಧೀರೀಶೋ ಗುಣಸಂಗೋ ವಿಪರ್ಯಯಃ || || ೭೯ ||**

— ಭಾಗವತ, ೧೧-೧೯-೪೪

"ಯಾವನಿಗೆ ತೃಪ್ತಿಯಿಲ್ಲವೋ ಅವನೇ ದರಿದ್ರ; ಯಾವನು ಇಂದ್ರಿಯಗಳನ್ನು ಗೆದ್ದಿಲ್ಲವೋ ಅವನು ಜಿಪುಣ, ದೀನ. ಇಂದ್ರಿಯ ವಿಷಯಗಳಲ್ಲಿ ಆಸಕ್ತಿ ಇಲ್ಲದವನು ನಿಜವಾಗಿ ಶಕ್ತ. ಅವುಗಳಲ್ಲಿ ಆಸಕ್ತಿಯೇ ಅಶಕ್ತತೆ."

ನಾವು ಬಡತನವನ್ನು ಹಣದ ದೃಷ್ಟಿಯಿಂದ ಅಳೆಯಲು ಯತ್ನಿಸುತ್ತೇವೆ. ಇಷ್ಟು ಆದಾಯಕ್ಕಿಂತ ಕಡಮೆ ಇದ್ದಲ್ಲಿ ಅವನು ಬಡವ – ಎಂದು ಗೆರೆಯನ್ನು ಎಳೆದು ತೋರಿಸುತ್ತಾರೆ. ಅದು ಸ್ಥಿರವಾದ ರೇಖೆಯಲ್ಲ. ಹಣದಿಂದ ಶಾಂತಿ, ಸಂತುಷ್ಟಿ, ಸಂತೃಪ್ತಿಗಳು ಲಭಿಸುತ್ತವೆ ಎಂದು ನಂಬಿದವರ ಲೆಕ್ಕಾಚಾರ ಅದು. ಆದರೆ ನಿರ್ಧನನು ಶಾಂತಿಯಿಂದ ನಿದ್ರಿಸುತ್ತಿದ್ದರೆ ಧನಿಕರನು ನಿದ್ರೆಯಿಲ್ಲದೆ ತೊಳಲಾಡುತ್ತಿರುತ್ತಾನೆ. ತೃಪ್ತಿ ಹಣದಿಂದ

ಬರತಕ್ಕದ್ದಲ್ಲ. ಅದು ಮನಸ್ಸಿನ ಒಂದು ಸ್ಥಿತಿ. ಅದು ಪುಣ್ಯಾತ್ಮರಿಗೆ ಲಭ್ಯವಾದದ್ದು.

ಯಾವನು ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿಲ್ಲವೋ ಅವನು ಕೃಪಣ – ಜಿಪುಣ, ದೀನ. ಜಿಪುಣನಿಗೆ ಇದ್ದದ್ದು ಪೂರ್ತಿಯಾಗಿ ಉಳಿದಿರಬೇಕು, ಹೊಸದು ಬಂದು ಸೇರುತ್ತಿರಬೇಕು – ಎಂಬ ಹಂಬಲವಿರುತ್ತದೆ. ಇಂದ್ರಿಯಲೋಲುಪನಿಗೂ ಅಷ್ಟೆ. ಇರುವ ಭೋಗವಸ್ತುಗಳಲ್ಲೊಂದನ್ನೂ ಅವನು ಬಿಡಲಾರ. ಇನ್ನೂ ಹೊಸದು ಬೇಕೆಂದು ಹಾತೊರೆಯುತ್ತಾನೆ. ಈತನು ಒಂದು ದೃಷ್ಟಿಯಲ್ಲಿ ದೀನನೇ, ಹೊಸದಕ್ಕಾಗಿ ಹಲ್ಲುಗಿಂಜಿಸುವುದು ಇವನಿಗೆ ತಪ್ಪುವುದಿಲ್ಲ. 'ಯಾರಿಗೂ ನಾನು ಬಗ್ಗತಕ್ಕವನಲ್ಲ' ಎಂದು ಕೊಬ್ಬಿನ ಮಾತಾಡುತ್ತಿದ್ದ ರಾವಣ – 'ಸೀತೆ, ನಿನ್ನ ಕಾಲಿಗೆ ಬಿದ್ದು ಬೇಡಿಕೊಳ್ಳುತ್ತಿದ್ದೇನೆ, ನನ್ನ ಇಷ್ಟವನ್ನು ನಡೆಸಿಕೊಡು' ಎಂದು ದೈನ್ಯದಿಂದ ಅಂಗಲಾಚುತ್ತಾನೆ ! ಲಂಕೇಶ್ವರನಿಗೆ ಭೋಗಲಂಪಟತೆಯಿಂದಾದ ಅಧಃಪಾತ ಇದು. ತನ್ನ ಮನಸ್ಸಿನ ಮೇಲೆ ಪ್ರಭುತ್ವವನ್ನು ಸಾಧಿಸಿಕೊಂಡವನಿಗೆ ಯಾರ ಹಂಗೂ ಇಲ್ಲ. ಅವನೇ ಸಮರ್ಥ; ಪ್ರಭು.

ಮನಸ್ಸಿನ ದೊಡ್ಡತನವೇ ಸಿರಿವಂತಿಕೆ. ಈ ದೊಡ್ಡತನವಿದ್ದಾಗ ಅದು ಶಾಂತವಾಗಿದ್ದು ಸಂತೋಷದಿಂದ ಸಂತೃಪ್ತವಾಗಿರುತ್ತದೆ; ದೈವಸೃಷ್ಟಿಯ ಒಂದೊಂದು ಕಣದಲ್ಲಿಯೂ ಆನಂದದ ನೆಲೆಯನ್ನು ಗುರುತಿಸುತ್ತದೆ :

ಬಡವನಾರ್ ? ಮಡದಿಯೊಲವಿನ ಸವಿಯನರಿಯದನು
ಹುಡುಗರಾಟದಿ ಬೆರೆತು ನಗಲರಿಯದವನು |
ಉಡುರಾಜನೋಲಗದಿ ಕುಳಿತು ಮೈಮರೆಯದನು
ಬಡಮನಸೆ ಬಡತನವೊ – ಮರುಳ ಮುನಿಯ ||

ನಾಲಂಬತೇ ದೈಷ್ಟಿಕತಾಂ ನ ನಿಷೀದತಿ ಪೌರುಷೇ |
ಶಬ್ದಾರ್ಥೌ ಸತ್ಕವಿರಿವ ದ್ವಯಂ ವಿದ್ವಾನಪೇಕ್ಷತೇ || || ೮೦ ||

— ಶಿಶುಪಾಲವಧ, ೨-೮೬

"ವಿದ್ವಾಂಸನಾದವನು ದೈವವೊಂದನ್ನೇ ಆಶ್ರಯಿಸುವುದಿಲ್ಲ. ಪುರುಷ ಪ್ರಯತ್ನವೊಂದನ್ನೇ ನಂಬುವುದೂ ಇಲ್ಲ. ಉತ್ತಮ ಕವಿಯು ಕಾವ್ಯರಚನೆಗೆ ಶಬ್ದ-ಅರ್ಥಗಳೆರಡನ್ನೂ ಅಪೇಕ್ಷಿಸುವಂತೆ, ಈತನು ದೈವ-ಪೌರುಷಗಳೆರಡನ್ನೂ ಬಯಸುತ್ತಾನೆ."

ಭೋಜರಾಜನು ಕವಿಗಳಿಗೆ ಒಳ್ಳೆಯ ಪುರಸ್ಕಾರವನ್ನು ನೀಡುತ್ತಾನೆಂದು ಪ್ರಸಿದ್ಧಿ ಇತ್ತು. ಕೆಲವು ವೈದಿಕ ಪಂಡಿತರು ರಾಜನಿಂದ ಬಹುಮಾನವನ್ನು ಗಿಟ್ಟಿಸಬೇಕೆಂಬ ಚಾಪಲ್ಯದಿಂದ ರಾಜಧಾನಿಗೆ ಬಂದು ಒಂದು ದೇವಸ್ಥಾನದಲ್ಲಿ ಸೇರಿದರು. ಬಹಳ ಹೊತ್ತು ಕಷ್ಟಪಟ್ಟು ಶ್ಲೋಕದ ಅರ್ಧಭಾಗವನ್ನು ರಚಿಸಿದರು :-

**ಭೋಜನಂ ದೇಹಿ ರಾಜೇಂದ್ರ ಘೃತಸೂಪಸಮನ್ವಿತಂ ||**

('ರಾಜೇಂದ್ರ, ತುಪ್ಪ ತೊವ್ವೆಗಳಿಂದ ಕೂಡಿದ ಊಟವನ್ನು ನೀಡು !')

ಶ್ಲೋಕವನ್ನು ಪೂರೈಸಲು ಎಷ್ಟು ಪ್ರಯತ್ನಿಸಿದರೂ ಅವರಿಗೆ ಸಾಧ್ಯವಾಗಲಿಲ್ಲ. ಆಗ ದೇವದರ್ಶನಕ್ಕಾಗಿ ಕಾಳಿದಾಸನು ಅಲ್ಲಿಗೆ ಬಂದವನು ಈ ವೈದಿಕರ ಕಷ್ಟವನ್ನರಿತು ಶ್ಲೋಕವನ್ನು ಹೀಗೆ ಪೂರೈಸಿಕೊಟ್ಟನಂತೆ :

**ಮಾಹಿಷಂ ಚ ಶರಚ್ಚಂದ್ರ-ಚಂದ್ರಿಕಾ-ಧವಲಂ ದಧಿ ||**

('ಶರತ್ಕಾಲದ ಚಂದ್ರನ ಬೆಳದಿಂಗಳಂತೆ ಬೆಳ್ಳಗಿರುವ ಎಮ್ಮೆ ಮೊಸರನ್ನು ನಮಗೆ ನೀಡು.')

ಮರುದಿನ ವೈದಿಕರು ಆಸ್ಥಾನಕ್ಕೆ ಹೋಗಿ ಈ ಕವಿತೆಯನ್ನು ಪಠಿಸಿದಾಗ, ಭೋಜರಾಜನು, 'ಈ ಶ್ಲೋಕದ ಎರಡನೆಯ ಸಾಲಿಗೆ ಬಹುಮಾನವನ್ನು ನೀಡುತ್ತೇನೆ. ಮೊದಲನೆಯ ಸಾಲಿಗೆ ಏನೂ ಇಲ್ಲ !' ಎಂದನಂತೆ.

ಶಬ್ದಾರ್ಥಗಳೆರಡೂ ಸಾರವತ್ತಾಗಿ ಹೊಂದಿಕೊಳ್ಳದಿದ್ದಲ್ಲಿ ಕವಿತೆಯಾಗದು. ಹಾಗೆಯೇ ದೈವ-ಪೌರುಷಗಳೆರಡೂ ಕೂಡದಿದ್ದಲ್ಲಿ ಕಾರ್ಯವಾಗದು. ಈ ದೈವ-ಪೌರುಷಗಳು ಪಕ್ಷಿಗೆ ಎರಡು ರೆಕ್ಕೆಗಳಿದ್ದಂತೆ; ರಥಕ್ಕೆ

ಎರಡು ಗಾಲಿಗಳಿದ್ದಂತೆ. ಪಕ್ಷಿ ಒಂದು ರೆಕ್ಕೆಯಿಂದ ಹಾರಲಾರದು. ಒಂದು ಗಾಲಿಯಿಂದ ರಥ ಸಾಗದು. 'ವಿಧಿರಹೋ ಬಲವಾನಿತಿ ಮೇ ಮತಿಃ' ಎಂದು ದೈಲಬಲವನ್ನು ಹೊಗಳುವ ಮಾತುಗಳಿಗೆ, ಕಾರ್ಯಸಿದ್ಧಿಯಾಗಲು ದೈವಬಲವೂ ಬೇಕು ಎಂದು ತಾತ್ಪರ್ಯ. ಪುರುಷಪ್ರಯತ್ನವನ್ನು ನಿಂದಿಸುವ ಅಭಿಪ್ರಾಯ ಇದಲ್ಲ. ಹಾಗೆಯೇ 'ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ' ಎಂದು ದೈವಬಲವನ್ನು ಧಿಕ್ಕರಿಸುವ ಮಾತುಗಳಿಗೆ ಪುರುಷಪ್ರಯತ್ನದ ಆವಶ್ಯಕತೆಯನ್ನು ತೋರಿಸುವುದರಲ್ಲಿ ತಾತ್ಪರ್ಯ.

**ಯತ್ರ ಭಾರ್ಯಾ ಗಿರೋ ವೇದಾಃ ಯತ್ರ ಧರ್ಮೋಽರ್ಥಸಾಧನಮ್ |**
**ಯತ್ರ ಸ್ವಪ್ರತಿಭಾ ಮಾನಂ ತಸ್ಮೈ ಶ್ರೀಕಲಯೇ ನಮಃ || || ೮೧ ||**

— ಕಲಿವಿಡಂಬನ, ೧೦೦

"ಕಲಿಯುಗದಲ್ಲಿ ಮಡದಿಯ ಮಾತುಗಳೇ ವೇದಗಳು ; ಧರ್ಮವು ಧನಸಂಪಾದನೆಯ ಮಾರ್ಗ; ಕಾರ್ಯನಿಶ್ಚಯದಲ್ಲಿ ತನ್ನ ಬುದ್ಧಿ ಯೊಂದೇ ಪ್ರಮಾಣ. ಆ ಕಲಿಮಹಾತ್ಮನಿಗೆ ನಮಸ್ಕಾರ !"

ಹೆಂಡತಿಯ ಮಾತನ್ನೇ ನಂಬಿ ಹಾಗೆಯೇ ನಡೆಯತಕ್ಕವರು ಇದ್ದಾರೆಂಬುದು ಹೊಸದೇನಲ್ಲ. ಯಾವ ವಿಚಾರವನ್ನೂ ಮಾಡದೆ ಅವಳ ಮಾತಿನಂತೆ ನಡೆಯುತ್ತ ತಾಯಿತಂದೆಗಳನ್ನು ತೊರೆದಿರುವ, ಒಡಹುಟ್ಟಿದವರನ್ನು ಬಳಿಗೆ ಸೇರಿಸದ ಜನರು ಇಂದು ಇದ್ದಾರೆ. ಹೆಂಡತಿಯ ಎಲ್ಲಾ ಮಾತುಗಳನ್ನೂ ತಿರಸ್ಕರಿಸಬೇಕೆಂಬುದು ಇದರ ಅರ್ಥವಲ್ಲ. ಎಂತಹ ವಿಚಾರಿಗಳೂ ಭಾರ್ಯಾವಶ್ಯರಾಗಿಬಿಡುತ್ತಾರೆಂದು ಈ ನುಡಿ ತಿಳಿಸುತ್ತದೆ.

ಧರ್ಮವು ಧನಸಂಪಾದನೆಗೆ ಒಂದು ಸುಲಭ ಮಾರ್ಗವಾಗಿದೆ. ಧರ್ಮದ ಅನುಷ್ಠಾನವು ತನ್ನ ಶ್ರೇಯಸ್ಸಿಗೆ ಕಾರಣ, ಜೀವೋತ್ಕರ್ಷಕ್ಕೆ ಸಾಧನ – ಎಂಬುದು ಮರೆತುಹೋಗಿದೆ. ಯಾತ್ರೆ, ದೇವಸ್ಥಾನದ ಜೀರ್ಣೋದ್ಧಾರ, ಗಣೇಶೋತ್ಸವ ಮುಂತಾದ ಹಲವಾರು ನೆಪಗಳಿಂದ ಹಣವೆತ್ತಿ ತಿಂದುಹಾಕ ತಕ್ಕವರು ಕಡಮೆ ಏನಿಲ್ಲ. ಇವರೆಲ್ಲ ಅರೆಬುದ್ಧಿಯವರು. ಇವರಿಗಿಂತ

ಪಟುಬುದ್ಧಿಗಳಾದ ವಿದ್ಯಾವಂತರಿದ್ದಾರೆ. ಅವರು ಅನಾಥವಿದ್ಯಾರ್ಥಿನಿಲಯ. ದೀನಜನ ಕಲ್ಯಾಣ ಸಂಘ ಕಟ್ಟಿಕೊಂಡು ಆಧುನಿಕ ರೀತಿಯಿಂದ ಹಣವನ್ನು ಸೆಳೆಯುತ್ತಾರೆ. ಬೂಟಾಟಿಕೆಯ ಸಾಧುಗಳೂ ಸಂನ್ಯಾಸಿಗಳೂ ಬಹುಸಂಖ್ಯೆಯಲ್ಲಿದ್ದಾರೆ.

ಇದು ವಿಜ್ಞಾನಯುಗ. ಸ್ವತಂತ್ರ ವಿಚಾರಿಗಳು ನಾವು; ಪ್ರತ್ಯಕ್ಷವಾದ್ದನ್ನು ಮಾತ್ರ ನಂಬಬಹುದು; ನಮ್ಮ ಬುದ್ಧಿಗೆ ಸರಿದೋರಿದಂತೆ ಮಾಡುತ್ತೇವೆ; ಅಜ್ಜ ನೆಟ್ಟ ಆ ಧರ್ಮವನ್ನು ಆಶ್ರಯಿಸತಕ್ಕವರಲ್ಲ ನಾವು – ಎನ್ನುತ್ತೇವೆ. ಆದರೆ ಅಜ್ಜನು ನೆಟ್ಟದ್ದು ಮಾವಿನಮರವಾದರೆ ಹಣ್ಣುಗಳು ಬೇಕೆನ್ನುತ್ತೇವೆ; ಅಜ್ಜನು ನೆಟ್ಟ ತೆಂಗಿನಮರದಿಂದ ತೆಂಗಿನಕಾಯಿಗಳನ್ನಿಳಿಸುತ್ತೇವೆ. ದೇಶಾಂತರ ವಾರ್ತೆಗಳೂ, ಇತಿಹಾಸಕಾರರ ವಚನಗಳೂ, ವಿಜ್ಞಾನಿಗಳ ಲೆಕ್ಕಾಚಾರಗಳೂ, ವೈದ್ಯರು ಹೇಳುವ ರೋಗ ಕಾರಣಗಳೂ ಪ್ರತ್ಯಕ್ಷವಲ್ಲದಿದ್ದರೂ ನಂಬುತ್ತೇವೆ. ಆದರೆ ಇವು ಪ್ರತ್ಯಕ್ಷಯೋಗ್ಯವಾದವು. ಬೇರೆ ಬೇರೆ ಸಾಧನಗಳಿಂದ ಇವೆಲ್ಲವನ್ನೂ ಪ್ರಮಾಣೀಕರಿಸಲು ಸಾಧ್ಯ – ಎಂದು ತಿಳಿಯುತ್ತೇವೆ. ಹಾಗೆಯೇ ಮಹಾತ್ಮರು ಸ್ವಾನುಭವದಿಂದ ಹೇಳಿದ ಪರಮಾರ್ಥ ವಿಷಯವನ್ನು ಮಾತ್ರ ಪ್ರತ್ಯಕ್ಷಯೋಗ್ಯವೆಂದು ನಂಬುವುದಿಲ್ಲ. ಅದಕ್ಕೆ ಹೇಳಿದ ಸಾಧನ ಸಂಪತ್ತುಗಳನ್ನು ಗಳಿಸಿಕೊಂಡು ಪ್ರಮಾಣೀಕರಿಸಲು ಸಾಧ್ಯವೆಂದರೆ ಒಪ್ಪುವುದಿಲ್ಲ. ಇದು ಕಲಿಯುಗದ ಮಹಿಮೆ !

ಯಾವದ್ ಭ್ರಿಯೇತ ಜಠರಂ ತಾವತ್ ಸ್ವತ್ವಂ ಹಿ ದೇಹಿನಾಮ್ |
ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ || || ೮೨ ||

— ಭಾಗವತ, ೭-೧೪-೮

''ಹೊಟ್ಟೆ ತುಂಬುವುದಕ್ಕೆ ಎಷ್ಟು ಬೇಕೋ ಅಷ್ಟುಮಾತ್ರ ಮಾನವರ ಸ್ವತ್ತು. ಅದಕ್ಕಿಂತ ಹೆಚ್ಚಾಗಿ ಬೇಕೆನ್ನತಕ್ಕವನು ಕಳ್ಳ. ಅವನಿಗೆ ಶಿಕ್ಷೆಯನ್ನು ವಿಧಿಸಬೇಕು.''

''ಈ ಜಗತ್ತೆಲ್ಲ ಈಶ್ವರನಿಂದ ವ್ಯಾಪ್ತವಾಗಿದೆ. ತ್ಯಾಗದಿಂದ ನಿನ್ನ ಆತ್ಮವನ್ನು ರಕ್ಷಿಸಿಕೊ, ದುರಾಸೆಪಡಬೇಡ. ಈ ಧನವೆಲ್ಲ ಈಶ್ವರನದು.

ಬೇರೆ ಯಾರದ್ದೂ ಅಲ್ಲ'' ಎನ್ನುತ್ತದೆ ಈಶಾವಾಸ್ಯೋಪನಿಷತ್ತು. ಧನಶಬ್ದ ದಿಂದ ಧಾನ್ಯ ಶಬ್ದ ಹುಟ್ಟಿದೆ. ಆದರಿಂದ ನಿಜವಾದ ಧನವನ್ನು ಎಂದರೆ ಧಾನ್ಯದವಸಗಳನ್ನು ಕೊಳ್ಳಲಾದೀತು. ನೋಟುಗಳನ್ನೋ ರೂಪಾಯಿಗಳನ್ನೋ ನಾವು ಸಾಕ್ಷಾತ್ತಾಗಿ ತಿನ್ನಲಾರೆವು, ಇನ್ನಾವ ರೀತಿಯಿಂದಲೂ ಅನುಭವಿಸಲಾರೆವು. ನೆಲ, ನೀರು, ಬೆಂಕಿ, ಗಾಳಿ, ಅನ್ನ ಎಲ್ಲವೂ ಈಶ್ವರನಿಂದ ಜೀವರ ಭೋಗಕ್ಕಾಗಿ ನಿರ್ಮಿತವಾದವು. ನಮಗೆ ಆವಶ್ಯಕವಾದಷ್ಟನ್ನು ಮಾತ್ರ ತೆಗೆದುಕೊಳ್ಳಲು ನಮಗೆ ಅಧಿಕಾರವನ್ನು ಈಶ್ವರನು ನೀಡಿದ್ದಾನೆ. ರೈಲ್ವೆ ಪ್ರಯಾಣಕ್ಕಾಗಿ ಕೊಂಡ ಟಿಕೆಟ್ಟು ರೈಲಿನಲ್ಲಿ ಪ್ರಯಾಣ ಮಾಡಲು ಅಧಿಕಾರ ನೀಡುತ್ತದೆ. ಒಬ್ಬನಿಗೆ ಬೇಕಾದಷ್ಟು ಸ್ಥಳವನ್ನು ಮಾತ್ರ ಅವನು ಆಕ್ರಮಿಸಬಹುದೇ ಹೊರತು, ಅಧಿಕವಾದ ಸ್ಥಳವನ್ನಲ್ಲ.

ವ್ಯಾಕರಣ ಮಹಾಭಾಷ್ಯದಲ್ಲಿ ಪತಂಜಲಿಮುನಿಗಳು ಶಿಷ್ಟರ ಲಕ್ಷಣಗಳನ್ನು ಒಂದು ಕಡೆ ಹೇಳಿದ್ದಾರೆ. ಶಿಷ್ಟರೆಂದರೆ ಶಾಸ್ತ್ರೀಯ ಧರ್ಮ ಮಾರ್ಗದಲ್ಲಿ ನಡೆಯತಕ್ಕ ಸಜ್ಜನರು. ಶಿಷ್ಟರು 'ಕುಂಡೀಧಾನ್ಯರು' ಎಂಬುದು ಲಕ್ಷಣಗಳಲ್ಲೊಂದು. ಕುಂಡೀ ಎಂದರೆ ಧಾನ್ಯವನ್ನು ಅಳತೆಮಾಡುವ ಕೊಳಗ. ಒಬ್ಬನಿಗೆ ಮೂರು ದಿನಗಳಿಗೆ ಬೇಕಾದಷ್ಟು ಧಾನ್ಯ ಮಾತ್ರ ಆ ಕೊಳಗದಲ್ಲಿ ಹಿಡಿಸುತ್ತದೆ. ಯಾರ ಮನೆಯಲ್ಲಿ ಮೂರು ದಿನಗಳಿಗೆ ಬೇಕಾಗುವಷ್ಟು ಮಾತ್ರ ಧಾನ್ಯದ ಸಂಗ್ರಹವಿದೆಯೋ ಅವರು ಶಿಷ್ಟರು, ಅವರು ಲೋಕಮಾನ್ಯರು. ಹೆಚ್ಚು ಸಂಗ್ರಹ ಮಾಡಿಕೊಂಡವರು ಅಶಿಷ್ಟರು, ದುರ್ಜನರು ಎಂದರ್ಥ.

ಒಬ್ಬ ಮನುಷ್ಯನಿಗೆ ದಕ್ಕುವ ನೆಲ (ಸಮಾಧಿ ಮಾಡಿದಾಗ) ೩ ಅಡಿ ಅಗಲ, ೬ ಅಡಿ ಉದ್ದ, ೬ ಅಡಿ ಘಾತದಷ್ಟು ಮಾತ್ರ ಎಂದು ಟಾಲ್‌ಸ್ಟಾಯ್ ಅವರ ಕಥೆಯೊಂದು ತಿಳಿಸುತ್ತದೆ. "ನೂರು ಹಸುಗಳಿದ್ದರೂ ಒಂದು ಹಸುವಿನ ಹಾಲು ನಮಗೆ ಯಥೇಷ್ಟವಾಯಿತು. ಕಣಜದ ತುಂಬ ಧಾನ್ಯ ವಿದ್ದರೂ ಬಳಸುವುದು ಒಂದು ಪಾವು ಅಕ್ಕಿಯನ್ನು. ದೊಡ್ಡ ಅರಮನೆಯೇ ಇದ್ದರೂ ಒಂದು ಕೋಣೆಯ ಒಂದು ಮಂಚದ ಅರ್ಧಭಾಗವನ್ನು ಮಾತ್ರ ಬಳಸುತ್ತೇವೆ. ಉಳಿದ ಐಶ್ವರ್ಯವೆಲ್ಲ ಇತರರದ್ದು'' ಎಂದು ಮಹಾ

ಭಾರತದಲ್ಲಿ ಹೇಳಿದೆ. ಇದಕ್ಕಿಂತ ಹೆಚ್ಚಿನ ಸಮತಾವಾದದ ಸೂತ್ರವಾದರೂ ಯಾವುದು ?

**ಯೇನಾಸ್ಯ ಪಿತರೋ ಯಾತಾ ಯೇನ ಯಾತಾ ಪಿತಾಮಹಾಃ |**
**ತೇನ ಯಾಯಾತ್ ಸತಾಂ ಮಾರ್ಗಂ ತೇನ ಗಚ್ಛನ್ ನ ರಿಷ್ಯತೇ |||| ೮೩ ||**

— ಮನುಸ್ಮೃತಿ, ೪-೧೭೮

“ತನ್ನ ತಂದೆ–ತಾಯಿ, ಅಜ್ಜ-ಮುತ್ತಜ್ಜ ಮುಂತಾದ ಪೂರ್ವಜರು ಧರ್ಮಮಾರ್ಗವನ್ನು ಯಾವ ಕ್ರಮದಿಂದ ಹಿಡಿದು ಹೋದರೋ ಆ ಕ್ರಮದಿಂದಲೇ ಹೋಗಬೇಕು. ಅದನ್ನು ಹಿಡಿದರೆ ಆತನಿಗೆ ಕೆಡಕು ಸಂಭವಿಸುವುದಿಲ್ಲ.”

ನಮಗೆ ಪುಣ್ಯದ ಫಲ ಬೇಕು, ಪುಣ್ಯಕಾರ್ಯ ಮಾತ್ರ ಸಾಧ್ಯವಿಲ್ಲ. ಪಾಪದ ಫಲ ಬೇಡ, ಆದರೆ ಪಾಪಕಾರ್ಯಕ್ಕೆ ಹಿಂಜರಿಯುವುದಿಲ್ಲ. ಅಸತ್ಯ ಅನ್ಯಾಯಗಳಿಗೆ ಒಂದು ದೊಡ್ಡ ಬೆಲೆ ದೊರಕುತ್ತಿರುವುದನ್ನು ಜನರು ನೋಡುತ್ತಿರುತ್ತಾರೆ. “ಈ ಕಾಲದಲ್ಲಿ ಸತ್ಯ–ನ್ಯಾಯಗಳಿಗೆ ಬೆಲೆ ಇಲ್ಲ. ಅದನ್ನು ನಂಬಿದರೆ ಯಾರಿಗೂ ಮುಂದೆ ಬರಲು ಸಾಧ್ಯವಿಲ್ಲ” ಎಂಬ ಹೇಳಿಕೆ ಎಲ್ಲೆಲ್ಲಿಯೂ ಕೇಳಿಬರುತ್ತಿದೆ. ಇದಕ್ಕೆ ಅನುಗುಣವಾದ ಸಾಹಿತ್ಯವೂ ಇಂದು ಹೊರೆಹೊರೆಯಾಗಿ ಬೆಳೆಯುತ್ತಿದೆ. ಅಂತಹ ಸಾಹಿತ್ಯಕ್ಕೆ ಪ್ರೋತ್ಸಾಹವೂ ಅಧಿಕ. ಸಾಹಿತಿಗಳ ಸಾಹಿತ್ಯ, ಶಾಸನಕರ್ತರಾದ ರಾಜಕೀಯಸ್ಥರ ನಡವಳಿಕೆ ಇವುಗಳಿಂದ ಯುವಜನಾಂಗವು ಪ್ರಚೋದಿತವಾಗುತ್ತಿದೆ. ಆಡಳಿತ ನಿರ್ವಹಿಸತಕ್ಕವರು ಈ ಅಧರ್ಮದ ಬಾವುಟವನ್ನು ಎಳೆದು ಏರಿಸುತ್ತಿದ್ದಾರೆನ್ನುವುದು ಗಾಬರಿ ಹುಟ್ಟಿಸುವ ಸಂಗತಿ. ಗಾಂಧಿ ಹಿಡಿದ ಸತ್ಯಮಾರ್ಗ ಬೇಡ, ಗಾಂಧಿಯಿಂದ ಬಂದ ಸ್ವಾತಂತ್ರ್ಯದ ಫಲವನ್ನು ಯಥಾಶಕ್ತಿ ದೋಚೋಣ– ಎನ್ನುತ್ತಾರೆ ಈ ಜನ. ‘ಅಜ್ಜ ನೆಟ್ಟ ಮಾವಿನಮರವೆಂದು ತಬ್ಬಿಕೊಳ್ಳಬೇಡ, ಮೈ ತರೆದೀತು. ಹಣ್ಣನ್ನು ಮಾತ್ರ ಉದುರಿಸಿ ಧಾರಾಳವಾಗಿ ತಿನ್ನು’ ಎನ್ನುವ

ಇವರಿಗೆ ಮನು ಹೇಳುತ್ತಾನೆ – "ಅಯ್ಯ, ಅಜ್ಜ ನೆಟ್ಟಂತೆ ನೀವೂ ಮಾವಿನ ಮರವನ್ನು ನೆಡಿರಿ" ಎಂದು.

ಧರ್ಮಮಾರ್ಗದಲ್ಲಿ ನಡೆಯಬೇಕೆಂದಿರುವ ಶ್ರದ್ಧಾಳುಗಳಿಗೆ ಯಾವ ಮಾರ್ಗ ಸರಿ, ಯಾವ ಮಾರ್ಗ ತಪ್ಪು ಎಂಬ ಧರ್ಮಸಂಕಟದ ಪ್ರಶ್ನೆ ತಲೆಯೆತ್ತುತ್ತದೆ. ಆಗ ನಮಗೆ ತೋರಿದಂತೆ ನೂತನ ಪ್ರಯೋಗವನ್ನು ಮಾಡುವುದು ಅಪಾಯಕಾರಿ. ಅಂತಹ ಸಂದರ್ಭದಲ್ಲಿ 'ನಿಮ್ಮ ಪೂರ್ವಜರು ಹಿಡಿದ ದಾರಿ ನಿಮಗೆ ಶ್ರೇಯಸ್ಕರ' ಎಂದು ಮನುವಿನ ಹಿತವಚನ. 'ಸ್ವಧರ್ಮೇ ನಿಧನಂ ಶ್ರೇಯಃ' ಎಂದು ಅರ್ಜುನನಿಗೆ ಕೃಷ್ಣ ಬೋಧಿಸಿದ್ದೂ ಇದನ್ನೇ. 'ಏವಂ ಪೂರ್ವೈರ್ಗತೋ ಮಾರ್ಗಃ ಪಿತೃಪೈತಾಮಹೋ ಧ್ರುವಃ' ಎಂದು ಶ್ರೀರಾಮ ರಾಜ್ಯವನ್ನು ಬಿಟ್ಟು ವನವಾಸವನ್ನೇ ಆರಿಸಿದ್ದು ಇದೇ ಕಾರಣಕ್ಕಾಗಿ.

**ಕಿಂಚಿತ್ ಕಾಂತಾಽನ್ನಪಾನಾದಿ ಕಲಿಲಂ ಕೋಮಲಂ ಗೃಹೇ |**
**ವ್ರಣೇ ಕೀಟ ಇವಾಸ್ವಾದ್ಯ ವಯಃ ಕಾರ್ಯಂ ನ ಭಸ್ಮಸಾತ್ || || ೮೪ ||**

— ಯೋಗವಾಸಿಷ್ಠ

"ಮಡದಿ, ಮೃಷ್ಟಾನ್ನ, ಮಧುರಪಾನೀಯ – ಮೊದಲಾದದ್ದು ರಮ್ಯವಸ್ತುವೆಂದು ತಿಳಿದು, ಹುಣ್ಣಿನಲ್ಲಿರುವ ಹುಳುವಿನಂತೆ ಆಸ್ವಾದಿಸುತ್ತ ಮನೆಯಲ್ಲಿ ಕುಳಿತು ಆಯುಸ್ಸನ್ನು ಬೂದಿ ಮಾಡಬಾರದು."

'ಹುಣ್ಣಿನಲ್ಲಿರುವ ಹುಳುವಿನಂತೆ' ಎಂಬ ಒಂದೇ ಹೋಲಿಕೆ ಸಾವಿರ ಮಾತುಗಳ ಸಾರವನ್ನು ಸಾರಿಬಿಟ್ಟಿದೆ. ಹುಳುವಿನ ಪ್ರಪಂಚ ಮೂರಂಗುಲದ ಗಾಯವಾದರೆ, ಈ ಸುಖಲೋಲುಪನ ಪ್ರಪಂಚ ನೂರಡಿಯ ಮನೆಯಾಗಿದೆ. ಹುಳುವಿಗೂ ಮನುಷ್ಯನಿಗೂ ದೇಹದ ಆಕೃತಿಯಲ್ಲಿ ಭೇದವಾಯಿತೇ ಹೊರತು ಇನ್ನಾವ ವಿಷಯದಲ್ಲಿಯೂ ಭೇದ ಉಳಿಯಲಿಲ್ಲ. ಮನುಷ್ಯನಲ್ಲಿರುವ ಕೈಕಾಲುಗಳಿಗೂ ಕಿವಿ ಕಣ್ಣುಗಳಿಗೂ ಮತ್ತು ಯಾವ ಪ್ರಾಣಿಗೂ ಇಲ್ಲದಿರು

ವಷ್ಟು ಇರುವ ಮೇಧಾಶಕ್ತಿಗೂ ಬೆಲೆ ಏನೂ ಉಳಿಯಲಿಲ್ಲ. ಈತನ ಬುದ್ಧಿಶಕ್ತಿ ಜಿಪುಣನ ಹಣದಂತೆ, ಕುರೂಪಿಯ ಅಲಂಕಾರದಂತೆ ನಿರರ್ಥಕ.

ಭಾರತೀಯರು ನಂಬಿರುವ ಕರ್ಮಸಿದ್ಧಾಂತದಂತೆ, ಜನ್ಮ ಉಂಟಾಗುವುದು ನಮ್ಮ ಕರ್ಮಫಲಗಳನ್ನು ಭೋಗಿಸುವುದಕ್ಕಾಗಿ. 'ಭೋಗಾಯತನಂ ಶರೀರಂ' ಎಂದು ಶರೀರದ ಲಕ್ಷಣವನ್ನು ಹೇಳಲಾಗಿದೆ. ಪಾಪಕರ್ಮದ ಫಲವನ್ನು ಅನುಭವಿಸುವುದಕ್ಕಾಗಿ ತಿರ್ಯಗ್‌ಜಂತುಗಳ ಜನ್ಮ. ಅವು ಇನ್ನೇನನ್ನೂ ಸಾಧಿಸದೆ ಫಲವನ್ನು ಭೋಗಿಸಿ ಶರೀರವನ್ನು ಬಿಡುತ್ತವೆ. ಪುಣ್ಯಫಲವನ್ನು ಭೋಗಿಸುವುದಕ್ಕಾಗಿ ದೇವತೆಗಳ ಜನ್ಮ. ದೇವತೆಗಳು ಇನ್ನೇನನ್ನೂ ಸಾಧಿಸದೆ ಫಲವನ್ನನುಭವಿಸಿ ಮರಳುತ್ತಾರೆ.

ಆದರೆ, ಪಾಪ–ಪುಣ್ಯಗಳ ಸಂಮಿಶ್ರಫಲ ಮನುಷ್ಯಜನ್ಮ. ಇಲ್ಲಿ ಪುರುಷ ಕಾರ್ಯಕ್ಕೆ, ಪುರುಷಪ್ರಯತ್ನಕ್ಕೆ ಪೂರ್ಣ ಅವಕಾಶ ಉಂಟು. ಮಾನವನು ತನ್ನ ಭವಿಷ್ಯವನ್ನು ರೂಪಿಸಿಕೊಳ್ಳಬಲ್ಲ, ತಿದ್ದಬಲ್ಲ. ಹೊಸದಾಗಿ ಪಾಪವನ್ನೋ ಪುಣ್ಯವನ್ನೋ ಸಂಪಾದಿಸಿಕೊಳ್ಳುವ ಅವಕಾಶವಿರುವುದು ಮಾನವನಿಗೆ ಮಾತ್ರ. ತನ್ನ ಶ್ರೇಯಸ್ಸನ್ನು ಮಾತ್ರವಲ್ಲದೆ ತನ್ನ ಸಮಾಜದವರ, ರಾಷ್ಟ್ರದವರ, ಅಷ್ಟೇಕೆ ಸಮಸ್ತ ಮಾನವಕುಲದ ಒಳಿತಿಗಾಗಿ ಶ್ರಮಿಸುವ ಬುದ್ಧಿಶಕ್ತಿ, ಕಾರ್ಯನಿರ್ವಹಣಸಾಮರ್ಥ್ಯ ಇರುವುದು ಮಾನವನಿಗೆ ಮಾತ್ರ. ಆದ್ದರಿಂದಲೇ ಮನುಷ್ಯಜನ್ಮವು ಸರ್ವಶ್ರೇಷ್ಠವೆಂದು ಸಕಲಶಾಸ್ತ್ರಗಳೂ ಸಾರಿಹೇಳುತ್ತವೆ.

**ತತ್ತ್ವಮಾತ್ಮಸ್ಥಮಜ್ಞಾತ್ವಾ ಮೂಢಃ ಶಾಸ್ತ್ರೇಷು ಮುಹ್ಯತಿ |**
**ಗೋಪಃ ಕಕ್ಷಗತೇ ಛಾಗೇ ಕೂಪೇ ಪಶ್ಯತಿ ದುರ್ಮತಿಃ || || ೮೫ ||**

— ಗರುಡಪುರಾಣ, ೧೬-೮೦

"ತತ್ತ್ವವು ತನ್ನಲ್ಲಿಯೇ ಇದೆಯೆಂಬುದನ್ನರಿಯದೆ, ಮೂಢನು ಶಾಸ್ತ್ರಗಳಲ್ಲಿದೆಯೆಂದು ಭ್ರಮಿಸುತ್ತಾನೆ. ದನಕಾಯುವವನು

ಮೇಕೆಯನ್ನು ತನ್ನ ಕಂಕುಳಲ್ಲಿಯೇ ಇಟ್ಟುಕೊಂಡು, ಅದು ಬಾವಿಯಲ್ಲಿದೆಯೆಂದು ಬುದ್ಧಿಯಿಲ್ಲದೆ ಬಗ್ಗಿ ನೋಡುತ್ತಾನೆ.''

ತಾನು ಯಾರೆಂದರಿಯುವುದೇ ವೇದಾಂತದ ಪರಮ ಬೋಧೆಯೆಂದು ಬಲ್ಲವರು ಹೇಳಿದ್ದಾರೆ. ತಾನೇ ಆತ್ಮ, ತನ್ನಲ್ಲಿಯೇ ಎಲ್ಲವೂ ಇದೆ, ಹೊರಗೆ ನೋಡುವ ಪ್ರಪಂಚದ ವೈವಿಧ್ಯವನ್ನು ತನ್ನ ದೇಹದಲ್ಲಿಯೇ ಕಾಣಲಾದೀತು – ಎಂದು ಜ್ಞಾನಿಗಳು ಬೋಧಿಸಿದ್ದಾರೆ. ಹೊರಗಿನ ಪ್ರಪಂಚವಾದರೋ ಬಹು ವಿಸ್ತಾರವಾದದ್ದು, ಅನಂತವಾದದ್ದು. ಅದನ್ನು ನೋಡಿ ಮುಗಿಸುವುದು ಎಂದಿಗೂ ಯಾರಿಗೂ ಅಶಕ್ಯವೇ. ಪ್ರಕೃತಿಯು ತನ್ನ ರಹಸ್ಯವನ್ನು ಎಂದಿಗೂ ಪೂರ್ತಿಯಾಗಿ ಬಿಟ್ಟುಕೊಡುವುದಿಲ್ಲ. ವಿಜ್ಞಾನಿಗಳಿಗೆ ಗೊತ್ತಿರುವುದು ಪ್ರಕೃತಿಸಾಮ್ರಾಜ್ಯದ ತಿಲಾಂಶ ಮಾತ್ರ. ಈ ವೈಚಿತ್ರ್ಯದ ನೆಲೆಯನ್ನರಿಯಬೇಕೆಂದಿದ್ದರೆ, ನಿನ್ನ ದೇಹವನ್ನೇ ಪರೀಕ್ಷಿಸಿ ನೋಡು, ಅದರಲ್ಲಿ 'ನಾನು' ಎಂದುಕೊಳ್ಳುವವನು ಯಾರು ? – ಎಂಬುದನ್ನು ಶೋಧಿಸು – ಎನ್ನುತ್ತದೆ ತತ್ತ್ವಶಾಸ್ತ್ರ. ತತ್ತ್ವವೆಂದರೆ ಸತ್ಯ. ಸತ್ಯವು ಸದಾ ಒಂದೇ ಬಗೆಯಲ್ಲಿರತಕ್ಕದ್ದು. ಅದು ಯಾವ ವಿಕಾರಕ್ಕೂ ಒಳಗಾಗತಕ್ಕದ್ದಲ್ಲ. ದೇಹವಾದರೋ ವಿನಾಶಿ, ವಿಕಾರಿ. ಅಂತೆಯೇ ಜಗತ್ತೂ. ಅವಿಕಾರಿಯೂ ಅವಿನಾಶಿಯೂ ಆದ ಆತ್ಮವೇ ತತ್ತ್ವ. 'ನಾನು' ಎಂದುಕೊಳ್ಳುವ ವಸ್ತುವಿನ ಮೂಲವೇ ಅದು. ಅದೇ ಜಗನ್ಮೂಲ. ಅದನ್ನರಿತರೆ ವಿಶ್ವವನ್ನೆಲ್ಲ ಅರಿತಂತಾಯಿತು. ಮಣ್ಣನ್ನು ನೋಡಿದ ಮೇಲೆ ಮಣ್ಣಿನಿಂದಾದ ಮಡಕೆ, ಕುಡಿಕೆ, ಹರವಿ, ಹಣತೆಗಳನ್ನು ಪರೀಕ್ಷಿಸಬೇಕಾದ್ದಿಲ್ಲ.

ಲೋಕವ್ಯವಹಾರದಲ್ಲಿಯೂ ಇದೇ ನ್ಯಾಯ ಅಧಿಕಾರವಹಿಸುತ್ತದೆ. ಮನುಷ್ಯನು ಶಾಂತಿ ಬೇಕೆಂದು ಹೊರಗಡೆ ಹುಡುಕುತ್ತಾನೆ. ಹೊರಗೆ ಮೈತಳೆದಿರುವುದೆಲ್ಲವೂ ಘೋರವೇ ! ಶಾಂತಿಯನ್ನು ಕಂಡುಕೊಳ್ಳುವುದು ಮನಸ್ಸು. ಎಲ್ಲಿಯವರೆಗೆ ಕಾಮ ಕ್ರೋಧಾದಿಗಳು ಅಲೆಗಳಂತೆ ಎದ್ದೆದ್ದು ಬೀಳುತ್ತವೆಯೋ ಅಲ್ಲಿಯವರೆಗೆ ಶಾಂತಿ ಎಲ್ಲಿ ? ವ್ಯಕ್ತಿಗಿಂತು ಶಾಂತಿ ಇಲ್ಲದಾಗ ವಿಶ್ವಕ್ಕೆಂತು ಶಾಂತಿ ದೊರಕೀತು ?

'ನಿನ್ನನ್ನು ನೀನು ತಿಳಿದುಕೊ' ಎಂಬುದು ಜ್ಞಾನಿಗಳಾದ ಮಹಾತ್ಮರ ನುಡಿ. ನೀತಿಶಾಸ್ತ್ರದಿಂದ ಹಿಡಿದು ಅಧ್ಯಾತ್ಮಶಾಸ್ತ್ರದವರೆಗೂ ಈ ಮಾತಿನ ವ್ಯಾಪ್ತಿಯುಂಟು. ವಿಚಾರ ವಿವೇಕಗಳು ತನ್ನಲ್ಲಿಯೇ ಹುಟ್ಟಿ ಬೆಳೆಗತಕ್ಕವು. ಗ್ರಂಥಗಳೇನಿದ್ದರೂ ಕೈದೀವಿಗೆಯಂತೆ, ಊರುಗೋಲಿನಂತೆ ನೆರವಾಗತಕ್ಕವು. ಕಣ್ಣಿಲ್ಲದವನಿಗೆ ಕೈದೀವಿಗೆಯಾಗಲಿ, ಕಾಲಿಲ್ಲದವನಿಗೆ ಊರುಗೋಲಾಗಲಿ ಸಹಾಯ ಮಾಡಲಾರದು. ಸ್ವಯಂ ವಿಚಾರಶೀಲನಲ್ಲದವನಿಗೆ ಶಾಸ್ತ್ರಗ್ರಂಥಗಳಿಂದಾಗುವ ಜ್ಞಾನ ಅತ್ಯಲ್ಪ. 'ಆತ್ಮವತ್ ಸರ್ವ ಭೂತಾನಿ ಯಃ ಪಶ್ಯತಿ ಸ ಪಶ್ಯತಿ'. ತನಗೆ ಬೇಡವಾದ ಅವಮಾನ, ದೈನ್ಯ, ಹಿಂಸೆ, ಕಿರುಕುಳ – ಮೊದಲಾದವು ಪರರಿಗೂ ಬೇಡ; ಅದನ್ನು ತಾನು ಮಾಡಬಾರದು – ಎಂದರಿಯುವುದು ಕಠಿಣವೇನಲ್ಲ. ಸೀತಾದೇವಿ ರಾವಣನಿಗೆ ಬುದ್ಧಿಹೇಳುವಾಗ - 'ಯಥಾ ತವ ತಥಾನ್ಯೇಷಾಂ ದಾರಾ ರಕ್ಷ್ಯಾ ನಿಶಾಚರ ಆತ್ಮಾನಮುಪಮಾಂ ಕೃತ್ವಾ...' ಎನ್ನುತ್ತಾಳೆ. ಎಲೈ ರಾಕ್ಷಸ, ನಿನ್ನನ್ನೇ ಹೋಲಿಸಿಕೊಂಡು ನೋಡು. ನಿನ್ನ ಮಡದಿಯರಿಗೆ ಅವಮಾನವಾಗದಂತೆ ಅವರನ್ನು ಹೇಗೆ ರಕ್ಷಿಸಿಕೊಳ್ಳುತ್ತೀಯೋ, ಹಾಗೆ ಅನ್ಯರ ಮಡದಿಯರೂ ರಕ್ಷಣೀಯರೆಂದು ತಿಳಿ.' ವಿಚಾರಶೀಲನಿಗೆ ಇದಕ್ಕಿಂತ ಪ್ರಭಾವಶಾಲಿಯಾದ ಇನ್ನೊಂದು ನೀತಿಬೋಧೆ ಇರಲಾರದು.

ಆಶ್ಚರ್ಯಕರವಾದ ವಿಜ್ಞಾನವನ್ನು ಬೆಳೆಸಿದವನು ಮಾನವ. ಅದ್ಭುತವಾದ ಕಂಪ್ಯೂಟರನ್ನು ನಿರ್ಮಿಸಿದವನೂ ಮಾನವನೇ. ಆದರೆ ಈ ಮಾನವ ಯಂತ್ರವನ್ನು ನಿರ್ಮಿಸಿದವನು ಯಾರು ? ಒಂದೊಂದು ಅಂಗರಚನೆಯ ಹಿಂದೆ ಎಂತಹ ಯಂತ್ರಕೌಶಲ ಅಡಗಿದೆ ! ಆಹಾರಸೇವನೆ, ವಿಸರ್ಜನೆ, ರಕ್ತಪರಿಚಲನೆ, ಉಸಿರಾಟ – ಇವುಗಳ ರಹಸ್ಯವೇನು ? ಇಂದ್ರಿಯಗಳಿಗೆ, ಮನೋಬುದ್ಧಿಗಳಿಗೆ ವಿಭಿನ್ನ ಶಕ್ತಿಗಳನ್ನೀಯುವ ಮೂಲಸ್ರೋತ ಯಾವುದು? ಈ ಭೌತಿಕಜಗತ್ತನ್ನು ನೋಡುತ್ತ, ತಿಳಿಯುತ್ತ, ಹುಡುಕುತ್ತ, ಹೊಸ ಹೊಸ ಚಮತ್ಕಾರಗಳನ್ನು ಮಾಡಿ ತೋರಿಸುತ್ತಿರುವ 'ನಾನು' ಯಾರು ? ಇದನ್ನೇ ಮಾನವನು ಅರಿತುಕೊಳ್ಳಲಿಲ್ಲ. ವಿಶ್ವದ ರಹಸ್ಯ ತನ್ನಲ್ಲಿಯೇ ಅಡ ಗಿದೆ. ಮಿಲಿಯನ್ ಮೈಲಿಗಳಷ್ಟೆತ್ತರ ಹಾರಿದರೂ ಅದರ ಗುಟ್ಟು ತಿಳಿಯದು.

**ಪಾಪೋಽಹಂ ಪಾಪಕರ್ಮಾಽಹಂ ಪಾಪಾತ್ಮಾ ಪಾಪಸಂಭವಃ |**
**ತ್ರಾಹಿ ಮಾಂ ಕೃಪಯಾ ದೇವ ಶರಣಾಗತವತ್ಸಲ || || ೮೬ ||**

— ವ್ರತಚೂಡಾಮಣಿ

“ನಾನು ಪಾಪಿ, ಪಾಪಕರ್ಮಗಳನ್ನು ಮಾಡಿದವನು. ನನ್ನ ಮನಸ್ಸು ಪಾಪದ ವಾಸನೆಯಿಂದ ಕೂಡಿದೆ. ನಾನು ಹುಟ್ಟಿದ್ದು ಪಾಪ ಕಾರಣದಿಂದ. ಆದ್ದರಿಂದ, ದೇವ – ಶರಣಾಗತವತ್ಸಲ, ನನ್ನನ್ನು ಕಾಪಾಡು.”

ಈ ಶ್ಲೋಕ ನಮ್ಮಲ್ಲಿ ಪ್ರಸಿದ್ಧವಾದದ್ದು. ನಿತ್ಯಪೂಜೆಯಲ್ಲಿಯೂ ವ್ರತೋಪವಾಸ ವಿಧಾನಗಳಲ್ಲಿಯೂ ಸಮಾಪ್ತಿಕಾಲದಲ್ಲಿ ಹೇಳಿ ಭಗವಂತನ ಕಾರುಣ್ಯಕ್ಕಾಗಿ ಮಾಡಿಕೊಳ್ಳುವ ಪ್ರಾರ್ಥನೆ ಇದು. ಈ ಪ್ರಾರ್ಥನೆಯಲ್ಲಿ ಮಾನವನು ತನ್ನಲ್ಲಿಟ್ಟುಕೊಂಡಿರುವ ಕೀಳರಿಮೆ ಎದ್ದುಕಾಣುತ್ತದೆ. ಅತ್ಯಂತ ದೈನ್ಯದಿಂದ ‘ನನ್ನನ್ನು ಕಾಪಾಡು’ ಎಂದು ಗೋಗರೆಯುವ ಈ ನುಡಿ ತುಚ್ಛವಾಗಿ ಕಾಣುತ್ತದೆ. ‘ಪಾಪಸಂಭವ’ ಎಂದು ಹೇಳಿ ತನ್ನ ತಂದೆ ತಾಯಿಗಳನ್ನು ವಿನಾಕಾರಣ ಜರಿಯುವುದು ಹೇಯಕೃತ್ಯ, ತನ್ನಲ್ಲಿ ನಿಕೃಷ್ಟಭಾವನೆ ಮಾನವಜಾತಿಗೆ ಶ್ರೇಯಸ್ಕರವಲ್ಲ – ಎಂದು ಮೇಲ್ನೋಟಕ್ಕೆ ಇಲ್ಲಿ ತೋರಬಹುದು. ಈ ಅಭಿಪ್ರಾಯವನ್ನು ಪೂರ್ವಗೃಹೀತವಾಗಿಟ್ಟುಕೊಂಡು ಈ ಶ್ಲೋಕವನ್ನೇ ಕೆಲವರು ಆಕ್ಷೇಪಿಸಿಯೂ ಇದ್ದಾರೆ.

ಪಾಪ ಎಂಬ ಶಬ್ದ ಕೊಲೆ, ಸುಲಿಗೆ ಮುಂತಾದ ನೀಚಕೃತ್ಯ ಎಂಬ ಅರ್ಥದಲ್ಲಿ ಈಗ ರೂಢಿಗೆ ಬಂದಿದೆ. ವಸ್ತುಸ್ಥಿತಿ ಹಾಗಲ್ಲ. ಧರ್ಮವಿರುದ್ಧವಾದುದೆಲ್ಲ ಪಾಪವೇ. ಲೋಪ, ದೋಷ, ಚ್ಯುತಿ, ಅಪರಾಧ, ಅಧರ್ಮ, ಪಾಪ — ಇವೆಲ್ಲ ಒಂದೇ ಬಳಗದ ಪದಗಳು. ಕರ್ತವ್ಯಲೋಪವೂ ಕರ್ತವ್ಯದ ವಿಸ್ಮೃತಿಯೂ ಸಹ ಪಾಪವೇ. ಭಾರತೀಯ ದರ್ಶನಗಳ ಪ್ರಕಾರ ಶರೀರಪ್ರಾಪ್ತಿಗೆ ಹಿಂದಿನ ಜನ್ಮದ ಪಾಪ ಅಥವಾ ಅಧರ್ಮ ಕಾರಣ. ಮುಮುಕ್ಷುವಿನ ದೃಷ್ಟಿಯಲ್ಲಿ ಪುಣ್ಯಕರ್ಮವೂ ಪಾಪಕ್ಕೆ ಸಮಾನವಾದದ್ದು. ಪಾಪದಿಂದ ದುಃಖ, ಪುಣ್ಯದಿಂದ ಸುಖ — ಎನ್ನುವುದು ಕರ್ಮವಾದದ

ಸಿದ್ಧಾಂತ. ಹೀಗೆ ಜನ್ಮಪರಂಪರೆ ಬೆಳೆಯಲು ಪುಣ್ಯವೂ ನಿಮಿತ್ತವಾದ್ದರಿಂದ ಅದು ಪಾಪಕ್ಕೆ ಸಮಾನವಾಗಿ ವಿಘ್ನಕಾರಕ. ಮೇಲಿನ ಶ್ಲೋಕದಲ್ಲಿ ಭಕ್ತನು ತಾನು ಸಿಕ್ಕಿಕೊಂಡಿರುವ ಕರ್ಮಬಂಧದ ಶೃಂಖಲೆಯನ್ನು ಹೇಳಿಕೊಳ್ಳುತ್ತಾನೆ. ಕರ್ಮಬಂಧದಿಂದ ತನ್ನನ್ನು ಬಿಡಿಸು ಎಂದು ಈಶ್ವರನಲ್ಲಿ ಶರಣಾಗುತ್ತಾನೆ. 'ನಾನು ಕರ್ಮಬಂಧನದಲ್ಲಿ ಸಿಕ್ಕಿಕೊಂಡವನು. ಕರ್ಮವನ್ನು ಮಾಡುತ್ತಲೇ ಇದ್ದೇನೆ. ಕರ್ಮದ ವಾಸನೆ ನನ್ನ ಆತ್ಮಕ್ಕೆ ಅಂಟಿಕೊಂಡಿದೆ. ಪುಣ್ಯ—ಪಾಪ ರೂಪವಾದ ಕರ್ಮಬೀಜದಿಂದ ನಾನು ಹುಟ್ಟಿದ್ದೇನೆ' ಎಂದು ಗೋಗರೆಯುತ್ತಾನೆ. ಆದ್ದರಿಂದ 'ಪಾಪಸಂಭವಃ' ಎಂದರೆ 'ಪಾಪಿಗಳಾದ ತಾಯಿ ತಂದೆಗಳಿಂದ ಹುಟ್ಟಿದವನು' ಎಂಬ ಅರ್ಥ ಅಸಂಬದ್ಧ.

**ವಿಷಯಾಸಕ್ತಚಿತ್ತಾನಾಂ ಗುಣಃ ಕೋ ವಾ ನ ದುಷ್ಯತಿ |**
**ನ ಮಾನುಷ್ಯಂ ನ ವೈದುಷ್ಯಂ ನಾಭಿಜಾತ್ಯಂ ನ ಸತ್ಯವಾಕ್ || || ೮೭ ||**

— ಸುಭಾಷಿತರತ್ನಾವಳಿ

"ಯಾರ ಮನಸ್ಸು ವಿಷಯಸುಖದಲ್ಲಿ ಆಸಕ್ತವಾಗಿರುವುದೋ, ಅವರಲ್ಲಿದ್ದ ಯಾವ ಗುಣವು ತಾನೆ ಕೆಟ್ಟುಹಾಳಾಗದೆ ಉಳಿದೀತು? ಮನುಷ್ಯತ್ವವಾಗಲಿ, ಪಾಂಡಿತ್ಯವಾಗಲಿ, ಸತ್ಕುಲಪ್ರಸೂತಿಜನ್ಯವಾದ ದೊಡ್ಡತನವಾಗಲಿ, ಕಡೆಗೆ ಸತ್ಯಭಾಷಿತೆಯಾಗಲಿ ಅವರಲ್ಲಿ ಉಳಿಯುವುದಿಲ್ಲ."

ಇರುವ ಉತ್ತಮ ಗುಣವು ವಿಷಯಲೋಲುಪರಲ್ಲಿ ನಶಿಸಿಹೋಗುತ್ತದೆ ಎಂದು ತಿಳಿಸುತ್ತದೆ ಈ ಸುಭಾಷಿತ. ಯಾವ ಉತ್ತಮ ಗುಣವೂ ಇರುವುದಿಲ್ಲವೆನ್ನುವುದಕ್ಕೂ, ಇರುವ ಗುಣ ನಶಿಸಿಹೋಗುತ್ತದೆ ಎನ್ನುವುದಕ್ಕೂ ತುಂಬ ವ್ಯತ್ಯಾಸವಿದೆ. ಮೊದಲನೆಯ ಮಾತು ಸದ್ಗುಣದ ಸತ್ತೆಯನ್ನೇ ಅಲ್ಲಗಳೆದರೆ ಎರಡನೆಯದು ಇರುವುದರ ಅಳಿವನ್ನು ತಿಳಿಸುತ್ತದೆ. ಇರುವುದನ್ನೂ ಅಳಿಸುತ್ತದೆಯೆಂದಾಗ ವಿಷಯಾಸಕ್ತಿಯ ಪ್ರಾಬಲ್ಯ ಸ್ಪಷ್ಟ. ವಿಷಯಾಸಕ್ತಿ ಎನ್ನುವುದು ಕಳೆ ಇದ್ದಂತೆ. ಒಳ್ಳೆಯ ಗುಣವಿದ್ದರೂ ಬೆಳೆಯಲು

ಬಿಡುವುದಿಲ್ಲ ಅದು. ಬದುಕಲೂ ಬಿಡುವುದಿಲ್ಲ. ಬೆಳೆಯನ್ನು ಅಳಿಸಿ ಕಳೆಯ ಸಾಮ್ರಾಜ್ಯ ಅಲ್ಲಿ ಸ್ಥಾಪಿತವಾಗುತ್ತದೆ.

ಮನುಷ್ಯತ್ವ, ವೈದುಷ್ಯಗಳೆರಡೂ ಇಲ್ಲದಾಗ ಆಭಿಜಾತ್ಯ ಏನು ಮಾಡೀತು ? ಸತ್ಯವೆಲ್ಲಿ ಉಳಿದೀತು ? ಸತ್ಕುಲದಲ್ಲಿ ಜನ್ಮ ಆಭಿಜಾತ್ಯವೆನಿಸುತ್ತದೆ. ಸತ್ಕುಲದಲ್ಲಿ ಹುಟ್ಟಿದವನಿಗೆ ತನ್ನ ಪೂರ್ವಜರ ನೆನಪು ಸದ್ವರ್ತನೆಯೇ ಸ್ಫೂರ್ತಿ. ರಾಮಾಯಣದಲ್ಲಿ ಶ್ರೀರಾಮನು ''ಕುಲಂ ವ್ಯಪದಿಶನ್ ಮಹತ್'' ಎಂದು ಆಗಾಗ ಹೇಳುತ್ತಾನೆ. ''ನಾನು ರಘುವಂಶದಲ್ಲಿ ಹುಟ್ಟಿದವನು, ಮಹತ್ತರವಾದ ಕೀರ್ತಿಯನ್ನು ಪಡೆದದ್ದು ನನ್ನ ವಂಶ. ನಾನು ಅಕಾರ್ಯವನ್ನು ಮಾಡಲೆ ? ಅಸತ್ಯಮಾರ್ಗವನ್ನು ತುಳಿಯಲೆ ? ಅದು ಆಗತಕ್ಕದ್ದಲ್ಲ'' ಎಂದು ಆತನ ಅಭಿಪ್ರಾಯ. ಆಭಿಜಾತ್ಯವೆಂದರೆ ''ಕೀರ್ತಿಶಾಲಿಗಳಾದವರ ವಂಶದಲ್ಲಿ ಹುಟ್ಟಿದ್ದೇನೆ. ನನ್ನ ವಂಶಕ್ಕೆ ನನ್ನಿಂದ ಕೆಟ್ಟಹೆಸರು ಬರಬಾರದು'' ಎಂಬ ಆತ್ಮಾಭಿಮಾನ.

ಭಾರತೀಯರು ಕುಲ ಕುಲ – ಎಂದು ಹೇಳುತ್ತಿದ್ದುದು ಈ ಎಲ್ಲ ಆಭಿಜಾತ್ಯದ ರಕ್ಷಣೆಯಾಗಲೆಂದು. ಉತ್ತಮ ಸಂಸ್ಕಾರವು ಸಂತತಿಯಲ್ಲಿ ಪ್ರವಹಿಸುತ್ತಿರಲೆಂದು. ಮಾದಕದ್ರವ್ಯಗಳ ಚಟ, ದುರ್ಬೋಧನೆ, ದುರ್ಜನ ಸಹವಾಸ - ಮುಂತಾದ ಕಳೆಗಳು ಬೆಳೆದಾಗ ಮೊದಲು ಮರೆಯಾಗತಕ್ಕದ್ದು ಸತ್ಯಭಾಷಿತೆ, ಆನಂತರ ಆಭಿಜಾತ್ಯ, ಆಮೇಲೆ ವೈದುಷ್ಯ, ಆನಂತರ ಇವೆಲ್ಲಕ್ಕೆ ತಳಹದಿಯಾದ ಮನುಷ್ಯತ್ವವೇ ಲಯಿಸುತ್ತದೆ.

**ಪರಿವ್ರಾಟ್‌ಕಾಮುಕಶುನಾಮೇಕಸ್ಯಾಂ ಪ್ರಮದಾತನೌ |**
**ಕುಣಪಃ ಕಾಮಿನೀ ಭಕ್ಷ್ಯಮಿತಿ ತಿಸ್ರೋ ವಿಕಲ್ಪನಾಃ || || ೭೮ ||**

— ಸುಭಾಷಿತರತ್ನ-ಭಾಂಡಾಗಾರ

''ತರುಣಿಯ ಒಂದೇ ದೇಹದಲ್ಲಿ ಮೂರು ಬಗೆಯವರಿಗೆ ಮೂರು ತರಹದ ಭಾವನೆಗಳು ಉಂಟಾಗುತ್ತವೆ. ಸಂನ್ಯಾಸಿಗೆ ಅದೊಂದು ಹೆಣವೆಂದೂ, ಕಾಮುಕನಿಗೆ ಕಾಮಿನಿಯೆಂದೂ, ನಾಯಿಗೆ ಭಕ್ಷ್ಯವೆಂದೂ ಕಲ್ಪನೆಗಳು ಮೂಡುತ್ತವೆ.''

ಸರ್ವಸಂಗವನ್ನು ತ್ಯಜಿಸಿ ವಿರಕ್ತನಾದವನು ಸಂನ್ಯಾಸಿ – ಪರಿವ್ರಾಟ್. ಆವನು ಸಂಗವನ್ನು ತ್ಯಜಿಸುವುದಕ್ಕೆ ವಿಷಯಪದಾರ್ಥಗಳಲ್ಲಿ ದೃಢವಾಗಿ ಬೇರೂರಿದ ಹೇಯಭಾವನೆಗಳೇ ಕಾರಣ. ಲೋಕದ ವಸ್ತುಗಳಲ್ಲಿ ಮೌಲಿಕವಾದ ಯಾವುದೇ ಗ್ರಾಹ್ಯಾಂಶವಿಲ್ಲವೆಂದು ತಿಳಿದು ಅವುಗಳಲ್ಲಿ ದುಃಖದ ರಾಶಿಯನ್ನು ಅವನು ಕಾಣುತ್ತಾನೆ. ತರುಣಿಯು ದಿವ್ಯಸುಂದರಿ ಎನಿಸಿದ್ದರೂ ಅವಳಲ್ಲಿ ರಕ್ತ, ಮಾಂಸ, ಮೂಳೆಗಳೇ ಆತನ ದೃಷ್ಟಿಗೆ ಗೋಚರಿಸಿ ಅದೊಂದು ಹೇಯವಸ್ತುವೆಂದೂ ಬೀಭತ್ಸವೆಂದೂ ಬಗೆಯುತ್ತಾನೆ. ಆತನ ಚಿತ್ತಸಂಸ್ಕಾರವೇ ಅಂತಹುದು. ಕಾಮುಕನಿಗೆ ಅವಳು ಸುಖದ ತಾಣವಾಗಿ ಕಾಣುತ್ತಾಳೆ; ಅವಳ ದೇಹ ಕಮನೀಯವಾಗಿ ಆತನಿಗೆ ಗೋಚರಿಸುತ್ತದೆ. ನಾಯಿ ತನಗೆ ಇಷ್ಟವಾದ ಮೂಳೆಮಾಂಸಗಳನ್ನು ಮಾತ್ರ ಗಮನಿಸುತ್ತದೆ. ಹೀಗೆ ಒಂದೇ ವಸ್ತು ಮೂವರಿಗೆ ಮೂರು ತೆರನಾಗಿ ಗೋಚರಿಸಲು ಅವರವರ ಚಿತ್ತಪ್ರವೃತ್ತಿಯೇ ನಿಮಿತ್ತವೆಂದು ಒಪ್ಪಿಕೊಳ್ಳು ವುದು ಅನಿವಾರ್ಯ. ಆದರೆ ಕಪ್ಪಾದ ವಸ್ತು ಕಪ್ಪಾಗಿ, ಬಿಳಿಯದು ಬಿಳುಪಾಗಿ, ಮರವು ಮರವಾಗಿ, ಕಲ್ಲು ಕಲ್ಲಾಗಿ ಎಲ್ಲರಿಗೂ ಕಾಣಿಸುತ್ತದೆ. ಆ ವಸ್ತುಗಳು ಸಂನ್ಯಾಸಿಗೊಂದು ರೀತಿಯಾಗಿ, ಕಾಮುಕನಿಗೆ ಇನ್ನೊಂದು ರೀತಿಯಾಗಿ ತೋರುವುದಿಲ್ಲ. ರಾಗ, ದ್ವೇಷ, ಕ್ರೋಧ, ಅಸೂಯೆ, ಉಪೇಕ್ಷೆ ಮುಂತಾದ ಚಿತ್ತವೃತ್ತಿಗಳನ್ನು ಒಂದೇ ಪದಾರ್ಥ ಬೇರೆಬೇರೆಯಾಗಿ ಹುಟ್ಟಿಸುವುದೇ ಹೊರತು ಅದು ತನ್ನ ಸಹಜತೆಯನ್ನು ಮಾತ್ರ ಮಾರ್ಪಡಿಸಿಕೊಳ್ಳುವುದಿಲ್ಲ.

ಯಾವುದೇ ಒಂದು ವಸ್ತು, ಘಟನೆ, ಹುಟ್ಟು ಅಥವಾ ಸಾವು ಸ್ವತಃ ಸುಖಪ್ರದವೂ ಅಲ್ಲ, ದುಃಖಪ್ರದವೂ ಅಲ್ಲ. ನೋಡತಕ್ಕವರ ಮನಸ್ಸು ಹಿಡಿದಿಟ್ಟುಕೊಂಡಿರುವ ಸಂಸ್ಕಾರವೇ ಎಲ್ಲ ಭಾವನೆಗಳ ಉದಯಕ್ಕೂ ನಿಮಿತ್ತ. ಸಾಕಿದ ಕೋಳಿಯನ್ನು ಬೆಕ್ಕು ತಿಂದಾಗ ಆಗುವ ವ್ಯಥೆ, ಇಲಿಯನ್ನು ಬೆಕ್ಕು ತಿಂದಾಗ ಜನರಿಗೆ ಆಗುವುದಿಲ್ಲ. ಆಹಾರಕ್ಕಾಗಿ ತಿಪ್ಪೆಗುಂಡಿಯನ್ನು ಕೆದಕುತ್ತಿದ್ದ ಕೋಳಿಗೆ ಒಂದು ರತ್ನ ಸಿಕ್ಕಿತಂತೆ. ಅದನ್ನು ಕಚ್ಚಿ ನೋಡಿ, ನಿಃಸಾರವಾದ ಕಲ್ಲೆಂದು ಉಗುಳಿ, ಕಾಲಿಂದ ತಳ್ಳಿ ಮುಂದೆ ಹೋಯಿತು. ರತ್ನಕ್ಕಿಂತ ಒಂದು ಹುಳುವೇ ಶ್ರೇಷ್ಠವೆಂದು ಕೋಳಿ ತೀರ್ಮಾನಿಸಿತು.

ಮರಣಂ ಪ್ರಕೃತಿಃ ಶರೀರಿಣಾಂ ವಿಕೃತಿರ್ಜೀವಿತಮುಚ್ಯತೇ ಬುಧೈಃ |
ಕ್ಷಣಮಪ್ಯವತಿಷ್ಠತೇ ಶ್ವಸನ್
ಯದಿ ಜಂತುರ್ನನು ಲಾಭವಾನಸೌ || || ೮೯ ||

– ರಘುವಂಶ, ೮-೮೭

"ಮಾನವರಿಗೆ ಸಾವು ಸ್ವಾಭಾವಿಕವಾದ ಪ್ರಕೃತಿ; ಬದುಕಿರುವುದು ಸಹಜವಲ್ಲದ ವಿಕೃತಿ – ಎಂದು ಬಲ್ಲವರು ಹೇಳುತ್ತಾರೆ. ಒಬ್ಬನು ಉಸಿರಾಡುತ್ತ ಒಂದು ಕ್ಷಣವಿದ್ದರೂ ಅದೇ ಲಾಭವೆನ್ನಬೇಕಾಗಿದೆ."

ಮನುಷ್ಯನು ಕ್ಷಣಕಾಲ ಬದುಕಿದ್ದರೂ ಲಾಭವಂತೆ. ಯಾರಿಗೆ ಲಾಭ? ಬದುಕಿದ್ದವರಿಗೆ ಲಾಭ. ಹೇಗೆ ಲಾಭ ? ಹೆಚ್ಚು ಗಳಿಸಬಹುದು, ಹೆಚ್ಚು ತಿನ್ನಬಹುದು, ಆದ್ದರಿಂದ ಲಾಭವೇ? ಗಳಿಸಿದ ಹಣ ಮನೆಯ ಕುಡಿಕೆಯಲ್ಲುಳಿಯುತ್ತದೆ. ತಿಂದ ಶರೀರ ಸುಟ್ಟು ಬೂದಿಯಾಗುತ್ತದೆ. ಸತ್ತವನಿಗೆ ಲಾಭವೇನಾಯಿತು ? ಉತ್ತರಕ್ಕಾಗಿ ಕರ್ಮಸಿದ್ಧಾಂತಕ್ಕೆ ಶರಣಾಗಬೇಕು. 'ನರಜನುಮವತ್ಯಧಿಕ' ಎಂದರು ಹರಿಭಕ್ತಿಸಾರದಲ್ಲಿ ಕನಕದಾಸರು. ಮನುಷ್ಯತ್ವ, ಮುಮುಕ್ಷುತ್ವ, ಮಹಾಪುರುಷಸಂಶ್ರಯ – ಇವು ಮೂರು ಅತಿದುರ್ಲಭವೆಂದು ವಿವೇಕಚೂಡಾಮಣಿಯಲ್ಲಿ ಶಂಕರಾಚಾರ್ಯರು –ಹೇಳಿದ್ದಾರೆ. ಇಂತಹ ಮನುಷ್ಯಜನ್ಮದಲ್ಲಿ ಮಾತ್ರ ತನ್ನ ಮತ್ತು ಲೋಕದ ಕಲ್ಯಾಣಕ್ಕಾಗಿ ಕೆಲಸ ಮಾಡಲು ಶಕ್ಯವಿದೆ. ಒಂದೊಂದು ಕ್ಷಣವನ್ನೂ ಶ್ರೇಯಃ ಪ್ರಾಪ್ತಿಗಾಗಿ ವಿನಿಯೋಗಿಸಬಹುದು. ಒಂದು ಕ್ಷಣ ದೊರೆತರೆ ಭಗವನ್ನಾಮ ಸ್ಮರಣೆ ಮಾಡಬಹುದು. ಇದರಿಂದ ಗಳಿಸಿಕೊಳ್ಳುವ ಶುಭಸಂಸ್ಕಾರವೇ ಲಾಭ. ಅದು ದೇಹದೊಡನೆ ಬೂದಿಯಾಗತಕ್ಕದ್ದಲ್ಲ.

ಹುಟ್ಟುವುದು, ಇರುವುದು, ಬೆಳೆಯುವುದು, ಬದಲಾವಣೆಗೊಳ್ಳುವುದು, ಕ್ಷಯಿಸುವುದು, ನಾಶವಾಗುವುದು – ಇವು ಆರು ನಮಗೆ ಕಾಣುವ ಎಲ್ಲ ವಸ್ತುಗಳಿಗೂ ಒದಗುವ ಆರು ವಿಕಾರಗಳು–ವಿಕೃತಿಗಳು. ಇದರ ಪ್ರಕಾರ ನಾಶ–ಮರಣ ವಿಕೃತಿಯಲ್ಲಿ ಸೇರುತ್ತದೆ. ಆದರೆ ಮರಣವು ಪ್ರಕೃತಿಯೆನ್ನುವ

ಕವಿಯ ಆಶಯ ಬೇರೆ. ಯಾವುದು ಸಹಜವೋ, ನಿಶ್ಚಿತವೋ, ಅದು ಪ್ರಕೃತಿ. ಯಾವುದು ಸ್ವಾಭಾವಿಕವಲ್ಲವೋ, ಯತ್ನಸಾಧ್ಯವೋ, ಅದು ವಿಕೃತಿ.

ಪ್ರಾಣಿಯು ಜೀವಸಹಿತ ಉಳಿಯುವುದಕ್ಕಾಗಿ ಯತ್ನಿಸಬೇಕಾಗಿದೆ. ಅನ್ನಪಾನ, ಔಷಧಗಳ ಸೇವನೆ, ಜೀವವನ್ನುಳಿಸುವ ಯತ್ನ. ಈ ಯತ್ನವಿಲ್ಲದಿದ್ದರೆ ಮರಣ ಸಹಜವಾಗಿ ಘಟಿಸುತ್ತದೆ. ಆತ್ಮನಿಗೆ ಶರೀರಸಂಯೋಗ ಜೀವಿತ, ಶರೀರವಿಯೋಗ ಮರಣ. ಶರೀರಸಂಯೋಗ ಹಿಂದಿನ ಕರ್ಮದಿಂದ ಬಂದದ್ದು, ಆದ್ದರಿಂದ ಅದು ವಿಕೃತಿ. ಕರ್ಮಬಲ ತಪ್ಪಿದೊಡನೆ ಶರೀರವಿಯೋಗ, ಆದ್ದರಿಂದ ಅದು ಪ್ರಕೃತಿ. ಕರ್ಮಬಲ ತಪ್ಪಿದಾಗ ಅನ್ನಾದಿಗಳ ಸೇವನೆಯೂ ಶರೀರವನ್ನು ಹಿಡಿದು ನಿಲ್ಲಿಸದು. ಮರಣವೆನ್ನುವುದು ಸಹಜಾವಸ್ಥೆ ಹೀಗೆ.

**ವಂಗಾಃ ಕಥಮಂಗಾಃ ಕಥಮಿತ್ಯನುಯುಂಕ್ತೇ ವೃಥಾ ದೇಶಾನ್ |**
**ಈದೃಕ್ ಕೃತಾಂತಪುರಮಿತಿ ಕೋऽಪಿ ನ ಜಿಜ್ಞಾಸತೇ ಲೋಕಃ || ||೯೦||**

– ಅಪ್ಪಯ್ಯದೀಕ್ಷಿತರ 'ವೈರಾಗ್ಯಶತಕ'

"ವಂಗದೇಶ ಹೇಗಿದೆ ? ಅಂಗದೇಶದ ವೃತ್ತಾಂತವೇನು ? – ಎಂದು ಜನರು ವ್ಯರ್ಥವಾಗಿ ನಾನಾದೇಶಗಳ ವಿಚಾರವನ್ನು ಮಾಡುತ್ತಾರೆ. ಆದರೆ ಯಮನಗರಿ ಹೇಗಿದೆ ? – ಎಂದು ಯಾರೂ ತಿಳಿಯ ಬಯಸುವುದಿಲ್ಲವಲ್ಲ !"

ಅಪ್ಪಯ್ಯದೀಕ್ಷಿತರ ಕಾಲದಲ್ಲಿ ವೃತ್ತಾಂತಪತ್ರಿಕೆಗಳು ಇರಲಿಲ್ಲ. ದೇಶಾಂತರದ ವಿಚಾರಗಳು ಪ್ರವಾಸಿಗಳಿಂದ ಮಾತ್ರ ಗೊತ್ತಾಗುತ್ತಿದ್ದವು. ಅವರು ಹೇಳುವ ದೇಶಾಂತರದ ಸುದ್ದಿಗಳಲ್ಲಿ ಜನರಿಗೆ ವಿಶೇಷ ಆಸಕ್ತಿ. ತನ್ನ ದೇಶದವರ ಸ್ಥಿತಿಗತಿಗಳೇ ಸರಿಯಾಗಿ ತಿಳಿಯದಿದ್ದರೂ ನೈತಿಕ ವಿಷಯಗಳಿಗೆ ಉಪಯುಕ್ತವಲ್ಲದ ಹಾಳುಹರಟೆ ಅವರಿಗೆ ಪ್ರಿಯವಾಗಿರುತ್ತದೆ. ಈ ವ್ಯರ್ಥವಾದ ಕುತೂಹಲವನ್ನು ದೀಕ್ಷಿತರು ಮೇಲ್ಕಂಡ ಶ್ಲೋಕದಲ್ಲಿ ಉಪಹಾಸಮಾಡಿದ್ದಾರೆ.

ಈ ಕಾಲದಲ್ಲಂತೂ ವ್ಯರ್ಥ ಜಿಜ್ಞಾಸೆಗೆ ಬೇಕಾದಷ್ಟು ಗ್ರಾಸಗಳಿವೆ. ದೇಶವಿದೇಶಗಳ ಮೂಲೆಗಳಿಂದ ಸುದ್ದಿಗಳನ್ನು ಹೊತ್ತುತರುವ ವೃತ್ತಪತ್ರಿಕೆಗಳು ಅಪರಿಮಿತವಾಗಿವೆ. ಇವೆಲ್ಲಕ್ಕೂ ಗಿರಾಕಿಗಳುಂಟು. ಅಚ್ಚರಿಯೇನೆಂದರೆ, ಜನರಿಗೆ ಇವೆಲ್ಲವನ್ನೋದುತ್ತಿದ್ದರೂ ಸುದ್ದಿಗಳ ದಾಹ ಇಂಗುವುದೇ ಇಲ್ಲ! ಇವು ಸಾಲವೆಂದು ವಾರ್ತಾಶ್ರವಣಕ್ಕಾಗಿ ದಿನಕ್ಕೆ ನಾಲ್ಕು ಸಲವಾದರೂ ರೇಡಿಯೋಗಳನ್ನು ತಿರುಗಿಸಬೇಕು, ದೂರದರ್ಶನವನ್ನೂ ನೋಡಬೇಕು.

ವೃತ್ತಪತ್ರಿಕೆಗಳಲ್ಲಿ ಜನರು ಆಸಕ್ತಿಯಿಂದ ಓದುವುದು ಯಾವುದನ್ನು? ಕೊಲೆ, ದರೋಡೆ, ಆತ್ಮಹತ್ಯೆ, ಅತ್ಯಾಚಾರದ ಪ್ರಸಂಗಗಳನ್ನು, ರಾಜಕೀಯವನ್ನೇ ವೃತ್ತಿಯಾಗಿ ಮಾಡಿಕೊಂಡವರ ಕಲಹಬೀಜದ ಹೇಳಿಕೆಗಳನ್ನು, ಜಾತಿವೈಷಮ್ಯದ ಹೊಗೆಯನ್ನುಗುಳುವ 'ದೈತ್ಯಪ್ರತಿಭೆ'ಯವರ ಬರಹಗಳನ್ನು; ರಾಜಕೀಯ ಮುಖಂಡರ ಭ್ರಷ್ಟಾಚಾರಗಳನ್ನು, ಸಿನೆಮಾ ನಟನಟಿಯರ ಖಾಸಗೀ ಜೀವನವನ್ನು ಕುರಿತು ವಿವರವಾಗಿ ವಿಶ್ಲೇಷಣೆ ಮಾಡುವ ಪೊಳ್ಳುಲೇಖನಗಳನ್ನು.

ಕನ್ನಡ ನಾಡೊಂದನ್ನೇ ನಿದರ್ಶನವಾಗಿ ತೆಗೆದುಕೊಳ್ಳಬಹುದು, ಇಲ್ಲಿ ವಿಜ್ಞಾನ, ಕಲೆ, ಸಾಹಿತ್ಯಗಳನ್ನು ಪ್ರಚಾರಮಾಡುವ ಪತ್ರಿಕೆಗಳಿವೆ. ರಾಷ್ಟ್ರಭಕ್ತಿಯನ್ನು ಪ್ರಚೋದಿಸಿ ಪ್ರಜೆಗಳ ಚಿಂತನಪ್ರಕಾರವನ್ನು ಸಮೀಕರಿಸಿ ಹದಗೊಳಿಸುವ ಪತ್ರಿಕೆಗಳಿವೆ. ಅಧ್ಯಾತ್ಮ, ಧರ್ಮ, ದರ್ಶನಗಳನ್ನು ಬಿತ್ತರಿಸುವ ಪತ್ರಿಕೆಗಳೂ ಇವೆ. ಇವು ಓದುಗರ ಕೊರತೆಯ ನಿಮಿತ್ತವಾಗಿ ಹೇಗೋ ಕಷ್ಟದಿಂದ ಉಸಿರಾಡುತ್ತವೆ. ಆಗಾಗ ಮೂರ್ಛೆಗೂ ಒಳಗಾಗುತ್ತವೆ. ಆದರೆ ಹಾಳುಹರಟೆಗಳನ್ನೂ ಪುಂಡತನದ ಕಥೆಗಳನ್ನೂ ಬಿತ್ತರಿಸುವ 'ಪೀತಪತ್ರಿಕೆ'ಗಳು ಮಾತ್ರ ದಾಪುಗಾಲಿಡುತ್ತ ಇಲ್ಲಿ ದಿನದಿಂದ ದಿನಕ್ಕೆ ರಾಕ್ಷಸಾಕಾರದಲ್ಲಿ ಬೆಳೆಯುತ್ತಿವೆ.

ಮಾರ್ಜಾಲಭಕ್ಷಿತೇ ದುಃಖಂ ಯಾದೃಶಂ ಗೃಹಕುಕ್ಕುಟೇ |
ನ ತಾದೃಙ್ ಮಮತಾಶೂನ್ಯೇ ಕಲವಿಂಕೇಽಥ ಮೂಷಕೇ || || ೯೧ ||

— ಪ್ರಬೋಧಚಂದ್ರೋದಯ, ೫-೨೦

"ಮನೆಯಲ್ಲಿ ಸಾಕಿದ ಕೋಳಿಯನ್ನು ಬೆಕ್ಕು ತಿಂದಾಗ ಎಷ್ಟು ದುಃಖವಾಗುತ್ತದೆಯೋ ಅಷ್ಟು ದುಃಖ, ಗುಬ್ಬಿಯನ್ನೋ ಇಲಿಯನ್ನೋ ಬೆಕ್ಕು ತಿಂದಾಗ ಆಗುವುದಿಲ್ಲ. ಅವುಗಳಲ್ಲಿ ನಮಗೆ ಮಮತೆ ಇಲ್ಲದಿರುವುದೇ ಅದಕ್ಕೆ ಕಾರಣ."

ಮನೆಯಲ್ಲಿರುವ ಕೋಳಿಗೂ ಇಲಿ ಗುಬ್ಬಿಗಳಿಗೂ ವ್ಯತ್ಯಾಸವೇನು ? ಎಲ್ಲವೂ ಪ್ರಾಣಿಗಳೇ. ಬೆಕ್ಕು ಅವನ್ನು ಹಿಡಿದಾಗ ಮನೆಯವರ ಮನಸ್ಸಿನ ಮೇಲಾಗುವ ಪರಿಣಾಮದಲ್ಲಿ ಮಾತ್ರ ಬಹಳ ಅಂತರವುಂಟಾಗುತ್ತದೆ. ಕೋಳಿಯನ್ನು ಬೆಕ್ಕು ಹಿಡಿದಾಗ ಕೋಳಿಸಾಕಿದವರಿಗೆ ವ್ಯಥೆಯಾಗುತ್ತದೆ. ಗುಬ್ಬಿಯನ್ನು ಬೆಕ್ಕು ಎತ್ತಿಕೊಂಡು ಹೋದರೆ ಮೃದುಹೃದಯದ ಜನರಿಗೆ ಮಾತ್ರ ಸ್ವಲ್ಪ ವ್ಯಥೆಯಾದೀತು. 'ಅಯ್ಯೋ ಪಾಪ! ಎನ್ನುವುದರಲ್ಲಿ ಅದು ಕೊನೆಗಾಣುತ್ತದೆ. ಇಲಿಯನ್ನು ಬೆಕ್ಕು ಹಿಡಿದಾಗ, ಕಾಟ ತಪ್ಪಿತೆಂದು ನೆಮ್ಮದಿಯಾಗುತ್ತದೆ. ಈ ಮೂರೂ ಮನೆಯಲ್ಲಿ ಓಡಾಡಿಕೊಂಡಿದ್ದ ಪ್ರಾಣಿಗಳೇ. ಆದರೂ ಜನರ ಮನೋಭಾವದಲ್ಲಾಗುವ ಈ ವ್ಯತ್ಯಾಸಗಳಿಗೆ ನಿಮಿತ್ತವೇನು?

ಮಮತೆಯೇ ಇದಕ್ಕೆಲ್ಲ ಕಾರಣವಲ್ಲದೆ ಇನ್ನೊಂದಿಲ್ಲ. ಮಮತೆ ಎಷ್ಟು ದೃಢವೋ ಪ್ರೀತಿ ಅಷ್ಟು ಆಳವಾಗಿರುತ್ತದೆ. ಇದರ ತಾರತಮ್ಯದಿಂದ ನಮ್ಮ ಮನೋಭಾವನೆಯಲ್ಲಿ ಏರುಪೇರಾಗುವುದು.

ಆಶ್ಚರ್ಯವೇನೆಂದರೆ ಈ ಮಮತೆ ಯಾರನ್ನೂ ಬಿಟ್ಟಿಲ್ಲ. 'ನಾನು, ನನ್ನದು' ಎಂಬ ಭಾವ ಸಕಲರಲ್ಲಿಯೂ ವ್ಯಾಪಿಸಿದೆ. ಹೆಚ್ಚೆಂದರೆ ನನ್ನ ಹೆಂಡತಿ, ನನ್ನ ಮಕ್ಕಳು–ಇಲ್ಲಿಯವರೆಗೆ ಅದರ ವಿಸ್ತಾರ. ಇಂತಹ ಮಮತೆ ಮೃಗಜಾತಿಯಲ್ಲಿಯೂ ಉಂಟು. ಇದರ ವ್ಯಾಪ್ತಿ ಇಷ್ಟು ಸಂಕುಚಿತವಾಗಿದ್ದರೆ ಮೃಗಜಾತಿಗೂ ಮನುಷ್ಯಜಾತಿಗೂ ಭೇದ ಉಳಿಯುವುದಿಲ್ಲ. ನದಿಗಳು

ಮಹಾಸಾಗರದಲ್ಲಿ ಲೀನವಾಗುವಂತೆ ಎಲ್ಲ ಮಮತೆಗಳೂ ರಾಷ್ಟ್ರೀಯ ಮಮತೆಯಲ್ಲಿ ಲಯಗೊಳ್ಳಬೇಕು. ಇಲ್ಲದಿದ್ದರೆ ಜಾತಿಗಾಗಿ, ಭಾಷೆಗಾಗಿ, ಭಾಷಾವಾರು ಪ್ರಾಂತಕ್ಕಾಗಿ ಘರ್ಷಣೆ ತಪ್ಪಿದ್ದಲ್ಲ. ನದಿಗಳ ಅಂತಿಮಗುರಿ ಸಾಗರವನ್ನು ಸೇರುವುದೇ ಆದ್ದರಿಂದ ಅವುಗಳಲ್ಲಿ ಪರಸ್ಪರ ಘರ್ಷಣೆ ಹುಟ್ಟುವುದಿಲ್ಲ. ದೊಡ್ಡನದಿ ಚಿಕ್ಕನದಿಯನ್ನು ತನ್ನಲ್ಲಿ ಸೇರಿಸಿಕೊಂಡು ಸಮುದ್ರದತ್ತ ಧಾವಿಸುತ್ತದೆ.

**ಚರಾಣಾಮನ್ನಮಚರಾಃ ದಂಷ್ಟ್ರಿಣಾಮಪ್ಯದಂಷ್ಟ್ರಿಣಃ |**
**ಅಹಸ್ತಾಶ್ಚ ಸಹಸ್ತಾನಾಂ ಶೂರಾಣಾಂ ಚೈವ ಭೀರವಃ || || ೯೨ ||**

— ಮನುಸ್ಮೃತಿ, ೫-೨೯

"ಚಲಿಸಲು ಶಕ್ತಿಯುಳ್ಳ ಪ್ರಾಣಿಗಳಿಗೆ ಚಲಿಸಲಾರದ ಸಸ್ಯಗಳು ಆಹಾರ. ಕೋರೆಹಲ್ಲುಗಳಿರುವ ಪ್ರಾಣಿಗಳಿಗೆ ಕೋರೆಹಲ್ಲುಗಳಿಲ್ಲದ ಪ್ರಾಣಿಗಳು ಆಹಾರ. ಕೈಗಳಿರತಕ್ಕವರಿಗೆ ಕೈಗಳಿಲ್ಲದವು ಆಹಾರ. ಶೂರರಿಗೆ ಹೇಡಿಗಳು ಆಹಾರ."

Survival of the fittest – ಬಲಶಾಲಿಯೇ ಬದುಕಿ ಉಳಿಯುವುದು – ಎಂಬುದರ ಯಥಾರ್ಥತೆಯ ಸುಂದರ ವಿವರಣೆ ಇದು.

ಮನುಷ್ಯನು ಪ್ರಾಣಿಗಳಲ್ಲಿ ಉಳಿದೆಲ್ಲ ಪ್ರಾಣಿಗಳ ಮೇಲೂ ತನ್ನ ಸ್ವಾಮ್ಯವನ್ನು ಸ್ಥಾಪಿಸಿಕೊಂಡಿದ್ದಾನೆ. ಮನುಷ್ಯರಲ್ಲಿಯೂ ಶೂರರು ದುರ್ಬಲರನ್ನು ತುಳಿದು ಆಳುತ್ತ ಬಂದಿದ್ದಾರೆಂಬುದು ಇತಿಹಾಸಸಿದ್ಧವಾದದ್ದು. ಯಾವುದು ಹಿಂಸೆ ? ಯಾವುದು ಅಹಿಂಸೆ ? ಸೂಕ್ಷ್ಮವಾಗಿ ಅವಲೋಕಿಸಿದರೆ ಇನ್ನೊಬ್ಬರಿಗೆ ಹಿಂಸೆ ಮಾಡದೆ ಯಾವ ಪ್ರಾಣಿಯೂ, ಗಿಡ–ಬಳ್ಳಿಗಳೂ ಸಹ ಬದುಕಿರಲು ಸಾಧ್ಯವಿಲ್ಲ. ಕ್ರಿಮಿ–ಕೀಟಗಳನ್ನು ಅವಲೋಕಿಸಿದರೆ ಇನ್ನೊಬ್ಬರಿಗೆ ಹಿಂಸೆ ಮಾಡದೆ ಯಾವ ಪ್ರಾಣಿಯೂ, ಗಿಡ-ಬಳ್ಳಿಗಳೂ ಸಹ ಬದುಕಿರಲು ಸಾಧ್ಯವಿಲ್ಲ. ಕ್ರಿಮಿ–ಕೀಟಗಳನ್ನು ತನ್ನ ಅನುಕೂಲಕ್ಕಾಗಿ ಮಾನವನು ಕೊಲ್ಲುವುದು ಹಿಂಸೆಯಲ್ಲವೆ ? ಪ್ರಾಣಿಯು ಚಿಕ್ಕದಾದರೆ ಮನುಷ್ಯನ ದೃಷ್ಟಿಯಲ್ಲಿ ಹಿಂಸೆಯಲ್ಲ. ಹಿಂಸೆಯಾದರೂ ಅತ್ಯಲ್ಪವೆಂದೇ ತಿಳಿದು ಉಪೇಕ್ಷಿಸು

ತ್ತಾನೆ. ಪ್ರಾಣಿ ದೊಡ್ಡದಾದಷ್ಟೂ, ತನಗೆ ಉಪಕಾರಿಯಾದಷ್ಟೂ–ಹಿಂಸೆಯ ಪ್ರಮಾಣವೂ ದೊಡ್ಡದೆನ್ನುತ್ತಾನೆ ! ಮೇಕೆ, ಹಸು, ಕುದುರೆ, ಆನೆಗಳನ್ನು ಕೊಂದರೆ ಇವನ ಅನುಕಂಪ ಉಕ್ಕಿಹರಿಯುತ್ತದೆ. ತನ್ನ ಜಾತಿಯ ಮಾನವನನ್ನೇ ಕೊಂದಾಗ ಅದಕ್ಕೆ ಕೊಲೆಯೆಂದು ಹೆಸರಿಟ್ಟು ಅಪರಾಧಿಗೆ ಮರಣದಂಡನೆಯನ್ನು ವಿಧಿಸುವವರೆಗೆ ಹೋಗುತ್ತಾನೆ.

'ಅದ್ಯತೇ ಅತ್ತಿ ಚ ಭೂತಾನಿ, ತಸ್ಮಾದನ್ನಂ ತದುಚ್ಯತ ಇತಿ' ಎನ್ನುತ್ತದೆ ತೈತ್ತಿರೀಯೋಪನಿಷತ್ತು: "ಪ್ರಾಣಿಗಳಿಂದ ತಿನ್ನಲ್ಪಡುತ್ತದೆ ಮತ್ತು ಪ್ರಾಣಿ ಗಳನ್ನು ತಾನೂ ತಿನ್ನುತ್ತದೆ. ಆದ್ದರಿಂದ ಅದಕ್ಕೆ ಅನ್ನವೆಂದು ಹೆಸರು." ಅನ್ನ ತಿನ್ನತಕ್ಕವರು ಎಲ್ಲಿಂದ ಹುಟ್ಟಿದರು ? ಓಷಧಿಗಳಿಂದ. ಓಷಧಿಗಳೆಂದರೆ ಸಸ್ಯಗಳು—ಬತ್ತ, ರಾಗಿ ಮೊದಲಾದವು. ವಾಸ್ತವದಲ್ಲಿ ಓಷಧಿಗಳೇ ಅನ್ನ ತಿನ್ನತಕ್ಕವು. ತಮಗೆ ಜನ್ಮವಿತ್ತ ಪಂಚಭೂತಗಳನ್ನು ತಿಂದು ಅವು ಬದುಕಿವೆ.

ಜಿಂಕೆ ಹುಲಿಗೆ ಅನ್ನ. ಹುಲಿಯ ದೇಹವನ್ನು ಬೆಳೆಸಿದ ಈ ಜಿಂಕೆ ಹುಲಿಯ ರೂಪದಿಂದ ಇನ್ನೊಂದು ಜಿಂಕೆಯನ್ನು ತಿನ್ನುತ್ತದೆ. ಸಸ್ಯಗಳನ್ನೂ ಪ್ರಾಣಿಗಳನ್ನೂ ತಿನ್ನುವ ಮನುಷ್ಯ ತಾನೇ ಸತ್ತು ಮಣ್ಣಾಗಿ, ಬೂದಿಯಾಗಿ ಇನ್ನೊಂದಕ್ಕೆ ಆಹಾರವಾಗುತ್ತಾನೆ. ಹೀಗೆ ಸೃಷ್ಟಿಚಕ್ರ ಸುತ್ತುತ್ತಲೇ ಇರುತ್ತದೆ. ಇದು ಹಿಂಸೆ, ಇದು ಅಹಿಂಸೆ – ಎನ್ನುವುದು ಮನುಷ್ಯನ ವಿಚಾರಶಕ್ತಿಗೆ ನಿಲುಕತಕ್ಕದ್ದೇ ಅಲ್ಲ. ಶಾಸ್ತ್ರದಿಂದ ಮಾತ್ರ ಅದರ ವ್ಯವಸ್ಥೆ.

**ಯಾತ್ರಾಮಾತ್ರಪ್ರಸಿದ್ಧ್ಯರ್ಥಂ ಸ್ವೈಃ ಕರ್ಮಭಿರಗರ್ಹಿತೈಃ |**
**ಅಕ್ಲೇಶೇನ ಶರೀರಸ್ಯ ಕುರ್ವೀತ ಧನಸಂಚಯಮ್ ||** || ೯೩ ||

— ಮನುಸ್ಮೃತಿ, ೪-೩

"ತನಗೆ ಯೋಗ್ಯವಾದ ಮತ್ತು ನಿಂದನೀಯವಲ್ಲದ ಕೆಲಸಗಳಿಂದ ಧನವನ್ನು ಸಂಪಾದಿಸಬೇಕು. ನಿತ್ಯಜೀವನವನ್ನು ಸಾಗಿಸಲು ಬೇಕಾದಷ್ಟು ಹಣವಾದರೆ ಸಾಕು. ಹಣಕ್ಕಾಗಿ ಶರೀರವನ್ನು ಅತಿಯಾಗಿ ಆಯಾಸಗೊಳಿಸಬಾರದು."

ಮನುಷ್ಯನ ಆಸೆ, ಆಕಾಂಕ್ಷೆಗಳನ್ನು ಯಾವ ಧರ್ಮವೂ ಅದುಮ ಲಾರದು. ಆದರೆ ಅವುಗಳಿಗೆ ಒಂದು ಮಿತಿಯನ್ನೂ, ಅವುಗಳನ್ನು ತೀರಿಸಿ ಕೊಳ್ಳುವ ಒಂದು ವಿಧಾನವನ್ನೂ ಧರ್ಮಶಾಸ್ತ್ರ ಬೋಧಿಸುತ್ತದೆ. ಸುಖಲಾಲಸೆ ಒಂದು ಹಿಡಿತದಲ್ಲಿರಲಿ, ಅದರ ಬೆನ್ನುಹತ್ತಿದರೆ ಆಸೆ ಪೂರ್ಣವಾಗುವುದಿರಲಿ, ನಿನ್ನನ್ನೇ ದೊಡ್ಡ ಕೊರಕಲಿಗೆ ಬೀಳಿಸುತ್ತದೆ ಎನ್ನುತ್ತದೆ ಧರ್ಮಶಾಸ್ತ್ರ. ಮಾನವನಿಗೆ ಧರ್ಮ–ಮೋಕ್ಷಗಳೇ ಪರಮಲಕ್ಷ್ಯಗಳು. ಅವುಗಳ ಸಾಧನೆಗೆ ಶರೀರ ಬೇಕು. ಶರೀರದ ನಿರ್ವಹಣೆಗಾಗಿ ಹಣ. ಹಣಕ್ಕಾಗಿ ದೇಹವನ್ನು ದುಡಿಸಬೇಕು. ಯಾವ ಬಗೆಯ ದುಡಿತ ? ಕೃಷಿ, ವ್ಯಾಪಾರ, ಅಧ್ಯಾಪನ, ಸೇವೆ–ಇವುಗಳಲ್ಲಿ ಯಾವುದನ್ನು ಮಾಡಲು ನೀನು ಯೋಗ್ಯತೆಯನ್ನು ಸಂಪಾದಿಸಿದ್ದೀಯೋ ಆ ಬಗೆಯ ದುಡಿತಕ್ಕೆ ಕೈಹಾಕು ಎನ್ನುತ್ತದೆ ಮನುಸ್ಮೃತಿ. ಅಗರ್ಹಿತ್ಯೈಃ–ಆ ದುಡಿತ ನಿಂದಾರ್ಹವಾಗಿರಬಾರದು. ಕಳ್ಳತನ, ವಂಚನೆ, ಹಿಂಸೆ ಮೊದಲಾದವು ನಿಂದಿತವಾದವು. ಇನ್ನೊಂದು ಗಮನಿಸತಕ್ಕ ಅಂಶವೇನೆಂದರೆ – ಅಕ್ಲೇಶೇನ ಶರೀರಸ್ಯ–ಶರೀರಕ್ಕೆ ಅತಿಯಾದ ಕ್ಲೇಶವಾಗ ದಂತೆ ಹಣವನ್ನು ಗಳಿಸಬೇಕೆಂಬುದು. 'ಶ್ರಮವಹಿಸಬಾರದು' ಎಂದು ಇದರ ಅರ್ಥವಲ್ಲ. ಹಗಲೂರಾತ್ರಿ ಧನಾರ್ಜನೆಗಾಗಿಯೇ ಕಾಲವನ್ನು ಕಳೆಯಬೇಡ, ನಿನ್ನ ಮುಖ್ಯ ಕರ್ತವ್ಯ ಬೇರೆ ಇದೆ ಎಂದು ಆ ಮಾತಿನ ಅಭಿಪ್ರಾಯ.

ಈಗ ನಮ್ಮ ಜೀವನದ ಮೌಲ್ಯ ಬದಲಾವಣೆಯಾಗಿದೆ. ಸಂಪಾದನೆಯ ಮಾರ್ಗ ಯಾವುದಾದರೂ ಚಿಂತೆ ಇಲ್ಲ. ನಿಂದಿತ–ಅನಿಂದಿತಗಳಲ್ಲಿ ನಮ್ಮದು ಸಮದೃಷ್ಟಿ ! ಲಾಭಕ್ಕಾಗಿ ವ್ಯಾಪಾರ. ಎಲ್ಲಿ ಹೆಚ್ಚಾದ ಲಾಭ ಉಂಟೋ ಅಲ್ಲಿಗೆ ಪ್ರವೇಶ. ಕೆಲಸದ ಪರಿಚಯವಿಲ್ಲದಿದ್ದರೆ ಅಭ್ಯಾಸದಿಂದ ಮುಂದೆ ಪರಿಚಯವಾದೀತು. ಪರಿಚಯವಾಗದಿದ್ದರೆ ತಾನೆ ಏನು ? ದಿನ ಕಳೆದರೆ ಹಣ ಬರುವುದಾದರೆ ಸಾಕು. ಮನುಷ್ಯನು ತನ್ನ ಸೇವೆಗಾಗಿ ನಿರ್ಮಿಸಿಕೊಂಡ ಹಣ, ಇಂದು ಅವನ ಆರಾಧ್ಯದೇವತೆಯಾಗಿದೆ. ಶರೀರದ ಸೇವೆಗಾಗಿ ಧನ ಎಂದು ಮನು ಹೇಳಿದರೆ, ಧನದ ಸೇವೆಗಾಗಿ ಶರೀರ ಎಂದು ಮನುವಿನ ಸಂತತಿ ಭಾವಿಸಿದೆ !

ಮೂಲಂ ದೋಷಸ್ಯ ಹಿಂಸಾದೇರರ್ಥಕಾಮೌ ಸ್ಮ ಮಾ ಪುಷಃ |
ತೌ ಹಿ ತತ್ತ್ವಾವಬೋಧಸ್ಯ ದುರಚ್ಛೇದಾವುಪಪ್ಲವೌ || || ೬೪ ||

— ಕಿರಾತಾರ್ಜುನೀಯ, ೧೧-೨೦

"ಹಿಂಸೆ, ಸುಳ್ಳು, ಕಳ್ಳತನ ಮೊದಲಾದ ದೋಷಗಳಿಗೆ ಅರ್ಥ, ಕಾಮಗಳು ಮೂಲಕಾರಣವಾದವುಗಳು. ಅವನ್ನು ಬೆಳೆಸಿಕೊಳ್ಳಬೇಡ. ಅರ್ಥ (ಹಣ), ಕಾಮ (ಭೋಗಸಾಮಗ್ರಿ)ಗಳು ತತ್ತ್ವಜ್ಞಾನಕ್ಕೆ ದುರ್ವಾರವಾದ ವಿಘ್ನಗಳು."

ಧರ್ಮ, ಅರ್ಥ, ಕಾಮ, ಮೋಕ್ಷ—ಎಂಬವು ನಾಲ್ಕು ಪುರುಷಾರ್ಥಗಳೆಂದು ಪ್ರಸಿದ್ಧ. ಮಾನವನು ತನ್ನ ಜೀವನದ ಗುರಿಯೆಂದು ಈ ನಾಲ್ಕನ್ನು ಗಣಿಸತಕ್ಕದ್ದೆಂದೂ ಇವುಗಳ ಸಾಧನೆಗಾಗಿ ಸದಾ ಶ್ರಮಿಸತಕ್ಕದ್ದೆಂದೂ ಹೇಳಲಾಗಿದೆ. ಹೀಗಿರುವಾಗ ಈ ಅರ್ಥ—ಕಾಮಗಳನ್ನಿಲ್ಲಿ ನಿಂದಿಸುವ ಉದ್ದೇಶ ವೇನು ?

ಅರ್ಥಕಾಮೌ ಸ್ಮ ಮಾ ಪುಷಃ – ಅರ್ಥ—ಕಾಮಗಳನ್ನು ಹೆಚ್ಚಿಸಿಕೊಳ್ಳಬೇಡ ಎಂದು ಇಲ್ಲಿ ಉಪದೇಶವಿದೆಯೇ ಹೊರತು ಸರ್ವಥಾ ಇವನ್ನು ಗಳಿಸಬೇಡವೆಂದು ನಿಷೇಧವಿಲ್ಲ. ದೈನ್ಯದಿಂದ ಇನ್ನೊಬ್ಬರ ಮುಖವನ್ನು ನೋಡದೆ ಜೀವಿಸುವುದಕ್ಕೆ ಎಷ್ಟು ಬೇಕೋ ಅಷ್ಟು ಅರ್ಥ—ಕಾಮಗಳಿದ್ದರೆ ಸಾಕು. ಅರ್ಥದ ಮೇಲಿನ ಆಸೆ ಬೆಳೆಯಿತೆಂದರೆ ಅನರ್ಥವೇ. ಧರ್ಮವೆಂಬ ಏಣಿಯನ್ನೇರಿನಿಂತು ಮೋಕ್ಷವೆಂಬ ಎತ್ತರದ ಹಣ್ಣಿಗೆ ಕೈಚಾಚಬೇಕಾಗಿದೆ. ಅರ್ಥ, ಕಾಮಗಳು ಕಾಲೂರಿ ನಿಲ್ಲುವ ಏಣಿಯ ಎರಡು ಆರೆಕಾಲುಗಳು. ಅವುಗಳ ಮೇಲೆ ಮೆಲ್ಲಗೆ ಕಾಲೂರಿ ಹಣ್ಣನ್ನು ಕಿತ್ತುಕೊಳ್ಳಬೇಕು; ನೃತ್ಯ ಮಾಡಿದರೆ ಅವು ಮುರಿದು ನೆಲಕ್ಕೆ ಉರುಳಿಸುತ್ತವೆ.

ಇಂದು ಸರ್ಕಾರದ ಧೋರಣೆಗಳಿಂದಾಗಿ ಜನರಲ್ಲಿ ಹಣದ ಓಡಾಟ ಬಹಳವಾಗಿದೆ. ಜನತೆಯಲ್ಲಿ ಗುಣ ಹೆಚ್ಚಿತೇನು ? ಹಿಂದೆ ಇದ್ದಂತೆ ನೌಕರರಲ್ಲಿ ಕಡುಬಡವರು ಯಾರೂ ಇಲ್ಲ. ಕರ್ತವ್ಯಪಾಲನೆ ಅವರಲ್ಲಿ ಉತ್ತಮವಾಗಲೂ ಇಲ್ಲ. ಲಂಚಗುಳಿತನ ತಪ್ಪಲೂ ಇಲ್ಲ. ಪ್ರತಿಯಾಗಿ ಇನ್ನೂ ಅಧಿಕವಾಯಿತು.

ವಿದ್ಯಾರ್ಥಿಗಳಲ್ಲಿ ಶೇಕಡ ಮೂವತ್ನಾಲ್ಕು ಮಂದಿ ಕುಡುಕರೆಂದೂ ವಿದ್ಯಾರ್ಥಿನಿಯರೂ ಸಹ ಈ ಚಟಕ್ಕೆ ಬಲಿಯಾಗಿದ್ದಾರೆಂದೂ ಒಂದು ಸಮೀಕ್ಷೆ ತಿಳಿಸಿದೆ.

ಹಣ ಹರಡಿದಷ್ಟೂ ಗುಣ ಮೂಲೆಗೆ ಸರಿಯಿತು. ದಾನಿಯಾದವರು ಯಾರು ? ಬಡವರು ಸತ್ಯವ್ರತರೆಂದೂ ಧರ್ಮವೀರರೆಂದೂ ಇದರ ಅರ್ಥವಲ್ಲ. ಬಡತನ–ಪುಂಡತನಗಳಿಗಾಗಲಿ, ಹಣವಂತಿಕೆ, ಗುಣವಂತಿಕೆಗಳಿಗಾಗಲಿ ಯಾವ ಸಂಬಂಧವೂ ಇಲ್ಲ ಎನ್ನುವುದು ಮಾತ್ರ ಇದರ ಅರ್ಥ. ಬಡತನವು ಅಪರಾಧಗಳ ತವರುಮನೆಯಲ್ಲ, ಧನಮದವೇ ಅಪರಾಧಗಳ ತವರುಮನೆ. ಕಣ್ಣಿಲ್ಲದವನು ಕುರುಡನಲ್ಲ. ಅರ್ಥ–ಕಾಮಗಳ ಬೆನ್ನುಹತ್ತಿದವನು ಕುರುಡ.

**ಅಬ್ರುವನ್ ಕಸ್ಯಚನ್ನಿಂದಾಮಾತ್ಮಪೂಜಾಮವರ್ಣಯನ್ ।**
**ನ ಕಶ್ಚಿದ್ ಗುಣಸಂಪನ್ನಃ ಪ್ರಕಾಶೋ ಭುವಿ ದೃಶ್ಯತೇ ॥ ॥ ೬೫ ॥**

— ಮಹಾಭಾರತ, ವನಪರ್ವ, ೨೦೭-೫೦

"ಇನ್ನೊಬ್ಬರನ್ನು ನಿಂದಿಸದೆ, ತನ್ನನ್ನು ಹೊಗಳಿಕೊಳ್ಳದೆ ಇರತಕ್ಕ ಯಾವ ಗುಣಶಾಲಿಯೂ ಜಗತ್ತಿನಲ್ಲಿ ಸ್ಪಷ್ಟವಾಗಿ ಕಂಡುಬರುವುದಿಲ್ಲ."

ಇನ್ನೊಬ್ಬರಲ್ಲಿ ತಪ್ಪನ್ನು ಕಂಡುಹಿಡಿಯುವ ಪ್ರವೃತ್ತಿ ಮಾನವನಿಗೆ ಸ್ವಾಭಾವಿಕವೆಂದು ತೋರುತ್ತದೆ. ಮೊಸರಲ್ಲಿ ಕಲ್ಲು ಸಿಕ್ಕಿದಂತೆ ಏನಾದರೊಂದು ತಪ್ಪು ಸಿಗುತ್ತದೆ. ಹಾಗೆಯೇ ಆತ್ಮಪೂಜೆ ಅತಿಯಾಗಿಯೋ ಮಿತವಾಗಿಯೋ ಇದ್ದೇ ಇರುತ್ತದೆ.

ಮಹಾಭಾರತದ ಕರ್ಣಪರ್ವದಲ್ಲಿ ರೋಚಕವಾದ ಒಂದು ಪ್ರಸಂಗ ಬರುತ್ತದೆ. ಧರ್ಮರಾಜನು ಯುದ್ಧದಲ್ಲಿ ಕರ್ಣನಿಗೆ ಬಲವಾದ ಪೆಟ್ಟನ್ನು ತಿಂದು ಶಿಬಿರಕ್ಕೆ ಹಿಂದಿರುಗಿ ಬಂದಿರುತ್ತಾನೆ. ಅವನ ಕುಶಲವನ್ನು ವಿಚಾರಿಸಲು ಅರ್ಜುನನು ಬರುತ್ತಾನೆ. ಕರ್ಣನನ್ನು ಕೊಲ್ಲದೆ ಅರ್ಜುನನು ಬಂದಿದ್ದಾನೆಂಬುದನ್ನು ತಿಳಿದು ಶೋಕ, ಕ್ರೋಧಗಳಿಂದ ಬುದ್ಧಿಗೆಟ್ಟ ಧರ್ಮರಾಜ

ಅರ್ಜುನನನ್ನು ಹುಚ್ಚುಹುಚ್ಚಾಗಿ ನಿಂದಿಸಿ, "ನಿನಗೆ ಗಾಂಡೀವಧನುಸ್ಸಿನಿಂದೇನು ? ಅದನ್ನು ಯಾರಿಗಾದರೂ ಕೊಟ್ಟುಬಿಡು!" ಎನ್ನುತ್ತಾನೆ. ಅರ್ಜುನ ರೋಷದಿಂದ ಖಡ್ಗವನ್ನು ಹಿರಿಯುತ್ತಾನೆ. ಬಳಿಯಲ್ಲಿಯೇ ಇದ್ದ ಶ್ರೀಕೃಷ್ಣ "ಅರ್ಜುನ, ಇದೇಕೆ ಖಡ್ಗವನ್ನು ಹಿರಿದೆ ?" ಎಂದು ಕೇಳಿದಾಗ, "ಕೃಷ್ಣ, ಈತನು ನನ್ನ ಪೌರುಷವನ್ನು ಧಿಕ್ಕರಿಸಿದ್ದಾನೆ ; ಅಂತಹವರನ್ನು ಕೊಲ್ಲುತ್ತೇನೆ ಎನ್ನುವುದು ನನ್ನ ಪ್ರತಿಜ್ಞೆ !" ಎನ್ನುತ್ತಾನೆ ಅರ್ಜುನ. ಪರಿಸ್ಥಿತಿ ವಿಪರೀತವಾಯಿತೆಂದರಿತು ಶ್ರೀಕೃಷ್ಣ ಅರ್ಜುನನನ್ನು ಛೇಡಿಸಿ ಬುದ್ಧಿವಾದ ಹೇಳುತ್ತಾನೆ: "ಅರ್ಜುನ, ಹಿರಿಯರನ್ನು ನಿಂದಿಸಿದರೆ ಅವರನ್ನು ವಧಿಸಿದಂತೆಯೇ. ಅಣ್ಣನನ್ನು ನಿಂದಿಸಿದರೆ ನಿನ್ನ ಪ್ರತಿಜ್ಞೆ ಈಡೇರಿದಂತೆ ಆಗುವುದು." ಅರ್ಜುನ ಖಡ್ಗವನ್ನು ಒರೆಗೆ ಸೇರಿಸಿ ಧರ್ಮರಾಜನನ್ನು ವಿಧವಿಧವಾಗಿ ನಿಂದಿಸುತ್ತ ಹಂಗಿಸುತ್ತಾನೆ. ಅನಂತರ ಮತ್ತೆ ಖಡ್ಗವನ್ನು ಹಿರಿಯುತ್ತಾನೆ. "ಇದೇಕೆ ?" ಎಂಬ ಶ್ರೀಕೃಷ್ಣನ ಪ್ರಶ್ನೆಗೆ ಅರ್ಜುನ, "ಅಣ್ಣನನ್ನು ನಿಂದಿಸಿದ ಪಾಪಿ ನಾನು. ನನ್ನ ತಲೆಯನ್ನು ಕತ್ತರಿಸಿಕೊಳ್ಳುತ್ತೇನೆ !" ಎಂದು ಉತ್ತರಿಸುತ್ತಾನೆ. ಆಗ ಶ್ರೀಕೃಷ್ಣ, "ಅರ್ಜುನ, ನೀನು ಅವಿವೇಕಿ. ನಿನ್ನ ಗುಣಗಳನ್ನೂ ಪೌರುಷವನ್ನೂ ವರ್ಣಿಸಿಕೋ. ಅದೇ ಆತ್ಮಹತ್ಯೆ ! ಅದೇ ಪ್ರಾಯಶ್ಚಿತ್ತ !" ಎಂದು ತಿಳಿಸುತ್ತಾನೆ. ಅರ್ಜುನ ಆತ್ಮಸ್ತುತಿಯಿಂದ ಪರನಿಂದಾಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆ.

ಆತ್ಮಸ್ತುತಿಯೇ ಆತ್ಮಹತ್ಯೆ; ಪರನಿಂದೆಯೇ ಪರವಧೆ !

**ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಂ ಕ್ವಚಿತ್ ।**
**ತೇಷಾಂ ಯತ್ ಸ್ವವಚೋಯುಕ್ತಂ ಬುದ್ಧಿಮಾಂಸ್ತತ್**
**ಸಮಾಚರೇತ್ ॥ ॥ ೯೬ ॥**

— ಭಾಗವತ, ೧೦-೩೩-೩೨

"ಈಶ್ವರರ ಉಪದೇಶ ಯಾವುದೋ ಅದು ಸತ್ಯವೆಂದು ತಿಳಿಯ ತಕ್ಕದ್ದು. ಅವರ ಆಚರಣೆ ಕೆಲವು ಸಂದರ್ಭಗಳಲ್ಲಿ ಮಾತ್ರ ಪ್ರಮಾಣ

ವಾಗುತ್ತದೆ. ಅವರು ಉಪದೇಶಿಸಿದಂತೆ ಎಲ್ಲಿ ಆಚರಿಸುತ್ತಾರೋ ಅಂಥ ಆಚರಣೆಯನ್ನು ಮಾತ್ರ ಬುದ್ಧಿಶಾಲಿಯು ನಡೆಸಬೇಕು."

ಇಲ್ಲಿ ಈಶ್ವರನಾದವನ ಉಪದೇಶ ಸತ್ಯವಾದದ್ದು, ಅದು ನಮಗೆ ಪ್ರಮಾಣವೆನ್ನುವುದು ಸರಿ. ಆದರೆ ಅವರ ಆಚರಣೆ 'ಕೆಲವು ಸಂದರ್ಭಗಳಲ್ಲಿ ಮಾತ್ರ ಪ್ರಮಾಣ' ಎನ್ನಲು ಕಾರಣವೇನು ?

ಏಕೆಂದರೆ, ನಾವುಗಳು ಕಾಮ—ಕ್ರೋಧಗಳಿಗೆ ವಶರಾಗತಕ್ಕವರು, ಇಂದ್ರಿಯಗಳ ಮೇಲೆ ಹಿಡಿತವಿಲ್ಲದವರು, ಮನೋವಿಕಾರಗಳನ್ನು ತಡೆಯಲಾರದವರು, ಇಂತಹ ದೌರ್ಬಲ್ಯವುಳ್ಳವರಾದ್ದರಿಂದ ನಾವು ಅನೀಶ್ವರರು. ನಮ್ಮ ಪ್ರವೃತ್ತಿ ಸ್ವಾರ್ಥಮೂಲವಾದದ್ದು.

ಈಶ್ವರರಾದರೋ ಇಂದ್ರಿಯಗಳನ್ನು ಜಯಿಸಿದವರು, ಮನೋವಿಕಾರಕ್ಕೆ ಒಳಗಾಗದವರು, ಸ್ವಾರ್ಥಲೇಶವೂ ಇಲ್ಲದವರು. ಅವರ ಪ್ರವೃತ್ತಿ ಏನಿದ್ದರೂ ಪರಾರ್ಥಕ್ಕಾಗಿ, ಲೋಕಶಿಕ್ಷಣಕ್ಕಾಗಿ. ಅವರಿಗೆ ರಾಗದ್ವೇಷಗಳಿಲ್ಲದ್ದರಿಂದ ಕರ್ಮಫಲದ ಲೇಪವಿಲ್ಲ. ಪಾಪ—ಪುಣ್ಯಗಳಾವುವೂ ಅಂಟುವುದಿಲ್ಲ. ಗಾಳಿಯಲ್ಲಿ ಹತ್ತಿಯು ಎತ್ತಲೋ ಹಾರಿಹೋದಂತೆ, ಹೊಳೆಯಲ್ಲಿ ಎಲೆ ತೇಲಿಹೋದಂತೆ ಅವರ ಪ್ರವೃತ್ತಿ. ಅದು ನಮಗೆ ಅನುಕರಣೀಯವಲ್ಲ.

ಒಂದಾನೊಂದು ಲೋಕಶಿಕ್ಷಣಕ್ಕಾಗಿ, ಲೋಕಹಿತಕ್ಕಾಗಿ ಈಶ್ವರರಿಗೆ ಅಂತಹ ಕಾರ್ಯದಲ್ಲಿ ಪ್ರವೃತ್ತಿ ಬರಬಹುದು. ಕಾರುಣ್ಯದಿಂದ ನಡೆದ ಆ ಕಾರ್ಯ ಅನ್ಯರಿಗೆ ಶಕ್ಯವಲ್ಲ, ಆದರ್ಶವೂ ಅಲ್ಲ. ಕೃಷ್ಣನ ಗೋಪೀವಿಲಾಸವನ್ನೆ ಈ ದೃಷ್ಟಿಯಿಂದ ನೋಡಿದಾಗ ಉತ್ತರ ದೊರೆಯುತ್ತದೆ :

ಗೋಪಿಯರ ಒಂದು ವಿಚಿತ್ರವಾದ ಮನೋವಿಕಾರವನ್ನು ತಿದ್ದಿ ಅವರನ್ನು ದಾರಿಗೆ ತರುವುದು ಶ್ರೀಕೃಷ್ಣಪರಮಾತ್ಮನ ಉದ್ದೇಶವಾಗಿತ್ತು. ಇನ್ನೆಲ್ಲಿಯೂ ಕಾಣಲಾಗದ ಲೋಕಾತೀತವಾದ ಒಂದು ಅನುರಾಗ ಗೋಪಿಯರಿಗೆ ಶ್ರೀಕೃಷ್ಣನಲ್ಲಿ ಉದಯಿಸಿತ್ತು. ಅವರ ಅನುರಕ್ತಿ ಭಗವದ್ಭಕ್ತಿಯಾಗಿ ಮಾರ್ಪಟ್ಟದ್ದು ಶ್ರೀಕೃಷ್ಣನ ಮಹಿಮೆಯಿಂದ. ರಕ್ತಿಯೇ ಭಕ್ತಿಯಾಗಿ

ಗೋಪಿಯರನ್ನು ಉದ್ಧರಿಸಿತು. ಏಕೆಂದರೆ, ಅವರ ಅನುರಾಗ ಭಗವಂತನಲ್ಲಿ ಉದಯಿಸಿತ್ತು.

**ಏಕಂ ವಿಷರಸೋ ಹಂತಿ ಶಸ್ತ್ರೇಣೈಕಶ್ಚ ಬಾಧ್ಯತೇ |**
**ಸರಾಷ್ಟ್ರಂ ಸಪ್ರಜಂ ಹಂತಿ ರಾಜಾನಂ ಮಂತ್ರವಿಸ್ರವಃ || || ೬೭ ||**

— ಸುಭಾಷಿತಸುಧಾನಿಧಿ

"ವಿಷರಸವು ಒಬ್ಬನನ್ನು ಕೊಲ್ಲುತ್ತದೆ. ಶಸ್ತ್ರದಿಂದ ಒಬ್ಬನು ಸಾಯುತ್ತಾನೆ. ಆದರೆ ದಿಕ್ಕುಗೆಟ್ಟ ಮಂತ್ರಾಲೋಚನೆ ರಾಷ್ಟ್ರವನ್ನೂ ಪ್ರಜೆಗಳನ್ನೂ ರಾಜನನ್ನೂ ನಾಶಮಾಡುತ್ತದೆ."

ರಾಜನ ಮಂತ್ರಾಲೋಚನೆ ಎಷ್ಟು ಪ್ರಧಾನವಾದದ್ದು, ಎಷ್ಟು ಪ್ರಭಾವಶಾಲಿಯಾದದ್ದು – ಎಂಬುದನ್ನು ಈ ಶ್ಲೋಕ ಎತ್ತಿತೋರಿಸುತ್ತದೆ. ಹಿಂದೆ ನಡೆದುಹೋದ ಹಲವಾರು ರಾಜ್ಯವಿಪ್ಲವಗಳಿಗೆ ಅಪಕ್ವ ಮಂತ್ರಾಲೋಚನೆಯೇ ಕಾರಣವೆಂದು ಇತಿಹಾಸವೇ ಸಾರುತ್ತದೆ. ಅಹಂಕಾರ ಮಮಕಾರಗಳೂ, ಔದ್ಧತ್ಯವೂ ದುರ್ಮಂತ್ರದ ಬೀಜಗಳು. ಈ ದುರ್ಮಂತ್ರಗಳಿಂದಲೇ ಸುಪ್ರತಿಷ್ಠಿತ ರಾಜ್ಯಗಳು ಉರುಳಿಬಿದ್ದವು; ರಾಜಮನೆತನಗಳು ಅಳಿದವು.

ರಾಜ, ಮಂತ್ರಿ – ಇವರಿಬ್ಬರೂ ರಾಷ್ಟ್ರರಥವನ್ನೆಳೆಯುವ ಎರಡು ಅಶ್ವಗಳು. ಈ ಅಶ್ವಗಳು ಸಮವೇಗದಲ್ಲಿ ಸಮದಿಕ್ಕಿನಲ್ಲಿ ಎಳೆದರೆ ರಥವು ಸುಲಲಿತವಾಗಿ ಸಾಗೀತು. ಎತ್ತು ಏರಿಗೆಳೆಯಿತು, ಕೋಣ ನೀರಿಗೆಳೆಯಿತು— ಎಂಬಂತಾದರೆ ರಥದ ಪಾಡೇನು ? ರಥದಲ್ಲಿ ಸಾಗುವ ಪ್ರಜೆಗಳ ಪಾಡೇನು? ರಥವನ್ನೆಳೆಯುವ ಅಶ್ವಗಳ ಪಾಡೇನು? ಎಡದ ಅಶ್ವ ಮುಖ್ಯವೋ ಬಲದ ಅಶ್ವ ಮುಖ್ಯವೋ – ಎಂಬ ವಿವಾದವೇ ಇಲ್ಲಿ ಸಲ್ಲದ್ದು. ಇದು ಎಡಕ್ಕೂ ಎಳೆಯಬಾರದು, ಅದು ಬಲಕ್ಕೂ ಎಳೆಯಬಾರದು. ಎರಡೂ ಸೇರಿ ಮಧ್ಯಗತಿಯನ್ನವಲಂಬಿಸಿದರೆ ಎಲ್ಲರಿಗೂ ಕ್ಷೇಮ.

ಪ್ರಧಾನಮಂತ್ರಿ ಜನರಿಂದ ಆರಿಸಲ್ಪಟ್ಟ ಶಾಸಕನೂ ಹೌದು, ಶಾಸಕರಿಂದ ಆರಿಸಲ್ಪಟ್ಟ ಪ್ರಧಾನಮಂತ್ರಿಯೂ ಹೌದು. ರಾಷ್ಟ್ರಪತಿಯಾದರೋ ಜನರಿಂದ ಆರಿಸಲ್ಪಟ್ಟ ಶಾಸಕರಿಂದ ಆರಿಸಲ್ಪಟ್ಟವನೇ. ಇಬ್ಬರೂ ಶೋಧಿತ ಶೋಧಿತರೇ. ಅವರಲ್ಲಿಯೇ ಪರಸ್ಪರ ನಂಬಿಕೆ ಹೋದರೆ? ಒಬ್ಬರಿಗೆ ಬಾಗುವ ಮಾನವಾದರೆ ಇನ್ನೊಬ್ಬರಿಗೆ ಬೀಗುವ ಮಾನವೇಕೆಂದು ಆರಿಸಿದ ಪ್ರಜೆಗಳಿಗೆ ಅರ್ಥವಾಗದು!

ಇಬ್ಬರಿಗಿಲ್ಲದ ಒಗ್ಗಟ್ಟು ಕೋಟಿ ಜನರಲ್ಲಿ ಮೂಡುವುದೆಂತು ? 'ಮಂತ್ರವಿಸ್ರವ'ವೆಂದರೆ ಹೀಗೆಯೇ.

**ಬಹವೋ ನ ವಿರೋದ್ಧವ್ಯಾ ದುರ್ಜಯಾ ಹಿ ಮಹಾಜನಾಃ |**
**ಸ್ಫುರಂತಮಪಿ ನಾಗೇಂದ್ರಂ ಭಕ್ಷಯಂತಿ ಪಿಪೀಲಿಕಾಃ || || ೯೪ ||**

— ಪಂಚತಂತ್ರ, ಕಾಕೋಲೂಕೀಯ, ೧೧೯

"ಬಹುಜನರೊಡನೆ ವಿರೋಧವನ್ನು ಕಟ್ಟಿಕೊಳ್ಳಬಾರದು. ಮಹಾಜನರನ್ನು ಗೆಲ್ಲುವುದು ಅಶಕ್ಯ. ಕೆರಳಿ ಬುಸುಗುಟ್ಟುವ ಮಹಾಸರ್ಪವನ್ನೂ ಸಹ ಇರುವೆಗಳು ಒಟ್ಟಾದರೆ ತಿಂದುಬಿಡುತ್ತವೆ."

ಬಹುಜನರೊಡನೆ ವಿರೋಧವನ್ನು ಕಟ್ಟಿಕೊಳ್ಳಬಾರದು—ಎಂಬ ನೀತಿ ಲೋಕದಲ್ಲಿ ಅನುಭವಕ್ಕೆ ಬಂದಿರುವ ತಥ್ಯ. ಸಾಮಾಜಿಕ ಕಟ್ಟುಪಾಡುಗಳೂ ರಾಜಕೀಯ ವ್ಯವಸ್ಥೆಗಳೂ ಬಹುಜನರ ಒಗ್ಗೂಡುವಿಕೆಯಿಂದ ಉರುಳಿಬಿದ್ದವೆಂಬುದು ಐತಿಹಾಸಿಕವಾದದ್ದು. ಸ್ಪರ್ಧಾಕ್ಷೇತ್ರದಲ್ಲಿ ಜನರಿಗೆ ಮಹತ್ವವನ್ನು ತಂದುಕೊಡತಕ್ಕದ್ದು ಸಂಖ್ಯಾಬಲ. ಕೆಲವೇ ಸಂದರ್ಭಗಳಲ್ಲಿ ಧನ, ಅಧಿಕಾರಗಳೂ ಮಹತ್ತ್ವವನ್ನು ತಂದುಕೊಡುತ್ತವೆ.

ಇಂದಿನ ರಾಜಕೀಯದಲ್ಲಂತೂ ಈ ನೀತಿವಾಕ್ಯಕ್ಕೆ ಬಹಳ ಮಹತ್ತ್ವ ಉಂಟು. ಬಹುಜನರ ಬಹುಮತಗಳಿಗೇ ಇಂದು ಬೆಲೆ. ವಿದ್ವಾಂಸನ ಮತಕ್ಕೆ ಇರುವಷ್ಟೇ ಬೆಲೆ ವಿದ್ಯಾಗಂಧವೂ ಇಲ್ಲದವನ ಮತಕ್ಕೆ ದೊರಕಿದೆ. ರಾಜನೀತಿಜ್ಞ, ದಕ್ಷ ಆಡಳಿತಗಾರ, ನಿಃಸ್ವಾರ್ಥಿ, ಪ್ರಜೆಗಳಿಗಾಗಿ ದುಡಿಯ ತಕ್ಕವನು

– ಮತದಾರರ ಬಹುಮತವಿಲ್ಲದಿದ್ದರೆ ನಿರ್ನಾಮವಾಗಿಬಿಡುತ್ತಾನೆ. ಮಹಾಜನರನ್ನು ಹೇಗಾದರೂ ಸರಿ ಒಲಿಸಿಕೊಳ್ಳಬೇಕೆಂಬುದು ಇಂದು ನೀತಿಯಾಗಿದೆ.

ಸಂಖ್ಯೆಯೇ ಪ್ರಧಾನವೆಂದಾಗ ಯಾರ ಸಂಖ್ಯೆ ಹೆಚ್ಚಿದೆಯೋ ಅವರೇ ಮಹಾಜನರು ! ಜನರನ್ನು ಒಟ್ಟುಗೂಡಿಸಿ ಸಂಖ್ಯಾಬಲದಿಂದ ಮಹತ್ತ್ವವನ್ನು ತಂದುಕೊಡತಕ್ಕದ್ದು ಜಾತಿ, ಮತ. 'ವೋಟು' ಎಂಬ ಶಬ್ದಕ್ಕೆ 'ಮತ' ಎಂದು ಭಾಷಾಂತರಿಸಿಕೊಟ್ಟವರ ಜಾಣ್ಮೆ ಮೆಚ್ಚತಕ್ಕದ್ದು ! ಜಾತಿಯನ್ನು ಬಿಟ್ಟರೆ ಭಾಷೆ ಎರಡನೆಯ ಸ್ಥಾನವನ್ನು ಗಳಿಸಿಕೊಂಡಿದೆ.

ಭಾಷಾವಾರು ಪ್ರಾಂತರಚನೆ ಯಾವ ಮುಹೂರ್ತದಲ್ಲಾಯಿತೋ ತಿಳಿಯದು. ಅನಂತರ ಭಾರತದಲ್ಲಿ ಎಷ್ಟು ರಾಜ್ಯಗಳು ತಲೆಯೆತ್ತಿದವು ? ಇನ್ನೂ ಎಷ್ಟು ತಲೆಯೆತ್ತಲು ಹವಣಿಸುತ್ತಿವೆ ? ಜಾತಿಯು ಭರತಖಂಡವನ್ನು ಇಬ್ಭಾಗವಾಗಿ ಒಡೆದರೆ, ಭಾಷೆ ಇದನ್ನು 'ಛಪ್ಪನ್ನ' ರಾಜ್ಯಗಳನ್ನಾಗಿ ಒಡೆಯುವ ಹಂಚಿಕೆಯನ್ನಿಟ್ಟುಕೊಂಡಿದೆ. ಜಾತಿಯ ನೆರಳಿನಲ್ಲಿ ಭಾಷೆ ಸಂಚರಿಸುತ್ತದೆ. ಭಾಷೆಯ ವೇಷದಲ್ಲಿ ಜಾತಿ ನುಸುಳುತ್ತದೆ. ಒಂದು ವಿಷಬೀಜವನ್ನು ಬಿತ್ತುತ್ತಲೇ ಇದೆ, ಇನ್ನೊಂದು ನೀರೆರೆಯುತ್ತಲೇ ಇದೆ. ಮಹಾಜನರು ಫಲವನ್ನು ಹಂಚುವ ಕೆಲಸದಲ್ಲಿ ನಿರತರಾಗಿದ್ದಾರೆ.

**ಕುತ್ರ ವಿಷಂ ದುಷ್ಟಜನೇ, ಕಿಮಿಹಾಶೌಚಂ ಭವೇದೃಣಂ ನೃಣಾಮ್।**
**ಕಿಮಭಯಮಿಹ ವೈರಾಗ್ಯಂ, ಭಯಮಪಿ ಕಿಂ**
**ವಿತ್ತಮೇವ ಸರ್ವೇಷಾಮ್ ॥ ॥ ೯೯ ॥**

— ಪ್ರಶ್ನೋತ್ತರ ರತ್ನಮಾಲಿಕಾ

"ವಿಷ ಎಲ್ಲಿರುವುದು ? ದುಷ್ಟಜನರಲ್ಲಿ. ಜನರಿಗೆ ಅಶೌಚ ಯಾವುದು? ಸಾಲ. ಭಯವನ್ನಿೀಯದ ವಸ್ತು ಯಾವುದು ? ವೈರಾಗ್ಯ. ಭಯಕ್ಕೆ ಕಾರಣ ಯಾವುದು? ಹಣವೇ ಎಲ್ಲರ ಭಯಕ್ಕೂ ಕಾರಣ."

ಹಾವಿಗೆ ಹಲ್ಲಿನಲ್ಲಿ ವಿಷ, ಚೇಳಿಗೆ ಪುಚ್ಛದಲ್ಲಿ ವಿಷ, ದುರ್ಜನರಿಗೆ ಮೈಯೆಲ್ಲ ವಿಷ – ಎಂಬ ನೀತಿಶ್ಲೋಕ ಉಂಟು. ಹಾವಿನ ಕಡಿತದ ಫಲ ಎರಡು ವಿಧ. ಉರಿ, ಊತ, ಕೊಳೆತ–ಇದು ಒಂದು ವಿಧ. ಸಾವು ಇನ್ನೊಂದು ವಿಧ. ಚೇಳು ಕುಟುಕಿದರೆ ಇದೇ ಬಗೆಯ ಸ್ವಲ್ಪ ಪರಿಣಾಮದ ಫಲ. ಇವೆಲ್ಲಕ್ಕೆ ಪರಿಣಾಮಕಾರಿಯಾದ ಚಿಕಿತ್ಸೆಯುಂಟು. ತನ್ನನ್ನು ಕೆಣಕಿದವರನ್ನು ಮಾತ್ರ ಹಾವು ಕಡಿದೀತು, ಚೇಳು ಕುಟುಕೀತು. ಇವು ಮೇಲೆ ಬಿದ್ದು ಮತ್ತೆ ಮತ್ತೆ ಪೀಡಿಸುವುದೂ ಇಲ್ಲ. ಆದರೆ ಕೆಟ್ಟ ಮನುಷ್ಯನೇನೂ ಕಚ್ಚುವುದಿಲ್ಲ. ಸಹವಾಸ ದಿಂದಲೇ ವಿಷವನ್ನು ತುಂಬಬಲ್ಲ. ಅದರ ಫಲ ಒಬ್ಬನಿಗಲ್ಲ, ಇಡಿಯ ಪರಿವಾರಕ್ಕೆ.

ಋಣ ಮನುಷ್ಯನಿಗೆ ಒಂದು ಕೊಳೆಯಂತೆ. ಮನಸ್ಸು, ಮಾತು, ಮೈ –ಎಲ್ಲವನ್ನೂ ವ್ಯಾಪಿಸುವ ಆಶೌಚ ಅದು. ಮನುಷ್ಯನು ಹುಟ್ಟುವಾಗಲೇ ಮೂರು ಋಣಗಳನ್ನು ಕಟ್ಟಿಕೊಂಡು ಬಂದಿರುತ್ತಾನೆಂದು ಧರ್ಮಶಾಸ್ತ್ರ ಹೇಳುತ್ತದೆ. ಪಿತೃಋಣ, ಋಷಿಋಣ, ದೇವಋಣಗಳೇ ಅವು. ಅವುಗಳನ್ನು ವಿಧಿವತ್ತಾಗಿ ತೀರಿಸಬೇಕು.

ನೇರವಾಗಿ ಹಣವನ್ನು ಸಾಲವಾಗಿ ಪಡೆದವರಂತೂ ಅದನ್ನು ತೀರಿಸಲೇ ಬೇಕು. ಅದು ಧರ್ಮಶಾಸನವೂ ಹೌದು, ರಾಜಶಾಸನವೂ ಹೌದು. ಸಾಲ ಎಂಬುದು ಶೂಲ. ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ಕೀಲು ಮುರಿದಂತೆ – ಎಂಬುದು ಬಲ್ಲವರ ಬೋಧನೆಯಾಗಿತ್ತು. ಎಲ್ಲರ ನಂಬಿಕೆಯಾಗಿತ್ತು. ರಾತ್ರಿಹೊತ್ತು ಊಟವನ್ನು ಬಿಟ್ಟು ಒಪ್ಪೊತ್ತಿನ ಊಟದ ಬೆಲೆ ಉಳಿಸಿ ಸಾಲ ತೀರಿಸಿದ ಸದ್‌ಗೃಹಸ್ಥರ ಕಾಲವೂ ಇತ್ತು. ಇಂದು ಕಾಲ ಬದಲಾಗಿದೆ. ಬ್ಯಾಂಕುಗಳೇ ಸಾಲಮೇಳವನ್ನು ನಡೆಸಿ ಕರೆಕರೆದು ಸಾಲ ನೀಡುತ್ತಿವೆ. 'ಸಾಲಮಾಡಿ ಬದುಕಿರೊ ! ನಾವು ಬದುಕಿರುವುದೂ ಸಾಲ ಮಾಡಿಯೇ !' ಎಂದು ಸರ್ಕಾರವೇ ಸಾರುತ್ತಿದೆ. ಸಾಲವೆಂಬುದು ಸಹಾಯಧನ, ವಾಪಸು ಕೊಡಬೇಕಾದದ್ದಲ್ಲ – ಎಂದು ಸರಕಾರವೇ ತಿಳಿಸಿಕೊಡುತ್ತಿದೆ. ಜಗತ್ತಿನಲ್ಲಿ ಯಾವ ರಾಷ್ಟ್ರವೂ ಈ ಚಮತ್ಕಾರವನ್ನು ಕಂಡಿರಲಿಕ್ಕಿಲ್ಲ. ಈಗ 'ಸಾಲವನು ಕೊಂಡವನೆ ಪಾಲೋಗರುಂಡವನು !'

ಯಾವುದಕ್ಕಾಗಿ ಮನುಷ್ಯನು ಹಾತೊರೆಯುವನೋ ಆ ಹಣವೇ ಮನುಷ್ಯನ ಭಯಕ್ಕೆ ಕಾರಣವಾಗಿದೆ. ಮನೆಯಲ್ಲಿಟ್ಟರೆ ದರೋಡೆಕಾರರ ಭಯ. ಹೊರಗಡೆ ಒಯ್ದರೆ ಕಳ್ಳರ ಭಯ. ಬ್ಯಾಂಕಿನಲ್ಲಿಟ್ಟರೆ ಸರ್ಕಾರದ ಭಯ. ಬ್ಯಾಂಕುಗಳೇ ಮುಳುಗಿಬಿಟ್ಟಾವೆಂದು ಇನ್ನೊಂದು ಮಹಾಭಯ. ಆದ್ದರಿಂದ ಯಥೇಚ್ಛವಾಗಿ ಅನುಭವಿಸಿಬಿಡೋಣ ಎಂದು ಜನರು ಹೊರಟಿದ್ದಾರೆ. ಭಯದಲ್ಲಿ ಅಭಯದರ್ಶಿಗಳಾಗಿದ್ದಾರೆ. 'ವೈರಾಗ್ಯ ಮೇವಾಭಯಂ' ಎನ್ನುವುದು ಇಂದು ಬರಿಯ ಉಪದೇಶ ಮಾತ್ರವಾಗಿ ಉಳಿದಿದೆ.

**ಗರ್ಭೇ ವ್ಯಾಧೌ ಶ್ಮಶಾನೇ ಚ ಪುರಾಣೇ ಯಾ ಮತಿರ್ಭವೇತ್ ।**
**ಸಾ ಯದಿ ಸ್ಥಿರತಾಂ ಯಾತಿ ಕೋ ನ ಮುಚ್ಯೇತ ಬಂಧನಾತ್॥ ॥೧೦೦॥**

–ಗರುಡಪುರಾಣ, ೬-೨೫

"ಗರ್ಭದಲ್ಲಿರುವಾಗ, ರೋಗ ಬಂದಾಗ, ಶ್ಮಶಾನಕ್ಕೆ ಹೋದಾಗ, ಪುರಾಣವನ್ನು ಕೇಳುತ್ತಿರುವಾಗ ಮನುಷ್ಯನಿಗೆ ಯಾವ ಭಾವನೆಯುಂಟಾಗುತ್ತದೆಯೋ ಅದು ಯಾವಾಗಲೂ ಸ್ಥಿರವಾಗಿ ನಿಂತರೆ, ಯಾವನು ಸಂಸಾರಬಂಧನದಿಂದ ಬಿಡುಗಡೆ ಹೊಂದಿ ಮುಕ್ತಿಯನ್ನು ಪಡೆಯದೆ ಇದ್ದಾನು ?"

ತಾಯಿಯ ಗರ್ಭದಲ್ಲಿರುವಾಗ ಮಗುವಿಗೆ ಪೂರ್ವಜನ್ಮದ ಸ್ಮರಣೆ ಇರುವುದಂತೆ. ತನ್ನ ಪಾಪಕರ್ಮಗಳಿಂದಾಗಿ ಜನ್ಮತಾಳುತ್ತಿರುವೆನೆಂದು ಪಶ್ಚಾತ್ತಾಪವಾಗುವುದಂತೆ. ರೋಗದಿಂದ ನರಳುವಾಗ ಇಂದ್ರಿಯಚಾಪಲ್ಯಗಳು ಶಾಂತವಾಗಿರುತ್ತವೆ. ರೋಗವು ಶತ್ರುವಿನಂತೆ ಬಾಧಿಸುತ್ತದೆಯೆಂದು ಮನವರಿಕೆಯಾಗಿ, ಹೀಗೆಯೇ ಮುಪ್ಪುಸಾವುಗಳೂ ನನಗೆ ತಪ್ಪಿದವುಗಳಲ್ಲವೆಂದು ನಿಶ್ಚಯವಾಗುತ್ತದೆ. ಇನ್ನು ಬಂಧುಮಿತ್ರರ ಮರಣವಾದಾಗ ಮಸಣಕ್ಕೆ ಹೋದಾಗಲಂತೂ ಮನಸ್ಸು ವ್ಯಗ್ರವಾಗಿ ರಾಗದ್ವೇಷಾದಿಗಳಿಂದ ನಿರ್ಮುಕ್ತವಾಗಿರುತ್ತದೆ. "ಮೃತನಾದ ಈ ಮನುಷ್ಯ ಎಷ್ಟು ಸಂಪಾದಿಸಿದರೂ ಜೊತೆಗೆ

ಏನನ್ನು ಕಟ್ಟಿಕೊಂಡು ಹೋದ? ಅಕ್ಕರೆಯಿಂದ ಪೋಷಿಸಿಕೊಂಡು ಬಂದ ಶರೀರವೂ ಬೂದಿಯಾಯಿತು. ಎಲ್ಲ ಮೂರು ದಿನಗಳ ಬಾಳು. ಇದಕ್ಕಾಗಿ ಮನುಷ್ಯನು ಏಕೆ ಸೊಕ್ಕಿನಿಂದ ಮೆರೆಯಬೇಕು?'' ಎಂಬ ಶಾಂತಭಾವ ಮನದಲ್ಲಿ ಮೂಡುತ್ತದೆ. ಪುರಾಣಶ್ರವಣದ ವೇಳೆಯಲ್ಲಿ ಬುದ್ಧಿ ಶುದ್ಧ ವಾಗಿರುತ್ತದೆ. ರಾಮನಂತೆ, ಲಕ್ಷ್ಮಣನಂತೆ, ಧರ್ಮರಾಜನಂತೆ, ಸೀತೆಯಂತೆ, ಅರುಂಧತಿಯಂತೆ ಬಾಳಬೇಕೆನಿಸುತ್ತದೆ. ಭೂಗರ್ಭದಲ್ಲಿ ಸೀತೆಯ ಪ್ರವೇಶ, ಲಕ್ಷ್ಮಣನ ದೇಹತ್ಯಾಗ, ಶ್ರೀರಾಮನ ಅವತಾರ ಸಮಾಪ್ತಿಗಳನ್ನು ರಾಮಾಯಣದಲ್ಲಿ ಕೇಳಿದಾಗ, ಶ್ರೀಕೃಷ್ಣ–ಬಲರಾಮ ದೇಹಪರಿತ್ಯಾಗ, ದಸ್ಯು ಗಳಿಂದ ಅರ್ಜುನನ ಪರಾಭವ, ಧರ್ಮರಾಜಾದಿಗಳ ಮಹಾಪ್ರಸ್ಥಾನಗಳನ್ನು ಮಹಾಭಾರತದಲ್ಲಿ ಓದಿದಾಗ ಎಂತಹ ಕ್ರೂರಬುದ್ಧಿಯವರ ಮನಸ್ಸೂ ತಳಮಳಿಸಿ ಕರಗಿ ಪರಮಶಾಂತಿ ಪಡೆಯುತ್ತದೆ. ಆದರೆ ಬುದ್ಧಿಯ ಮೇಲಾಗುವ ಈ ತೀವ್ರ ಪರಿಣಾಮ ಕೆಲವು ನಿಮಿಷಗಳವರೆಗೆ ಮಾತ್ರ !

ರಾಷ್ಟ್ರಭಕ್ತರ ಚರಿತ್ರೆಗಳನ್ನೋದುತ್ತೇವೆ. ಲೋಕಮಾನ್ಯ ತಿಲಕರು, ಮಹಾತ್ಮಾಗಾಂಧಿ ಮುಂತಾದ ಮಹಾನುಭಾವರ ಮಹಿಮಾನ್ವಿತ ಕಥೆಗಳನ್ನು ಕೇಳಿದಾಗ ನಮಗೂ ರಾಷ್ಟ್ರಭಕ್ತಿ ಪುಟಿಯುತ್ತದೆ. ಚುನಾವಣೆಯಲ್ಲಿ ಗೆದ್ದಾಗ ಶಾಸಕರಿಗೂ ನಿಷ್ಠೆಯಿಂದ ಪ್ರಜಾಸೇವೆಯನ್ನು ಮಾಡಬೇಕೆನಿಸಬಹುದು. ಸಚಿವರಾಗಿ ಪ್ರತಿಜ್ಞಾವಿಧಿಯನ್ನು ಸ್ವೀಕರಿಸುವಾಗ ಅವರಲ್ಲಿ ನೀತಿ ನಿಷ್ಠೆಯ ಬಯಕೆ ತೀವ್ರವಾಗಬಹುದು. ಆದರೆ ಕಾದ ನೀರು ಎಷ್ಟು ಹೊತ್ತು ಬಿಸಿಯಾಗಿರುತ್ತದೆ ? ಸ್ವಲ್ಪಹೊತ್ತಿನಲ್ಲೆ ತಣ್ಣಗಾಗಿಬಿಡುತ್ತದೆ. ತಣ್ಣಗಿರುವುದೇ ನೀರಿನ ಸ್ವಭಾವ !

ವಿದ್ಯಾ ವಿವಾದಾಯ ಧನಂ ಮದಾಯ
ಫಲಂ ಪರೇಷಾಂ ಪರಿಪೀಡನಾಯ |
ಖಲಸ್ಯ, ಸಾಧೋರ್ವಿಪರೀತಮೇತತ್
ಜ್ಞಾನಾಯ ದಾನಾಯ ಚ ಪಾಲನಾಯ || || ೧೦೧ ||

— ಸುಭಾಷಿತ ಸಂಗ್ರಹ

> "ಖಳನಲ್ಲಿರುವ ವಿದ್ಯೆ ವಿವಾದಕ್ಕಾಗಿ, ಹಣ ಮದಕ್ಕಾಗಿ, ಬಲ ಅನ್ಯರನ್ನು ಪೀಡಿಸುವುದಕ್ಕಾಗಿ. ಸಾಧುಪುರುಷನಾದರೋ ಅವೆಲ್ಲವನ್ನೂ ತದ್ವಿರುದ್ಧವಾಗಿ ಬಳಸುತ್ತಾನೆ. ಸಾಧುವಿನ ವಿದ್ಯೆ ಜ್ಞಾನಕ್ಕಾಗಿ, ಹಣ ದಾನಕ್ಕಾಗಿ, ಬಲ ಅನ್ಯರ ಪಾಲನೆಗಾಗಿ."

ಲೋಕದಲ್ಲಿ ಮನುಷ್ಯನಿಗೆ ಸಾಮರ್ಥ್ಯವನ್ನು ಕೊಡತಕ್ಕವು ಮೂರು : ವಿದ್ಯೆ, ಹಣ ಮತ್ತು ಬಲ. ಬಲದಲ್ಲಿ ದೇಹಬಲ, ಅಧಿಕಾರಬಲ, ಎರಡೂ ಸೇರುತ್ತವೆ. ಖಳನಾಯಕನು ಅನ್ಯರೊಡನೆ ಜಗಳವಾಡುವುದಕ್ಕಾಗಿ ವಿದ್ಯೆಯನ್ನು ಬಳಸುತ್ತಾನೆ. ಅನ್ಯರ ಅಭಿಪ್ರಾಯವನ್ನು ಖಂಡಿಸುವುದಲ್ಲದೆ ಅವರ ತೇಜೋವಧೆಗೆ ಪ್ರಯತ್ನಿಸುತ್ತಾನೆ. ಇಲ್ಲದ ಗೊಂದಲವನ್ನೆಬ್ಬಿಸುತ್ತಾನೆ. ದೈವದತ್ತವಾದ ವಿದ್ಯಾಬಲದಿಂದ, ವಾಕ್‌ಶಕ್ತಿಯಿಂದ ಅನಾವಶ್ಯಕವಾಗಿ ದೇವರನ್ನು ಅಲ್ಲಗಳೆಯುತ್ತಾನೆ. ಸನಾತನ ಶಾಸ್ತ್ರಗಳನ್ನು ನಿಂದಿಸುತ್ತಾನೆ. ಪವಿತ್ರವೆಂದು ನಂಬಿದವರ ಶ್ರದ್ಧೆಯನ್ನು ಕೆಡಿಸಿ ಮಧುರಭಾವನೆಗೆ ಹುಳಿ ಹಿಂಡುತ್ತಾನೆಯೇ ಹೊರತು ನೂತನ ಮಾರ್ಗದರ್ಶನವನ್ನೇನೂ ಮಾಡುವುದಿಲ್ಲ. ಭಗವದ್ಗೀತೆಯನ್ನು ಯುಕ್ತಿಪುರಃಸರವಾಗಿ ಕಾಮಗೀತೆಯೆಂದು ಸಾಧಿಸಿ ಚಪ್ಪಾಳೆ ತಟ್ಟುತ್ತಾನೆ. ಅಸತ್ಯವೇ ಸತ್ಯವೋ ಎಂಬಂತೆ ತನ್ನ ಕುಬುದ್ಧಿಯ ತಳಹದಿಯ ಮೇಲೆ ಕಥೆ ಬರೆಯುತ್ತಾನೆ, ಕಾದಂಬರಿ ರಚಿಸುತ್ತಾನೆ. ವಿವಾದಾಸ್ಪದ ವ್ಯಕ್ತಿಯೆನಿಸುವುದೇ ಹೆಮ್ಮೆಯೆಂದು ಬೀಗುತ್ತಾನೆ. ಹೊಸ ಹೊಸ ಸಂದೇಹದ ಅಲೆಗಳನ್ನೆಬ್ಬಿಸಿ ತನ್ನ ದುರ್ವಿಚಾರಗಳನ್ನು ಎಲ್ಲರಿಗೂ ಹಂಚುತ್ತಾನೆ. ಅವನು ಜನರಿಗೆ ಒಳ್ಳೆಯದೇನನ್ನೂ ಕೊಡುವುದಿಲ್ಲ. ಇರುವ ಒಳ್ಳೆಯದನ್ನು ಕೆಡಿಸುತ್ತಾನೆ.

ಖಳನಲ್ಲುಂಟಾಗುವ ಧನಮದ ಜನರಿಗೆ ಏನೇನು ಅನರ್ಥವನ್ನು ತರುತ್ತದೆಯೆಂಬುದು ಸುಪರಿಚಿತ. ಸ್ವಾತಂತ್ರ್ಯ ಬಂದಮೇಲೆ ರಾಜಕೀಯಸ್ಥರ ಧನಮದಕ್ಕೆ ಹೊಸ ಆಯಾಮ ಬಂದಿದೆ. ಈ ಮದಕ್ಕೆ ಕೋರ್ಟುಗಳ ಅಂಜಿಕೆಯಿಲ್ಲ. ಕಾನೂನುಗಳ ಹೆದರಿಕೆಯಿಲ್ಲ. ಏಕೆಂದರೆ ಧನದಿಂದ ಎಲ್ಲರನ್ನೂ ವಶಪಡಿಸಿಕೊಳ್ಳಬಹುದು.

ದೇಹಬಲವು ಹೆಚ್ಚು ಫಲಕಾರಿಯಲ್ಲವಾದರೂ ಸಾಮಾನ್ಯರನ್ನು ಹೆದರಿಸಿ, ಪೀಡಿಸಿ ಅಂಕೆಯಲ್ಲಿಟ್ಟುಕೊಳ್ಳಲು ಸಾಕಾಗುತ್ತದೆ. ದೇಹಬಲವುಳ್ಳವನು ಮಾತೆತ್ತಿದರೆ ಕೈಯೆತ್ತುತ್ತಾನೆ. ಅಧಿಕಾರಬಲವಂತೂ ಇನ್ನೆಲ್ಲ ಬಲಗಳನ್ನೂ ತುಳಿದುಹಾಕುತ್ತದೆ.

ಸಾಧುವಿನ ವಿದ್ಯೆ ತನ್ನ ಜ್ಞಾನಕ್ಕಾಗಿ; ಜ್ಞಾನ ತನ್ನ ಉದ್ಧಾರಕ್ಕಾಗಿಯಲ್ಲದೆ ಪರರಿಗೆ ಮಾರ್ಗದರ್ಶನ ಮಾಡುವುದಕ್ಕಾಗಿ – ಎಂದು ಆತನು ತಿಳಿದಿರುತ್ತಾನೆ. ತಿಳಿದಷ್ಟು ತಿಳಿದಷ್ಟು ತಾನರಿತಿರುವುದು ಅತ್ಯಲ್ಪವೆಂದು ಅವನಿಗೆ ಮನವರಿಕೆಯಾಗುತ್ತದೆ. ಅದೇ ಅವನ ವಿನಯಕ್ಕೆ ಕಾರಣ. 'ವಿದ್ಯಾ ದದಾತಿ ವಿನಯಂ'. ಧನಬಲ, ದೇಹಬಲ, ಅಧಿಕಾರಬಲಗಳು ಪರೋಪಕಾರಕ್ಕಾಗಿ ಎಂದು ಸತ್ಪುರುಷನ ನಂಬಿಕೆ.

**ಅಸಾರೇ ಖಲು ಸಂಸಾರೇ ಸುಖಭ್ರಾಂತಿಃ ಶರೀರಿಣಾಮ್ |**
**ಲಾಲಾಪಾನಮಿವಾಂಗುಷ್ಠೇ ಬಾಲಾನಾಂ ಸ್ತನ್ಯವಿಭ್ರಮಃ || || ೧೦೨ ||**

**— ಸಮಯೋಚಿತಪದ್ಯಮಾಲಿಕಾ**

"ನಿಃಸಾರವಾದ ಸಂಸಾರದಲ್ಲಿಯೂ ಸುಖವಿದೆಯೆಂದು ಜನರು ಭ್ರಮಿಸಿದ್ದಾರೆ; ಮಕ್ಕಳು ಬಾಯಲ್ಲಿ ಹೆಬ್ಬೆರಳನ್ನಿಟ್ಟು ಚೀಪುತ್ತ ಜೊಲ್ಲನ್ನೇ ಸ್ತನ್ಯವೆಂದು ಭ್ರಮಿಸುವ ಹಾಗೆ."

ಈ ಭ್ರಮೆ ಸಂಸಾರದಲ್ಲಿ ಮಾತ್ರವಲ್ಲ, ಸಂಸಾರವೆಂಬ ಶಬ್ದದಲ್ಲಿ ಸಹ ಇದೆ. ಸಂ = ಉತ್ತಮವಾದ, ಸಾರವಿರತಕ್ಕದ್ದು ಸಂಸಾರ! ಜನರು ಯಾವುದರಲ್ಲಿ ಸಿಕ್ಕಿಕೊಂಡು ತಪ್ಪಿಸಿಕೊಳ್ಳಲಾರದೆ ತೊಳಲುತ್ತ ಇರುತ್ತಾರೋ ಅದು ಸಂಸಾರವೆಂದರ್ಥ. ಸಂಸಾರದಲ್ಲಿ ಸುಖವಿಲ್ಲದಿದ್ದರೆ ಜನರು ಇದಕ್ಕಾಗಿ ಕಷ್ಟಪಡುವುದಾದರೂ ಏಕೆ ? – ಎಂಬ ಪ್ರಶ್ನೆ ಹುಟ್ಟುತ್ತದೆ. ಇದನ್ನು ವಿಶ್ಲೇಷಿಸಿದ ದಾರ್ಶನಿಕರು ಹೇಳುವುದೇನೆಂದರೆ, ದುಃಖದ ನಿವೃತ್ತಿಯೇ ಸುಖವೆಂದು ಜನರು ಭ್ರಮಿಸಿದ್ದಾರೆ. ಹಸಿವಾದಾಗ ಊಟ ಮಾಡಿದರೆ

ಸುಖವೆನಿಸುತ್ತದೆ. ಬಾಯಾರಿಕೆಯಾದಾಗ ನೀರು ಕುಡಿದರೆ ಸುಖವೆನಿಸುತ್ತದೆ. ಹಸಿವು, ಬಾಯಾರಿಕೆ ಮೊದಲಾದುವೆಲ್ಲ ಒಂದು ಬಗೆಯ ರೋಗಗಳು. ರೋಗ ಹೋದಾಗ ಮನಸ್ಸಿಗೆ ಸುಖವಾದಂತೆ ಕಾಣುತ್ತದೆ. ತಲೆನೋವು ಇಳಿದರೆ 'ಹಾ, ಸುಖವಾಯಿತು !' ಎನ್ನುತ್ತಾರೆ. ಆದದ್ದು ಏನು ? ತಲೆ ನೋವು ಹೋಯಿತು, ಅಷ್ಟೆ. ಹೆಗಲ ಮೇಲಿದ್ದ ಭಾರ ಇಳಿದರೆ ಸುಖವಾಯಿತೆನಿಸುತ್ತದೆ. ವಾಸ್ತವವಾಗಿ ಹೋದದ್ದು ಭಾರವೇ ಹೊರತು ಬಂದದ್ದು ಏನೂ ಇಲ್ಲ. ಆದ್ದರಿಂದ ದುಃಖನಿವೃತ್ತಿಯೇ ಸುಖವೆಂಬ ಭ್ರಮೆ.

ವಸ್ತುಭ್ರಾಂತಿಯೂ ಮಾನವನ ಪ್ರವೃತ್ತಿಗೆ ಕಾರಣ. ಭ್ರಾಂತಿ ಇಳಿಯುವವರೆಗೂ ಸತ್ಯವೆಂದೇ ತಿಳಿದು ಮಾನವನು ಕಾರ್ಯಪ್ರವೃತ್ತನಾಗುತ್ತಾನೆ. ಈ ಬಗೆಯಲ್ಲಿ ಸುಖಭ್ರಾಂತಿಯೂ ದುಃಖವೂ ಹಗಲಿರುಳುಗಳಂತೆ ಬರುತ್ತವೆ. ಚಕ್ರದ ಅರೆಕಾಲುಗಳಂತೆ ಸುತ್ತುತ್ತ ಇರುತ್ತವೆ. ಇದು ಮಾನವನ ವ್ಯಷ್ಟಿಜೀವನದಲ್ಲಿ ನಡೆಯುವಂತೆ ಸಮಷ್ಟಿಜೀವನದಲ್ಲಿಯೂ ಇದೆ. ಸತ್ಯ–ಅನೃತಗಳ ಕಲಬೆರಕೆಯಿಂದಲೇ ಜಗತ್ತು ನಡೆಯುವುದು.

ಬ್ರಿಟಿಷರು ಹೋಗಲಿ – ಎಂದು ರಾಷ್ಟ್ರ ಬಯಸಿತು. ಬ್ರಿಟಿಷರು ಹೋದರು, ರಾಷ್ಟ್ರ ಹೋಳಾಯಿತು. ಹೋಳಾದರೇನು, ಸ್ವಾತಂತ್ರ್ಯದಿಂದ ನಾವು ಸುಖಿಗಳು ಎಂದುಕೊಂಡರು ಜನ. ಅಷ್ಟರಲ್ಲಿ ಹಿಂದೂ–ಮುಸ್ಲಿಂ ದಂಗೆ ಪ್ರಾರಂಭವಾಯಿತೆಂದು ವ್ಯಥೆ. ಆಮೇಲೆ ದಂಗೆ ಅಡಗಿತೆಂದು ಸಮಾಧಾನ. ನಲವತ್ತು ವರ್ಷಗಳಾದರೂ ಸ್ವಾತಂತ್ರ್ಯದ ಫಲ ದೊರಕಲಿಲ್ಲವೆಂದು ಕೊರಗು. ನಾಡಿನ ಇತಿಹಾಸದಲ್ಲಿ ನಲವತ್ತು ವರ್ಷ ಅತ್ಯಲ್ಪಕಾಲ ಎಂದು ಸಮಾಧಾನ. ಶತ್ರುವಾಗಿದ್ದ ಪಾಕಿಸ್ತಾನ ಎರಡು ಹೋಳಾದಾಗ ಏನೋ ಕೈಗೆ ಸಿಕ್ಕಿತೆಂದು ಹಿಗ್ಗು. ಒಂದು ಮುಳ್ಳಿದ್ದುದು ಎರಡು ಮುಳ್ಳಾಯಿತೆಂದು ಅನಂತರ ಕುಗ್ಗು. ಶ್ರೀಲಂಕಾದಲ್ಲಿ ಶಾಂತಿಯೊಪ್ಪಂದವಾಯಿತೆಂದು ಸಂತೋಷ. ಶಾಂತಿಯ ಹಿಂದೆಯೇ ಅಶಾಂತಿ ಭುಗಿಲೆದ್ದಿತೆಂದು ವಿಷಾದ. ಪದಾರ್ಥಗಳ ಬೆಲೆ ಏರಿತೆಂದು ದುಃಖ. ನೋಟುಗಳ ಕಂತೆ ಕೈಗೆ ಬಂತೆಂದು ಸುಖ. ದೀರ್ಘಕಾಲ ದುಃಖ, ಅಲ್ಪಕಾಲ ಅದರ ನಿವೃತ್ತಿ–ಇಷ್ಟನ್ನೇ ಲೋಕ ಅನುಭವಿಸುತ್ತದೆ.

ಅಕೃತ್ವಾ ಪೌರುಷಂ ಯಾ ಶ್ರೀರ್ವಿಕಾಸಿನ್ಯಪಿ ಕಿಂ ತಯಾ |
ಜರದ್ಗವೋಽಪಿ ಚಾಶ್ನಾತಿ ದೈವಾದುಪಗತಂ ತೃಣಮ್ || || ೧೦೩ ||

— ಸುಭಾಷಿತರತ್ನಭಾಂಡಾಗಾರ

"ತನ್ನ ಪುರುಷಪ್ರಯತ್ನವನ್ನು ಮೆರೆಸದೆ ಹೇಗೋ ದೊರಕಿದ ಐಶ್ವರ್ಯ ದೊಡ್ಡದಾಗಿದ್ದರೂ ಅದರಿಂದೇನು ಪ್ರಯೋಜನ ? ಅದೃಷ್ಟವಶದಿಂದ ದೊರಕಿದ ಹುಲ್ಲನ್ನು ಮುದಿ ಎತ್ತೂ ತಿನ್ನುತ್ತಿರುತ್ತದೆ."

'ದುಡಿ ಇಲ್ಲವೆ ಮಡಿ' ಎಂಬ ಗಾದೆ ಮನುಷ್ಯನ ಕರ್ತವ್ಯಕರ್ಮದ ಶ್ರೇಷ್ಠತೆಯನ್ನು ಎತ್ತಿತೋರಿಸುತ್ತದೆ. ದುಡಿಯದಿದ್ದವನು ಮಡಿಯುವುದೇ ಲೇಸು. ತನ್ನ ಅನ್ನವನ್ನು ತಾನೇ ಸಂಪಾದಿಸಿಕೊಳ್ಳುವುದು ಎಲ್ಲ ಪ್ರಾಣಿಗಳ ಸ್ವಭಾವ. ನಿಸರ್ಗವೇ ಈ ನಿಯಮವನ್ನು ಗೊತ್ತುಪಡಿಸಿದೆ. ಹುಲಿ ಬೇಟೆಯಾಡಿ ತನ್ನ ಆಹಾರವನ್ನು ಸಂಪಾದಿಸಿಕೊಳ್ಳುತ್ತದೆ; ಒಂದು ಹುಲಿ ಕೊಂದುಹಾಕಿದ ಮೃಗವನ್ನು ಇನ್ನೊಂದು ಹುಲಿ ತಿನ್ನುವುದಿಲ್ಲ. ಕಾಡುಮೇಡುಗಳನ್ನಲೆದು ಜಿಂಕೆ ಹೊಟ್ಟೆತುಂಬಿಸಿಕೊಳ್ಳುತ್ತದೆ. ಸಾಕುಪ್ರಾಣಿಗಳಾದ ಎತ್ತು, ಕೋಣಗಳು ಸಹ ಹೊಟ್ಟೆಪಾಡಿಗಾಗಿ ದುಡಿದೇ ತಿನ್ನಬೇಕಾಗಿದೆ. ಹಸು ತನ್ನ ಕರುವಿಗೆ ಮೇಯುವ ಶಕ್ತಿ ಬಂದೊಡನೆ ಮೊಲೆಯೂಡಿಸುವುದನ್ನು ನಿಲ್ಲಿಸಿ ತನ್ನ ಕರುವನ್ನೇ ಒದೆದು ಓಡಿಸುತ್ತದೆ. ಹಕ್ಕಿಗಳು ಮರಿಗಳಿಗೆ ಗುಟುಕುಗಳನ್ನು ಕೊಟ್ಟು ಬೆಳೆಸಿ, ಹಾರಲು ಬಂದೊಡನೆ ಗೂಡಿನಿಂದ ಹೊರದೂಡುತ್ತವೆ.

ಧರ್ಮಶಾಸ್ತ್ರಗಳು ಪ್ರತಿಯೊಬ್ಬನಿಗೂ ಜೀವನಕ್ಕಾಗಿ ಬೇರೆ ಬೇರೆ ಉದ್ಯೋಗಗಳನ್ನು ವಿಧಿಸಿವೆ. 'ಆಹಾರಾರ್ಥಂ ಕರ್ಮ ಕುರ್ಯಾದನಿಂದ್ಯಂ' –ಆಹಾರಕ್ಕಾಗಿ ನಿಂದ್ಯವಲ್ಲದ ಕರ್ಮವನ್ನು ಪ್ರತಿಯೊಬ್ಬನೂ ಮಾಡಲೇಬೇಕೆಂದು ವಿಧಿ ಇದೆ. ಇವೆಲ್ಲವನ್ನೂ ಪರಿಶೀಲಿಸಿದಾಗ "ದುಡಿಯದೆ ಇದ್ದವನಿಗೆ ತಿನ್ನಲು ಅಧಿಕಾರವಿಲ್ಲ" ಎಂಬ ಸಿದ್ಧಾಂತ ಏರ್ಪಡುತ್ತದೆ. ಹೊಟ್ಟೆಯನ್ನು ಕೊಟ್ಟ ದೇವರು ಎರಡು ರೆಟ್ಟೆಗಳನ್ನೂ ಕೊಟ್ಟಿದ್ದಾನಲ್ಲವೆ?

ಸಮತಾವಾದದ ಮೂಲಸೂತ್ರ ಮೇಲಿನ ನೀತಿಶ್ಲೋಕದಲ್ಲಿದೆ. ಅದೇನೂ ನಮ್ಮ ಹಿರಿಯರು ಕಾಣದ ನೂತನ ತತ್ತ್ವವಲ್ಲ. ಜೀವನದ ಎಲ್ಲ ಮಾರ್ಗಗಳನ್ನೂ ಪ್ರಯೋಗಿಸಿ ನೋಡಿ ಇದಮಿತ್ಥಂ ಎಂಬ ನಿರ್ಣಯಕ್ಕೆ ಬಂದವರು ಅವರು. ಮಾನವಸಮಾಜಕ್ಕೆ ಯಾವುದು ಹಿತಕರ ಎಂಬುದನ್ನು ಬೇರು ಸಹಿತ ಶೋಧಿಸಿದ್ದಾರೆ. ವಿಚಿತ್ರ 'ಬುದ್ಧಿಜೀವಿ'ಗಳಿರುವ ಇಂದಿನ ಸಮಾಜದಲ್ಲಿ ಸಮರ್ಥರಾದ ಯೋಜಕರು ಇಲ್ಲ. 'ಯೋಜಕಸ್ತತ್ರ ದುರ್ಲಭಃ.'

**ಸತ್ಯಂ ಬ್ರೂಯಾತ್ ಪ್ರಿಯಂ ಬ್ರೂಯಾತ್**
**ನ ಬ್ರೂಯಾತ್ ಸತ್ಯಮಪ್ರಿಯಮ್ |**
**ಪ್ರಿಯಂ ಚ ನಾನೃತಂ ಬ್ರೂಯಾತ್**
**ಏಷ ಧರ್ಮಃ ಸನಾತನಃ || || ೧೦೪ ||**

– ಮನುಸ್ಮೃತಿ, ೪-೧೩೮

"ಸತ್ಯವನ್ನು ಹೇಳಬೇಕು. ಪ್ರಿಯವಾದ್ದನ್ನು ಹೇಳಬೇಕು. ಸತ್ಯ ವಾದರೂ ಅಪ್ರಿಯವಾದ್ದನ್ನು ಹೇಳಬಾರದು. ಪ್ರಿಯವಾದ್ದಾದರೂ ಸುಳ್ಳನ್ನು ಹೇಳಬಾರದು. ಇದು ಸನಾತನ ಧರ್ಮ."

ಸತ್ಯವೆಂದರೆ ಯಥಾರ್ಥವಾದದ್ದು. ಒಂದು ವಸ್ತುವಾಗಲಿ ಕ್ರಿಯೆಯಾಗಲಿ ಹೇಗೆ ಇದೆಯೋ, ಹೇಗೆ ನಡೆದಿದೆಯೋ ಆ ಸ್ಥಿತಿ ಯಥಾರ್ಥ. ಇದ್ದುದನ್ನು ಇದ್ದಂತೆ ಹೇಳುವುದು ಸತ್ಯವಚನ. ಇದು ಶ್ರೇಷ್ಠವಾದ ಧರ್ಮ. ಸತ್ಯವನ್ನು ಹೇಳಬೇಕು ಎಂದರೆ ಅದಕ್ಕೆ ವಿರುದ್ಧವಾದ ಸುಳ್ಳನ್ನು ಹೇಳಬಾರದೆಂದು ಪರ್ಯವಸಾನವಾಗುತ್ತದೆ. ಒಂದು ವೇಳೆ ಸತ್ಯ ನಮಗೆ ಗೊತ್ತಿಲ್ಲದಿರಬಹುದು. ಆ ಸಮಯದಲ್ಲಿ ಸತ್ಯಸ್ಥಿತಿ ನನಗೆ ಗೊತ್ತಿಲ್ಲವೆಂದೇ ಹೇಳುವುದು ಸತ್ಯವಾಗುತ್ತದೆ. ಒಂದು ವೇಳೆ ಸತ್ಯ ವಿಪರೀತವಾಗಿ ಗೋಚರಿಸಿದ್ದರೆ ? ಸೂರ್ಯನು ನಮಗೆ ಚಿಕ್ಕ ಪ್ರಮಾಣದಲ್ಲಿ ಕಾಣುತ್ತಾನೆ. ಅವನಿರುವುದು ಭೂಮಿಗಿಂತಲೂ ಎಷ್ಟೋಪಾಲು ದೊಡ್ಡದಾಗಿ. ಅಂಥ

ಸಮಯದಲ್ಲಿ ತನಗೆ ಕಂಡಂತೆ ಮಾತ್ರ ಹೇಳುವುದು ಸತ್ಯವಾಗುತ್ತದೆ. ಯಾರಿಗೆ ಸೂರ್ಯನ ಪ್ರಮಾಣ ವೈಜ್ಞಾನಿಕವಾಗಿ ತಿಳಿದಿದೆಯೋ ಅವನು ಅಜ್ಞನಂತೆ ಚಿಕ್ಕ ಪ್ರಮಾಣವನ್ನು ಹೇಳಿದರೆ ಅದು ಸುಳ್ಳೆನಿಸುತ್ತದೆ. ಆದ್ದರಿಂದ ನಮ್ಮ ಇಂದ್ರಿಯದೋಷದಿಂದಲೋ, ಬುದ್ಧಿದೋಷದಿಂದಲೋ ತಪ್ಪಾಗಿ ತಿಳಿದದ್ದನ್ನು ತಪ್ಪಾಗಿಯೇ ಹೇಳಿದರೆ ಅಸತ್ಯವೆನಿಸಲಾರದು. ತಾನು ಕಂಡಂತೆ–ಕೇಳಿದಂತೆ–ಅನುಭವಿಸಿದಂತೆ ನುಡಿಯುವುದೇ ಪ್ರಕೃತದಲ್ಲಿ ಸತ್ಯ.

ಇನ್ನೊಬ್ಬರಿಗೆ ಸಂತೋಷವನ್ನುಂಟುಮಾಡುವುದು ಈಶ್ವರಪೂಜೆಯೇ ಎಂದು ನೀತಿವಚನ ಉಂಟು. ಈ ವಚನದ ಇನ್ನೊಂದು ರೂಪವೇ 'ಪ್ರಿಯಂ ಬ್ರೂಯಾತ್.' ಪ್ರಿಯವಾದ್ದನ್ನು ನುಡಿದರೆ ಎಲ್ಲರಿಗೂ ಸಂತೋಷವೇ. ಹೇಳಲಿಕ್ಕೆ ಪ್ರಿಯವಾದದ್ದು ಇಲ್ಲದಾಗ, ಸತ್ಯವೇ ಅಪ್ರಿಯವಾಗುವ ಸನ್ನಿವೇಶದಲ್ಲಿ ಸುಮ್ಮನಿರುವುದು ಲೇಸು. ಒಂದು ವೇಳೆ ಸತ್ಯವನ್ನು ಆ ಸಂದರ್ಭದಲ್ಲಿ ಹೇಳಕೂಡದೆಂದಾದರೆ, ನೀತಿವಚನಗಳ ಗತಿ ಏನು ? ಸಾಮಾನ್ಯವಾಗಿ ನೀತಿವಚನ ದುಷ್ಟನಿಗೆ ಪ್ರಿಯವಾಗಿರುವುದಿಲ್ಲ. ವಿಭೀಷಣನ ಹಿತಬೋಧೆ ರಾವಣನಿಗೆ ಪ್ರಿಯವಾಗಲಿಲ್ಲ. ಶ್ರೀಕೃಷ್ಣನ ಹಿತಬೋಧೆ ದುರ್ಯೋಧನನಿಗೆ ರುಚಿಸಲಿಲ್ಲ. ಅವರಿಬ್ಬರೂ ಹಿತವಚನಗಳನ್ನು ನೀಡದಿದ್ದರೆ ಅದೇ ಅಧರ್ಮವಾಗುತ್ತಿತ್ತು. ಇದಕ್ಕೆ ಸಮಾಧಾನ ಹೀಗೆ – ಅದು ಧರ್ಮೋದ್ದೇಶದಿಂದ ಮಾಡಿದ ಹಿತವಚನ. ಮೊದಲು ಅಪ್ರಿಯವಾಗಿ ತೋರಿದರೂ ಪರಿಣಾಮದಲ್ಲಿ ಪ್ರಿಯವಾದದ್ದೇ ಔಷಧ ಇದ್ದಂತೆ.

ಪ್ರಿಯವಾಗಿದ್ದರೂ ಸುಳ್ಳನ್ನು ಹೇಳಬಾರದು. ಮುಖಸ್ತುತಿಗಾಗಿಯೋ ಇನ್ನಾವುದಾದರೂ ಸ್ವಾರ್ಥಕ್ಕಾಗಿಯೋ ಜನರು ಪ್ರಿಯವಾದ ಮಾತನ್ನು ಆಡುತ್ತಾರೆ. ಅದು ಸುಳ್ಳಾಗಿರುತ್ತದೆ. ಹಾಗೆ ಹೇಳತಕ್ಕವರ ಉದ್ದೇಶ ದುಷ್ಟವಾದದ್ದು.

**ತ್ಯಕ್ತವ್ಯೋ ಮಮಕಾರಃ ತ್ಯಕ್ತುಂ ಯದಿ ಶಕ್ಯತೇ ನಾಸೌ ।**
**ಕರ್ತವ್ಯೋ ಮಮಕಾರಃ ಕಿಂ ತು ಸ ಸರ್ವತ್ರ ಕರ್ತವ್ಯಃ ॥ ॥ ೧೦೫ ॥**

— ಅಪ್ಪಯ್ಯದೀಕ್ಷಿತರ 'ವೈರಾಗ್ಯಶತಕ'

> "ನನ್ನದು ಎಂಬ ಮಮಕಾರವನ್ನು ತ್ಯಜಿಸಬೇಕು. ಒಂದು ವೇಳೆ ಅದನ್ನು ತ್ಯಜಿಸಲು ಸಾಧ್ಯವಾಗದಿದ್ದರೆ ಮಮಕಾರವನ್ನು ಇಟ್ಟುಕೊಳ್ಳಬಹುದು. ಆದರೆ ಆ ಮಮಕಾರವನ್ನು ಎಲ್ಲರ ವಿಷಯದಲ್ಲಿಯೂ ಇಡಬೇಕು!"

ಲೋಕದಲ್ಲಿ 'ಅಹಂ – ನಾನು' ಎಂಬ ಭಾವ ಸರ್ವಮಾನವರಲ್ಲಿಯೂ ಇರುತ್ತದೆ. 'ನಾನು ಮಾಡುತ್ತೇನೆ, ನಾನು ತಿಳಿದಿದ್ದೇನೆ' ಎಂಬ ಅಹಂಬುದ್ಧಿ ಇಲ್ಲದ ಯಾರೂ ಯಾವ ಕಾರ್ಯದಲ್ಲಿಯೂ ಪ್ರವರ್ತಿಸುವುದಿಲ್ಲ. ಎಂತಹ ವಿನೀತನಾದ ಗುಣಶಾಲಿಯಲ್ಲಿಯೂ ಈ ಅಹಂಭಾವನೆಯಿಲ್ಲದೆ ಕೆಲಸವೇ ನಡೆಯುವುದಿಲ್ಲ. ಹನುಮಂತನು 'ದಾಸೋಽಹಂ ಕೋಸಲೇಂದ್ರಸ್ಯ' ಎನ್ನುವಾಗ ಸಹ 'ಅಹಂ' ಎಂದು ಹೇಳುತ್ತಲೇ ಕಾರ್ಯಪ್ರವೃತ್ತನಾಗಿದ್ದಾನೆ. ಇದೇ ಅಹಂಕಾರ. ಇದು ವಿನೀತನಲ್ಲಿ ಸಾತ್ತ್ವಿಕರೂಪದಲ್ಲಿರುತ್ತದೆ. ಈ ಸಾತ್ತ್ವಿಕಾಹಂಕಾರ ಅನ್ಯರ ಅಹಂಭಾವವನ್ನು ತುಳಿಯುವುದಿಲ್ಲ. ರಾಜಸವಾದ ಅಹಂಕಾರವಾದರೋ ಅನ್ಯರ ಅಹಂಭಾವವನ್ನು ಮೆಟ್ಟಿನಿಲ್ಲುತ್ತದೆ. ಇಂತಹ ಅಹಂಭಾವ ಇದ್ದವನನ್ನು ಅಹಂಕಾರಿ ಅನ್ನುತ್ತಾರೆ.

ಹೊಗೆಯಿದ್ದಲ್ಲಿ ಬೆಂಕಿ ಇದ್ದೇ ಇರುವಂತೆ ಅಹಂಕಾರವಿದ್ದ ಮೇಲೆ ಅವರಲ್ಲಿ ಮಮಕಾರ ಇರಲೇಬೇಕು. ಅಹಂಕಾರವೇ ಮಮಕಾರವಾಗಿ ಎಲ್ಲ ಕಾಮಕ್ರೋಧಗಳಿಗೂ ಬೀಜವಾಗುತ್ತದೆ. ಎಲ್ಲ ಅನರ್ಥವೃಕ್ಷಗಳೂ ರಾಜಸ ಮಮಕಾರದಿಂದ ಬೆಳೆಯುತ್ತವೆ. ಯಾವುದರ ವಿಷಯದಲ್ಲಿ ಮಮತೆಯೋ ಅದರ ವಿಷಯದಲ್ಲಿ ರಾಗ, ಯಾವುದರ ವಿಷಯದಲ್ಲಿ ಮಮತೆ ಇಲ್ಲವೋ ಅದರ ವಿಷಯದಲ್ಲಿ ದ್ವೇಷ – ಎನ್ನುವುದು ನೈಸರ್ಗಿಕವಾಗಿಬಿಡುತ್ತದೆ.

ಸಾತ್ತ್ವಿಕವಾದ ಮಮಕಾರ ಇರಬೇಕಾದದ್ದು. ನನ್ನ ರಾಷ್ಟ್ರ, ನನ್ನ ಜನರು, ನನ್ನ ಧರ್ಮ, ನನ್ನ ಕರ್ತವ್ಯ–ಎಂಬ ಭಾವನೆಗಳು ಪವಿತ್ರವಾದವು; ಜೀವೋತ್ಕರ್ಷವನ್ನುಂಟುಮಾಡತಕ್ಕವು. ಸಾತ್ತ್ವಿಕವಾದ ಮಮಕಾರದಿಂದ ಅನ್ಯರಲ್ಲಿ ದ್ವೇಷ ಹುಟ್ಟುವುದಿಲ್ಲ, ಹುಟ್ಟಬಾರದು. ತ್ಯಜಿಸಬೇಕಾದದ್ದು ರಾಜಸ ಮಮಕಾರವನ್ನು. ಆದರೆ ಇದನ್ನು ತ್ಯಜಿಸುವುದು ಕಠಿಣ. ಕೆಟ್ಟ ಚಟದಂತೆ ಇದು ಮನುಷ್ಯನಿಗೆ ಗಂಟುಬಿದ್ದಿರುತ್ತದೆ. ಅದಕ್ಕಾಗಿ ಅಪ್ಪಯ್ಯ

ದೀಕ್ಷಿತರು ಈ ಉಪಾಯ ಹೇಳಿದರು–ಮಮಕಾರವನ್ನು ಬಿಡಲಾಗದಿದ್ದರೆ ಬೇಡ; ಅದನ್ನು ಜಗತ್ತಿನಲ್ಲಿರುವ ಸರ್ವರ ವಿಷಯದಲ್ಲಿಯೂ ವಿಸ್ತರಿಸಿಕೋ. ವಿಸ್ತರಿಸಿಕೊಂಡಾಗ 'ವಸುಧೈವ ಕುಟುಂಬಕಂ' ಆಗುತ್ತದೆ. ಯಾಗ ವಿಷಯದಲ್ಲಿಯೂ ದ್ವೇಷವಿರುವುದಿಲ್ಲ, ವಿಷವೇ ಅಮೃತವಾಗುತ್ತದೆ.

ದೂರಸ್ಥೋ ಜ್ಞಾಯತೇ ಸರ್ವಃ ಪರ್ವತೇ ಜ್ವಲನಾದಿವತ್ |
ಚೂಡಾಮಣಿಃ ಶಿರಃಸ್ಥೋಽಪಿ ದೃಶ್ಯತೇ ನ ಸ್ವಚಕ್ಷುಷಾ || || ೧೦೬ ||

— ರಾಮಾಯಣಮಂಜರೀ, ಕಿಷ್ಕಿಂಧಾಕಾಂಡ, ೪೭೮

"ಎಲ್ಲರೂ ದೂರದಲ್ಲಿದ್ದಾಗ ಗಮನಕ್ಕೆ ಬರುತ್ತಾರೆ, ಪರ್ವತದಲ್ಲಿ ಕಾಣಿಸುವ ಅಗ್ನಿಯ ಹಾಗೆ, ಚೂಡಾಮಣಿಯು ತನ್ನ ತಲೆಯ ಮೇಲೆ ವಿರಾಜಿಸುತ್ತಿದ್ದರೂ ತನ್ನ ಕಣ್ಣಿಗೆ ಕಾಣುವುದಿಲ್ಲ."

ನೂರು ಯೋಜನದಗಲದ ಸಮುದ್ರವನ್ನು ದಾಟತಕ್ಕವರು ಯಾರೆಂದು ಪ್ರಶ್ನೆ ಹುಟ್ಟಿದಾಗ ವಾನರರು ಯಾರ ಯಾರ ಹೆಸರನ್ನೋ ಹೇಳಿ, ಅಷ್ಟು ದೂರ ಹಾರತಕ್ಕ ಸಮರ್ಥರು ಯಾರೆಂದು ವಿಸ್ಮಿತರಾಗುತ್ತಾರೆ. ಆಗ ಜಾಂಬವಂತ ಮೇಲ್ಕಂಡ ಮಾತನ್ನು ಹೇಳಿ ತಮ್ಮ ನಡುವೆಯೇ ಕುಳಿತಿದ್ದ ಹನುಮಂತ ಸಮರ್ಥನೆಂದು ತೋರಿಸುತ್ತಾನೆ. ಇದು ರಾಮಾಯಣದ ಕಾಲದಿಂದಲೂ ನಮ್ಮಲ್ಲಿ ನಡೆದುಬಂದಿರುವ ವಾಸ್ತವಾಂಶ.

ಹಿತ್ತಲಗಿಡ ಮದ್ದಲ್ಲ, ಬೇಲಿಯ ಸಾಲಿನಲ್ಲಿ ಬೆಳೆದ ಆಡುಸೋಗೆ ಎಲೆಯ ರಸ ನಮ್ಮ ಕೆಮ್ಮಿಗೆ ಔಷಧವಾಗುವುದಿಲ್ಲ. 'ವಸಾಕಾ ಸಿರಪ್' ಎಂಬ ಹೆಸರನ್ನು ತಳೆದು ಅದೇ ರಸ ದೂರದಿಂದ ಅವತರಿಸಿದಾಗ ಕೆಮ್ಮಿಗೆ ಪರಮೌಷಧವೆನಿಸಿಬಿಡುತ್ತದೆ. ಹಿತ್ತಿಲಲ್ಲಿ ಬೆಳೆದ ಸರ್ಪಗಂಧಿ ಉಪಯೋಗಕ್ಕೆ ಬಾರದ ಕಾಡುಗಿಡವೆನಿಸುತ್ತದೆ. ಅದೇ 'ರಿಸರ್ಪಿನ್' ಎಂಬ ಹೆಸರಿನಿಂದ ನೂರರಷ್ಟು ಬೆಲೆಯೇರಿಸಿಕೊಂಡು ಬಣ್ಣದ ವೇಷವನ್ನು ತೊಟ್ಟು ಬಂದಾಗ ರಕ್ತದ ಒತ್ತಡವನ್ನು ನಿಲ್ಲಿಸುತ್ತದೆ !

ದಶಮಾಂಶ ಪದ್ಧತಿಯನ್ನು ಕಂಡುಹಿಡಿದವರು ಯಾರು ? – ಎಂದು ಯಾವ ವಿದ್ಯಾರ್ಥಿಯನ್ನಾದರೂ ಕೇಳಿ ನೋಡಬಹುದು. 'ಅದನ್ನು ಕಂಡು ಹಿಡಿದವರು ಭಾರತೀಯರು' ಎಂದು ಉತ್ತರ ಕೊಡುವ ಎದೆಗಾರಿಕೆ ಯಾವ ವಿದ್ಯಾರ್ಥಿಗೂ ಇಲ್ಲ. ಏಕೆಂದರೆ, ಉಪಾಧ್ಯಾಯರು ಅದನ್ನು ಹೇಳಿಕೊಟ್ಟಿಲ್ಲ! ಗಣಿತಶಾಸ್ತ್ರದ ಒಂದು ಪ್ರಸಿದ್ಧ ಪ್ರಮೇಯವನ್ನು ಪೈಥಾಗೊರಸ್ ಕಂಡು ಹಿಡಿದನೆಂದು ಪ್ರಾಧ್ಯಾಪಕರು ಹೇಳುತ್ತಲೇ ಇದ್ದಾರೆ. ಆ ಪ್ರಮೇಯ ಬೋಧಾಯನರ ಶುಲ್ಬಸೂತ್ರದಲ್ಲಿಯೇ ಇದೆಯೆಂಬುದನ್ನು ಅವರು ಕಂಡಿಲ್ಲ.

'ಭೂಮಿ ಗುಂಡಾಗಿದೆ, ಅದು ತನ್ನ ಅಕ್ಷದಮೇಲೆ ಸೂರ್ಯನ ಸುತ್ತ ಸುತ್ತುತ್ತದೆ, ಸೂರ್ಯನ ರಶ್ಮಿಯಲ್ಲಿ ಏಳು ಬಣ್ಣಗಳುಂಟು, ಸೂರ್ಯನಿಗೆ ನಿಜವಾಗಿ ಉದಯವೂ ಇಲ್ಲ ಅಸ್ತವೂ ಇಲ್ಲ' ಎಂಬ ವೈಜ್ಞಾನಿಕ ಸತ್ಯಗಳು ಋಗ್ವೇದದಲ್ಲಿಯೇ ಕಾಣಸುತ್ತವೆ. ಸೂರ್ಯನೇ ಮೊದಲಾದ ಆಕಾಶ ಕಾಯಗಳು ಪರಸ್ಪರ ಆಕರ್ಷಣಶಕ್ತಿಯಿಂದ ನಿಂತಿವೆ–ಎಂದು ವಿಷ್ಣುಪುರಾಣ ಹೇಳುತ್ತದೆ. ಭೂಮಿಯ ನೆರಳು ಚಂದ್ರನ ಮೇಲೆ ಬೀಳುತ್ತದೆ ಎಂಬ ವರ್ಣನೆ ಕಾಳಿದಾಸನ ರಘುವಂಶದಲ್ಲಿದೆ ! ಸೂರ್ಯಗ್ರಹಣ, ಚಂದ್ರಗ್ರಹಣ ಗಳಾಗುವ ಬಗೆಯನ್ನು ವರಾಹಮಿಹಿರನು ಬೃಹತ್‌ಸಂಹಿತೆಯಲ್ಲಿ ಹೇಳಿದ್ದಾನೆ. ಇವು ಕೆಲವೇ ಉದಾರಹಣೆಗಳು. ಇಂದು ನಮ್ಮ ಪಠ್ಯಪುಸ್ತಕಗಳಲ್ಲಿ ಈ ಪ್ರಮೇಯಗಳನ್ನು ಕಂಡುಹಿಡಿದ ಕೀರ್ತಿಯನ್ನು ಪಾಶ್ಚಾತ್ಯರಿಗೆ ಹೊರಿಸಿ ನಮ್ಮ ಆತ್ಮವನ್ನೇ ಮರೆಸಿದ್ದಾರೆ. ಆತ್ಮವನ್ನು ಮರೆತಾಗ ರಾಷ್ಟ್ರಾಭಿಮಾನ ಹುಟ್ಟು ವುದು ಹೇಗೆ ?

ನೇಹ ಯತ್ ಕರ್ಮ ಧರ್ಮಾಯ ನ ವಿರಾಗಾಯ ಕಲ್ಪತೇ |
ನ ತೀರ್ಥಪದಸೇವಾಯೈ ಜೀವನ್ನಪಿ ಮೃತೋ ಹಿ ಸಃ || || ೧೦೭ ||

— ಭಾಗವತ, ೩-೨೩-೫೬

"ಈ ಲೋಕದಲ್ಲಿ ಯಾರು ಮಾಡುವ ಕೆಲಸವು ಧರ್ಮ ಸಾಧನೆಗಾಗಿ ಅಲ್ಲವೋ, ವೈರಾಗ್ಯಕ್ಕಾಗಿ ಅಲ್ಲವೋ ಅಥವಾ ಪೂಜ್ಯರ

ಸೇವೆಗಾಗಿಯೂ ಅಲ್ಲವೋ, ಆ ಮನುಷ್ಯನು ಬದುಕಿದ್ದರೂ ಸತ್ತವನೇ ಸರಿ.''

ಮನುಷ್ಯನಿಗೆ ಐದು ಜ್ಞಾನೇಂದ್ರಿಯಗಳೂ ಐದು ಕರ್ಮೇಂದ್ರಿಯಗಳೂ ಇವೆ. ದಶೇಂದ್ರಿಯಗಳಿಗೆ ಸೂತ್ರಧಾರನಾಗಿ ಮನಸ್ಸು ಕೆಲಸ ಮಾಡುತ್ತದೆ. ಮನಸ್ಸಿನ ವಿವೇಚನಾಶಕ್ತಿ ಪೂರ್ಣವಾಗಿರತಕ್ಕದ್ದು ಮನುಷ್ಯನಲ್ಲಿ ಮಾತ್ರ. ಆದ್ದರಿಂದ ಮನುಷ್ಯನು ಮಾಡುವ ಕೆಲಸ ಅರ್ಥವತ್ತಾಗಿರಬೇಕು. ಉದ್ದೇಶವು ಸಮೀಚೀನವಾಗಿದ್ದರೆ ಕ್ರಿಯೆ ಅರ್ಥವತ್ತಾಗುತ್ತದೆ.

ಧರ್ಮಶಬ್ದವು ವಿಶಾಲವಾದ ಅರ್ಥವ್ಯಾಪ್ತಿಯುಳ್ಳದ್ದು. ವೈರಾಗ್ಯ, ಪೂಜ್ಯಸೇವೆಗಳು ಅದರ ಅಂಗಗಳೇ. ವೈರಾಗ್ಯವು ನಿಷ್ಕಾಮಕರ್ಮವನ್ನೂ, ಪೂಜ್ಯಸೇವೆಯು ಜ್ಞಾನಾರ್ಜನೆಯನ್ನೂ ಪ್ರತಿನಿಧಿಸುತ್ತವೆ. ತನ್ನ ಆತ್ಮದ, ತನ್ನ ಸಮಾಜದ, ತನ್ನ ರಾಷ್ಟ್ರದ ಶ್ರೇಯಸ್ಸಿಗಾಗಿ ಮಾಡತಕ್ಕ ಕೆಲಸವೆಲ್ಲವೂ ಅರ್ಥವತ್ತಾದದ್ದು. ಇವುಗಳಲ್ಲಿ ವಿಶ್ವಹಿತವೇ ಅಡಕವಾಗಿದೆ. ವಿಶ್ವ ಹಿತಾರ್ಥವಾದ ಕರ್ಮವೆಲ್ಲವೂ ಯಜ್ಞವೇ. ದೇವತೋದ್ದೇಶದಿಂದ ಅಗ್ನಿಯಲ್ಲಿ ಹವಿಸ್ಸರ್ಪಿಸುವುದು ಈ ಯಜ್ಞದ ಒಂದು ಅಂಗ. ಧರ್ಮ ಶಬ್ದದಂತೆ ಯಜ್ಞ ಶಬ್ದವೂ ವಿಶಾಲವಾದ ಅರ್ಥವ್ಯಾಪ್ತಿಯುಳ್ಳದ್ದು. ಯಜ್ಞದ ಅನುಷ್ಠಾನವೇ ಕರ್ಮಚಕ್ರ. ಈ ಕರ್ಮಚಕ್ರವನ್ನು ಯಾವ ಮನುಷ್ಯನು ಅನುವರ್ತಿಸುವುದಿಲ್ಲವೋ ಅವನ ಜನ್ಮ ವ್ಯರ್ಥ.

ಕೊಡುವುದು, ಕೊಳ್ಳುವುದು–ಇವೆರಡೂ ಯಜ್ಞಕಾರ್ಯದ ಮೂಲಸೂತ್ರಗಳು. ಈ ಆದಾನ ಪ್ರದಾನಗಳಿಂದಲೇ ಜಗದ್ಯಂತ್ರವು ನಡೆಯುತ್ತದೆ. ಆದಾನವಿಲ್ಲದೆ ಪ್ರದಾನವಿರದು. ಪ್ರದಾನವಿಲ್ಲದೆ ಆದಾನ ಕೂಡದು. ಗಿಡ, ಮರ, ಬಳ್ಳಿಗಳಲ್ಲಿ ಸಹ ಈ ಯಜ್ಞಕ್ರಿಯೆ ಸತತವಾಗಿ ನಡೆಯುತ್ತಿರುತ್ತದೆ. ಅವು ನಮ್ಮಿಂದ ತೆಗೆದುಕೊಳ್ಳುವುದಕ್ಕಿಂತ ಕೊಡುವುದೇ ಅಧಿಕ.

ನಾವು ಮಾತನ್ನಾಡುವುದು, ಬರೆಯುವುದು–ಇವು ಸಹ ಕರ್ಮಗಳೇ. ನಿಷ್ಫಲವಾದ ಮಾತು ಕಾಗೆಯ ಕೂಗು ಇದ್ದಂತೆ. ಜ್ಞಾನದ ಬೆಳಕನ್ನು ನೀಡದ, ವಿಚಾರಶಕ್ತಿಯನ್ನು ಪ್ರಚೋದಿಸದ ಲೇಖನ ವ್ಯರ್ಥ. ಅದು ಶಕ್ತಿಯ

ಅಪವ್ಯಯ. ಉಪಕೃತಿಯಿಲ್ಲದ ಲೇಖನದಲ್ಲಿ ಅಪಕೃತಿಯ ಸಂಭವ ಇಲ್ಲದೆ ಇರುವುದಿಲ್ಲ. ಇಂತಹ ಲೇಖನ ದುರ್ಲೇಖನ. ಮೇಧಾವಿಗಳೆನಿಸಿಕೊಂಡವರೂ ಸಹ ದುರ್ಲೇಖನಗಳಲ್ಲಿ ತೊಡಗಿರುವುದು ಕಾಲ ವಿಪರ್ಯಾಸ. ರಾಮಾಯಣ, ಮಹಾಭಾರತಗಳಂತಹ ಮಹಾಕಾವ್ಯಗಳನ್ನು ಸಹ ಹಳಿಯುವುದಕ್ಕೂ ವಿಕೃತಗೊಳಿಸುವುದಕ್ಕೂ ಇವರ ಲೇಖನಿ ಉದ್ಯುಕ್ತವಾಗಿದೆಯೆಂಬುದು ಅರ್ಥವಾಗದ ಮನೋವಿಕೃತಿ.

ಶ್ರೀರಾಮ ಸೀತೆಯರ ಚಾರಿತ್ರ್ಯವನ್ನು ಶಂಕಿಸಿ ಬರೆಯುವ ಕೀಳ್ಮಟ್ಟಕ್ಕೆ ಇಳಿಯುವವರೆಗೆ ಇವರು ಹೋಗಿದ್ದಾರೆ. ಈ ದುರ್ವಿಚಾರಸಂಕಿರಣ ಯಾವ ಉದ್ದೇಶಕ್ಕಾಗಿ ? ಯಾರ ಅಜ್ಞಾನವನ್ನು ಹೋಗಲಾಡಿಸಿ ಸನ್ಮಾರ್ಗದಲ್ಲಿ ತೊಡಗಿಸುವುದಕ್ಕಾಗಿ ? ಈ ಜನರು ರಾಷ್ಟ್ರದ ಸಂಘಟಕರಲ್ಲ, ರಾಷ್ಟ್ರದ ವಿಘಟಕರು. ಸಮಾಜವನ್ನು ಒಡೆಯತಕ್ಕವರು. ಈ ದುರ್ಲೇಖಕರು ಜೀವನ್ಮೃತರು – ಎನ್ನುತ್ತದೆ ಮೇಲ್ಕಂಡ ಭಾಗವತ ವಚನ. ಸತ್ತವರು ಬೂದಿಯಾಗಿ ನಿಃಶೇಷರಾಗುತ್ತಾರೆ. ಜೀವನ್ಮೃತರು ಕೊಳೆತು ನಾರುತ್ತಾ ಪರಿಸರವನ್ನು ಕೆಡಿಸುತ್ತಾರೆ.

**ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯನಿಗ್ರಹಃ |**
**ದಾನಂ ದಮೋ ದಯಾ ಕ್ಷಾಂತಿಃ**
**ಸರ್ವೇಷಾಂ ಧರ್ಮಸಾಧನಮ್|| || ೧೦೮ ||**

— ಯಾಜ್ಞವಲ್ಕ್ಯ, ೧-೧೨೨

''ಅಹಿಂಸೆ, ಸತ್ಯವನ್ನಾಡುವುದು, ಪರಸ್ವತ್ತನ್ನು ಅಪಹರಿಸದಿರುವುದು, ಶುಚಿತ್ವ, ಇಂದ್ರಿಯನಿಗ್ರಹ, ದಾನ, ಮನೋನಿಗ್ರಹ, ದಯೆ, ತಾಳ್ಮೆ – ಇವು ಸರ್ವರಿಗೂ ಧರ್ಮಸಾಧನ.''

ಧರ್ಮದಲ್ಲಿ ಸಾಮಾನ್ಯಧರ್ಮ, ವಿಶೇಷಧರ್ಮ–ಎಂದು ಎರಡು ವಿಧ. ಸಾಮಾನ್ಯಧರ್ಮ ಮನುಷ್ಯಮಾತ್ರರಿಗೆ ಸಂಬಂಧಿಸಿದ್ದು. ವಿಶೇಷ ಧರ್ಮವು

ಬೇರೆಬೇರೆ ವರ್ಣದವರಿಗೂ ಆಶ್ರಮದವರಿಗೂ ವಿಹಿತವಾದವು. ಸಾಮಾನ್ಯ ಧರ್ಮವಿಲ್ಲದೆ ವಿಶೇಷಧರ್ಮವಿಲ್ಲ. ಅಹಿಂಸಾದಿಗಳು ಸಾಮಾನ್ಯ ಧರ್ಮಗಳು; ಸಕಲಮಾನವರೂ ಆಚರಿಸಬೇಕಾದವು. ಆದ್ದರಿಂದ 'ಸರ್ವೇಷಾಂ' ಎಂದು ಸ್ಮೃತಿಕಾರರು ಹೇಳಿದ್ದಾರೆ. ಈ ಸಾಮಾನ್ಯ ಧರ್ಮಗಳು ಯಾರಲ್ಲಿ ಇಲ್ಲವೋ ಅವರು ಧರ್ಮಬಾಹಿರರೇ. ಅವರ ಮನುಷ್ಯತ್ವವೇ ನ್ಯೂನತೆಯಲ್ಲಿದೆ ಎಂದು ಹೇಳಬೇಕಾಗುತ್ತದೆ. ಅವರು ಪೂರ್ಣಮಾನವರಲ್ಲ.

ಭಾರತೀಯ ಧರ್ಮಶಾಸ್ತ್ರ ರೂಪಿಸಿದ ಈ ಧರ್ಮ ಜಗತ್ತಿನ ಸಕಲ ಮಾನವರಿಗೂ ಸರ್ವಕಾಲದಲ್ಲಿಯೂ ಮಾನ್ಯವಾಗುವ ಆಚಾರಸಂಹಿತೆ ಯಾಗಿರುತ್ತದೆ. ಈಗಿನ ನಾಗರಿಕ ಸಮಾಜದಲ್ಲಿ ಸಹ ಯಾವ ವಿದ್ಯಾವಂತನೂ, ವಿವೇಕಿಯೂ, ಸಂಸ್ಕೃತಿಸಂಪನ್ನನೂ ಮೇಲ್ಕಂಡ ಮಾನವಗುಣಗಳನ್ನು ದೂಷಿಸಲಾರ.

ಇವುಗಳಲ್ಲಿ ಅಹಿಂಸೆಯ ವಿಷಯವಾಗಿ ಒಂದು ಚೋದ್ಯ ಉಂಟು. ಅಹಿಂಸೆ ಎಂದರೆ ಏನು ? ಇನ್ನೊಬ್ಬರಿಗೆ ನೋವನ್ನುಂಟುಮಾಡದಿರುವುದು ಅಹಿಂಸೆಯೆಂದು ಹೇಳಬಹುದು. ಶಾರೀರಿಕವಾಗಿಯೂ ಮಾನಸಿಕವಾಗಿಯೂ ಅನ್ಯರನ್ನು ಪೀಡಿಸದಿರುವುದು, ಬಲಾತ್ಕಾರ ಪ್ರಯೋಗ ಮಾಡದಿರುವುದು, ಪ್ರಾಣಹತ್ಯೆ ಮಾಡದಿರುವುದು–ಇವೆಲ್ಲ ಅಹಿಂಸೆಯಲ್ಲಿ ಸೇರತಕ್ಕವೇ. ಜೈನ, ಬೌದ್ಧ, ಕ್ರೈಸ್ತಮತದವರೂ ಸಹ ಅಹಿಂಸೆಗೆ ದೊಡ್ಡ ಮಾನ್ಯತೆಯನ್ನು ಕೊಟ್ಟಿದ್ದಾರೆ. ಇದು ಎಷ್ಟರಮಟ್ಟಿಗೆ ಕಾರ್ಯಸಾಧ್ಯ ? ಕ್ರಿಮಿ–ಕೀಟಗಳೂ ಪ್ರಾಣಿಗಳೇ ಸರಿಯಷ್ಟೆ. ಸೊಳ್ಳೆ, ಜಿರಲೆ, ಇಲಿ ಮುಂತಾದವನ್ನು ಕೊಲ್ಲದೆ ಮನುಷ್ಯನ ಬಾಳ್ವೆ ಶಕ್ಯವೆ ?

ನರಹತ್ಯೆ ಎಲ್ಲ ಪ್ರಾಣಿಗಳ ಹತ್ಯೆಗಿಂತಲೂ ಘೋರವೆಂದು ಎಲ್ಲರೂ ಒಪ್ಪುತ್ತಾರೆ. ಹಿಂಸೆಮಾಡದೆ ಮಾಂಸಾಹಾರ ಶಕ್ಯವೆ? ಜಗತ್ತಿನಲ್ಲಿ ಮಾಂಸಾಹಾರವನ್ನು ಎಲ್ಲರೂ ತ್ಯಜಿಸಿ ಸಸ್ಯಾಹಾರಿಗಳಾದರೆ ಅರೆಹೊತ್ತಿನ ಕೂಳಿಗೂ ಮಾನವರಿಗೆ ಗತಿಯಿಲ್ಲದೆಹೋದೀತು !

ಪ್ರಕೃತಿಧರ್ಮದಲ್ಲಿಯೇ ಹಿಂಸೆ ಸೇರಿಕೊಂಡಿದೆ. ಹುಲಿಗೆ ಮೃಗಗಳ ಬೇಟೆಯನ್ನು ಕಲಿಸಿದವರು ಯಾರು ? ಹಸಿವಿನಿಂದ ಸಾಯುವ ಪ್ರಸಂಗ ಬಂದರೂ ಹುಲಿ ಹುಲ್ಲನ್ನು ತಿನ್ನುವುದಿಲ್ಲ.

''ಆತತಾಯಿನಮಾಯಾಂತಂ ಹನ್ಯಾದೇನಾವಿಚಾರಯನ್''– 'ಆತತಾಯಿ' ಯಾದವನನ್ನು–ಎಂದರೆ, ಹತ್ಯೆಮಾಡಲು ಬರುವ ದುಷ್ಟನನ್ನು– ಹಿಂದೆಮುಂದೆ ನೋಡದೆ ಕೊಂದುಬಿಡಬೇಕು ಎಂದು ಧರ್ಮಶಾಸ್ತ್ರದ ವಿಧಿಯುಂಟು.

ಹೀಗೆಯೇ ಸತ್ಯದ ವಿಷಯದಲ್ಲೂ ವಿಚಾರ ಉಂಟು. ಕೆಲವು ಸಂದರ್ಭ ಗಳಲ್ಲಿ ಸುಳ್ಳು ಹೇಳುವುದರಿಂದ ದೋಷವಿಲ್ಲ ಎಂದು ಧರ್ಮಶಾಸ್ತ್ರಕಾರರು ಹೇಳಿದ್ದಾರೆ. ಆದ್ದರಿಂದ ಇದು ಧರ್ಮ-ಇದು ಅಧರ್ಮ ಎಂದು ಖಂಡ ತುಂಡಾಗಿ ವಿಭಾಗಿಸುವುದು ಅಸಾಧ್ಯವಾದದ್ದು. ಅಲ್ಲದೆ, ಸಾಮಾನ್ಯ ಪ್ರಜೆಗಳಿಗೆ ಅಹಿಂಸೆ ಧರ್ಮವಾದೀತು. ಅದು ರಾಷ್ಟ್ರಧರ್ಮವಾದೀತೆ ? ಘೋರ ಅಪರಾಧಿಗಳಿಗೆ, ರಾಷ್ಟ್ರದ್ರೋಹಿಗಳಿಗೆ ದಂಡನೆ ಯಾವುದು ? ವಿದ್ರೋಹಿಗಳಾದ ಪರಕೀಯರು ರಾಷ್ಟ್ರದ ಮೇಲೆ ದಂಡೆತ್ತಿ ಬಂದಾಗ ರಾಷ್ಟ್ರಧರ್ಮ ಯಾವುದಾದೀತು ? ಸರ್ವತ್ರ ಅಹಿಂಸೆಯೇ ಧರ್ಮವಾದರೆ ಕ್ಷಾತ್ರಧರ್ಮಕ್ಕೆ ಎಡೆಯೆಲ್ಲಿ ? ಅಶೋಕ ಚಕ್ರವರ್ತಿ ಬೌದ್ಧಮತವನ್ನು ಅವಲಂಬಿಸಿ ಅಹಿಂಸೆ ಯನ್ನು ರಾಷ್ಟ್ರಧರ್ಮವೆಂದು ಘೋಷಿಸಿದನೆಂದು ಇತಿಹಾಸಕಾರರು ಹೇಳುವುದುಂಟು. ಆತನು ಕಳಿಂಗ ದೇಶದ ಮೇಲೆ ಮೊದಲು ಯುದ್ಧವನ್ನು ಮಾಡಿ ಅಸಂಖ್ಯಾತ ಜನರ ಹತ್ಯೆಗೆ ನಿಮಿತ್ತನಾದನೆಂದೂ ಇತಿಹಾಸ ಹೇಳುತ್ತದೆ. ಹಿಂಸೆಯಿಂದ ಸ್ಥಾಪಿಸಿದ ರಾಜ್ಯವನ್ನು ಪಾಲಿಸುವಾಗ ಅಹಿಂಸೆ ಅವನ ಧರ್ಮವಾಯಿತು. ರಾಜ್ಯಭಾರದ ಸಮಯದಲ್ಲಿ ಜನರು ಪುಂಡೇಳದೆ ಇದ್ದುದು, ಅಥವಾ ಪರಕೀಯರು ದಂಡೆತ್ತಿ ಬರದಿದ್ದುದು ಅಹಿಂಸಾಧರ್ಮದ ಪುಣ್ಯ ! ನಾದಿರಶಹನೋ, ತೈಮೂರನೋ ದಂಡೆತ್ತಿ ಬಂದಿದ್ದರೆ ಅಶೋಕನು ಅವರನ್ನು ಹೇಗೆ ಎದುರಿಸುತ್ತಿದ್ದ ?

ಅಹಿಂಸೆ ವ್ಯಕ್ತಿಧರ್ಮವೇ ಹೊರತು ಎಂದಿಗೂ ರಾಷ್ಟ್ರಧರ್ಮವಾಗದು. ಧರ್ಮದ ರಕ್ಷಣೆಗಾಗಿ ಹಿಂಸಾಪ್ರಯೋಗ ಅನಿವಾರ್ಯ. ಅದೇ ಕ್ಷಾತ್ರಧರ್ಮ.

ಅತಿಕ್ರಾಂತಸುಖಾಃ ಕಾಲಾಃ ಪ್ರತ್ಯುಪಸ್ಥಿತದಾರುಣಾಃ |
ಶ್ವಃ ಶ್ವಃ ಪಾಪೀಯದಿವಸಾ ಪೃಥಿವೀ ಗತಯೌವನಾ || || ೧೧೯ ||

– (ವ್ಯಾಸವಚನ) ಧ್ವನ್ಯಾಲೋಕ, ೩

"ಈಗ ಸುಖದ ಕಾಲಗಳು ಕಳೆದುಹೋದವು. ಇನ್ನು ಕ್ರೂರವಾದ ಶೋಕಪ್ರಸಂಗಗಳು ಎದುರಾಗುತ್ತವೆ. ನಾಳೆ, ನಾಳೆ ಎಂಬುದು ಕ್ರಮವಾಗಿ ಪಾಪೀಯವಾಗುತ್ತ ಹೋಗುತ್ತದೆ. ಪೃಥ್ವಿಯ ಯೌವನ ಕಳೆದುಹೋಯಿತು."

'ನಿಮ್ಮ ಆರೋಗ್ಯ ಉತ್ತಮವೇ?' – ಎಂದು ಒಬ್ಬ ವೃದ್ಧರನ್ನು ಸ್ನೇಹಿತರು ವಿಚಾರಿಸಿದಾಗ ಅವರು, 'ನಾಳೆಗಿಂತ ಉತ್ತಮ' ಎಂದು ಉತ್ತರಿಸಿದರಂತೆ ! ದಿನೇ ದಿನೇ ಆರೋಗ್ಯವು ಕ್ಷೀಣಿಸುತ್ತಿದೆ—ಎಂಬುದು ಆ ಮಾತಿನ ಧ್ವನಿ. ಧ್ವನಿಕಾರ ಆನಂದವರ್ಧನನು ಮೇಲ್ಕಂಡ ಶ್ಲೋಕವು ಮಹರ್ಷಿ ವ್ಯಾಸರದು ಎಂದು ಹೇಳಿದ್ದಾನೆ. ಪ್ರಾಚೀನ ಭಾರತೀಯರೆಲ್ಲರ ವಿಚಾರಸರಣಿ ಹೀಗೆಯೇ ಇದೆ. ಕೃತಯುಗದಲ್ಲಿ ನಾಲ್ಕು ಪಾದಗಳಿಂದ ಚಲಿಸುತ್ತಿದ್ದ ಧರ್ಮಪುರುಷ ತ್ರೇತಾಯುಗದಲ್ಲಿ ತ್ರಿಪಾತ್ ಆಗಿ, ದ್ವಾಪರದಲ್ಲಿ ದ್ವಿಪಾತ್ ಆಗಿ, ಕಲಿಯುಗ ದಲ್ಲಿ ಏಕಪಾತ್ ಆಗಿದ್ದಾನೆ. ಧರ್ಮದ ಮುಕ್ಕಾಲು ಭಾಗ ಈಗ ಊನವಾಗಿದೆ, ಧರ್ಮದ ಮೂರುಪಟ್ಟು ಅಧರ್ಮ ನಡೆಯುತ್ತದೆ—ಎಂದು ಅಭಿಪ್ರಾಯ. ಅಲ್ಲದೆ ಈ ಕಲಿಯುಗದಲ್ಲಿ ಪಾಪ ಕಾರ್ಯಗಳು ಕ್ರಮೇಣ ಹೆಚ್ಚುತ್ತ ಹೋಗುತ್ತವೆ. ಮುಂದಿನ ದಿನಗಳು ಗುಣಹೀನರಾದ ಜನರಿಂದ ತುಂಬಿ ದುಷ್ಟಾಚಾರಗಳ ನೆಲೆಯಾಗುತ್ತ ಸಾಗುತ್ತವೆ – ಎಂದು ಮೇಲ್ಕಂಡ ಶ್ಲೋಕ ತಿಳಿಸುತ್ತದೆ. ವಿಷ್ಣುಪುರಾಣ ಹೀಗೆ ಹೇಳುತ್ತದೆ—

ನಿಃಸತ್ತ್ವಾನಾಮಶೌಚಾನಾಂ ನಿರ್ಹ್ರೀಕಾಣಾಂ ತಥಾ ನೃಣಾಂ |
ಯದ್ಯದ್ದುಃಖಾಯ ತತ್ಸರ್ವಂ ಕಲಿಕಾಲೇ ಭವಿಷ್ಯತಿ || –೬–೧–೫೮

'ಕಲಿಯುಗದಲ್ಲಿ ಸತ್ತ್ವಹೀನರೂ, ಅಶುದ್ಧ ಸ್ವಭಾವದವರೂ, ಲಜ್ಜೆಗೆಟ್ಟವರೂ ಆದ ಈ ಜನರಿಗೆ ಯಾವಯಾವುದು ದುಃಖಕರವೋ ಅವೆಲ್ಲವೂ ಸಂಭವಿಸುತ್ತವೆ.'

ಈಗಿನ ಲೋಕಪರಿಸ್ಥಿತಿಯನ್ನು ಆಲೋಚಿಸಿದಾಗ ಪ್ರಾಚೀನರ ನುಡಿ ಸತ್ಯವೆಂದು ಜನತೆ ನಂಬಿದರೆ ಆಶ್ಚರ್ಯವಿಲ್ಲ. ಮಾನವನ ತೀಕ್ಷ್ಣ ಬುದ್ಧಿಶಕ್ತಿಯಿಂದಾದ ವೈಜ್ಞಾನಿಕ ಆವಿಷ್ಕಾರಗಳು ವಿಸ್ಮಯಕರವಾಗಿದ್ದರೂ, ನೂತನ ಭೋಗಸಾಮಗ್ರಿಗಳು ಲಭಿಸುತ್ತಿದ್ದರೂ ಮಾನವನು ಜೀವನದಲ್ಲಿ ಎಷ್ಟು ಚಿತ್ತಶಾಂತಿಯನ್ನು ಪಡೆದುಕೊಂಡಿದ್ದಾನೆಂಬುದು ಚಿಂತನೀಯ. ಇನ್ನೂ ಬೇಕು, ಮತ್ತೂ ಬೇಕು, ಹೊಸದು ಬೇಕು — ಎಂದು ಸದಾ ಹಂಬಲಿಸುತ್ತಿರುವ ಮನುಷ್ಯ ಚಿತ್ತಶಾಂತಿಯನ್ನು ಕಳೆದುಕೊಂಡಿದ್ದಾನೆ. ಶಾಂತಿ, ತೃಪ್ತಿಗಳಿಲ್ಲದಾಗ ಸುಖವು ಕಾಲ್ಪನಿಕವೂ ಕ್ಷಣಿಕವೂ ಆಗಿರುತ್ತದೆ. ಈ ಬಗೆಯ ಜನವರ್ಗ ಒಂದಾದರೆ, ಹಿಂಸೆ-ಕೊಲೆ-ಭ್ರಷ್ಟಾಚಾರ-ವಂಚನೆ-ದಾರಿದ್ರ್ಯ-ಶೋಷಣೆಗಳಿಂದ ತತ್ತರಿಸುತ್ತಿರುವ ಜನವರ್ಗ ಇನ್ನೊಂದು. ಉಪದೇಶ ಗ್ರಂಥಗಳೂ, ಪ್ರಚಾರೋಪನ್ಯಾಸಮಾಲೆಗಳೂ ಬೆಳೆಯುತ್ತಿವೆಯೇ ಹೊರತು ಯಾವ ನೀತಿಯೂ ಕೃತಿಯಲ್ಲಿ ಕಂಡುಬರುತ್ತಿಲ್ಲ. ನಾನಾ ವಿಕಾರದ ಬೀಭತ್ಸ ಪ್ರಸಂಗಗಳು, ಸಮುದ್ರದ ಅಲೆಗಳಂತೆ, ತೆರಪಿಲ್ಲದೆ ಉಕ್ಕುತ್ತಿರುವುದು ಸರ್ವಗೋಚರ.

ಡಾರ್ವಿನ್ ಮಹಾಶಯನ ವಿಕಾಸವಾದದ ಪ್ರಕಾರ, ಮಾನವನು ಎಲ್ಲ ವಿಧದಲ್ಲಿ ಬೆಳೆದು ಪ್ರಗತಿಯನ್ನು ಸಾಧಿಸುತ್ತ ಹೋಗಬೇಕು. ವಿಜ್ಞಾನದ ಪ್ರಗತಿಯೊಡನೆ ಮನುಷ್ಯನ ಆಸುರೀ ಸಂಪತ್ತು ಬೆಳೆಯುತ್ತಿದೆಯೆಂಬುದು ಸ್ಪಷ್ಟವಾಗಿದೆ. ಇದು ವಿಕಾಸವಾದಕ್ಕೆ ಅನುಗುಣವಾದಲ್ಲಿ ನಮ್ಮ ವಿನಾಶದ ಗರ್ತ ದೂರವಿಲ್ಲ. ವಿರೋಧಿಯಾದಲ್ಲಿ ವಿಕಾಸವಾದದ ಬುಡಕ್ಕೆ ಕೊಡಲಿಪೆಟ್ಟು.

ಭೇತವ್ಯಂ ನ ತಥಾ ಶತ್ರೋರ್ನಾಗ್ನೇರ್ನಾಹೇರ್ನ ಚಾಶನೇಃ |
ಇಂದ್ರಿಯೇಭ್ಯೋ ಯಥಾ ಸ್ವೇಭ್ಯಸ್ತೈರಜಸ್ರಂ ಹಿ ಹನ್ಯತೇ || || ೧೧೦ ||

— ಸೌಂದರನಂದ, ೧೩-೩೧

“ವೈರಿಗಾಗಲಿ, ಬೆಂಕಿಗಾಗಲಿ, ಹಾವಿಗಾಗಲಿ, ಸಿಡಿಲಿಗಾಗಲಿ ಯಾರೂ ಅಷ್ಟು ಹೆದರಬೇಕಾಗಿಲ್ಲ. ತಮ್ಮ ತಮ್ಮ ಇಂದ್ರಿಯಗಳಿಗಾಗಿಯೇ

ಹೆಚ್ಚು ಹೆದರಬೇಕಾಗಿದೆ. ಏಕೆಂದರೆ, ಅವು ಸದಾ ಪೀಡಿಸುತ್ತ, ಕೊಲ್ಲುತ್ತ ಇರುತ್ತವೆ.''

ಪ್ರತಿಯೊಬ್ಬರಿಗೂ ಯಾವುದೋ ಕಾರಣದಿಂದ ಶತ್ರುಗಳು ಹುಟ್ಟಿಕೊಳ್ಳಬಹುದು, ತೊಂದರೆ ಕೊಡಬಹುದು. ಅದನ್ನು ಪರಿಹರಿಸಿ ಕೊಳ್ಳಲು ಶಕ್ಯವುಂಟು. ಅದರಿಂದಾಗುವ ನಷ್ಟ ಒಂದು ಪರಿಮಿತಿಗೆ ಒಳಪಡು ತ್ತದೆ. ಆ ನಷ್ಟ ಸಹಿಸಿಕೊಳ್ಳಲಾರದ್ದೇನಲ್ಲ. ಹೀಗೆಯೇ ಬೆಂಕಿಯಿಂದ, ಹಾವಿನಿಂದ, ಸಿಡಿಲಿನಿಂದಾಗುವ ನಷ್ಟಕಷ್ಟಗಳು ಪರಿಮಿತವಾದವು. ಅವು ಕೆಲವು ವೇಳೆ ತುಂಬ ಹಾನಿಕರವಾದರೂ ಮತ್ತೆ ಚೇತರಿಸಿಕೊಳ್ಳಲಾದೀತು.

ಇವೆಲ್ಲ ಬಹಿರಂಗ ಶತ್ರುಗಳು. ಮಾನವನ ಜೀವೋತ್ಕರ್ಷಕ್ಕೆ ಇವುಗಳಿಂದ ಆಗಬಹುದಾದ ಹಾನಿ ಗಣನೀಯವಲ್ಲ.

ಪಂಚೇಂದ್ರಿಯಗಳಾದರೋ ಮಾನವನ ಅಂತರಂಗಶತ್ರುಗಳು. ಇವು ಮಿತ್ರವೇಷದಲ್ಲಿದ್ದು ನಮಗೆ ಉಪಕಾರಮಾಡುತ್ತ ಮನಸ್ಸಿನ ಆಕಾಂಕ್ಷೆಗಳನ್ನು ತಣಿಸಿ ಆಪ್ಯಾಯನಗೊಳಿಸುತ್ತಲೇ ಇದ್ದು, ಸಮಯ ನೋಡಿ ಹಳ್ಳಕ್ಕೆ ತಳ್ಳಿ ಬಿಡುತ್ತವೆ. ತುಂಟಕುದುರೆಯ ಸವಾರಿ ಮಾಡಿದಂತೆ ಇಂದ್ರಿಯಗಳ ಸಹವಾಸ. ಲಗಾಮನ್ನು ಬಿಗಿಹಿಡಿದು ಸೇವೆಯನ್ನು ಸಲ್ಲಿಸಿಕೊಳ್ಳಬೇಕು. ಲಗಾಮು ಸಡಿಲವಾಗಿ ಹತೋಟಿ ತಪ್ಪಿತೆಂದರೆ ಪಾತಾಳಕ್ಕೆ ಉರುಳಿಸಿಬಿಡುತ್ತವೆ. ಮನುಷ್ಯ ಪಂಚೇಂದ್ರಿಯಗಳಿಗೆ ವಶನಾಗಿದ್ದಾನೆ. ಐದು ಕುದುರೆಗಳ ಮೇಲೆ ಅವನು ಸವಾರಿ ಮಾಡಬೇಕಾಗುತ್ತದೆ. ಆ ಕುದುರೆಗಳನ್ನು ವಶದಲ್ಲಿಟ್ಟುಕೊಂಡವನು ಜಿತೇಂದ್ರಿಯ. ಇಂದ್ರಿಯಜಯವೇ ಜೀವೋತ್ಕರ್ಷಕ್ಕೆ ದಿವ್ಯಪಥ.

ಇದು ವ್ಯಕ್ತಿವಿಷಯವಾಯಿತು. ವ್ಯಕ್ತಿ ಜನನಾಯಕನೆನಿಸಿಕೊಂಡು ಆಡಳಿತಸೂತ್ರವನ್ನು ಕೈಯಲ್ಲಿ ಹಿಡಿದಿದ್ದರೆ ? ಶಾಸಕನಾಗಿದ್ದರೆ ? ಇಡಿಯ ರಾಷ್ಟ್ರವನ್ನೇ ಅಂತಹವರು ಅನರ್ಥಕ್ಕೆ ತಂದೊಡ್ಡುತ್ತಾರೆ. ಹಣ, ಅಧಿಕಾರಗಳ ದಾಹ ಮನುಷ್ಯನಿಗೆ ಅಧಿಕ; ಇವು ಪಶುಗಳಿಗೆ ಇಲ್ಲ. ಇಂದ್ರಿಯವಶರಾದ ಆಡಳಿತಗಾರರು ಹೆಚ್ಚುತ್ತಲೇ ಹೋಗುತ್ತಿದ್ದರೆ, ರಾಷ್ಟ್ರದ ಗತಿ ಏನಾದೀತೆಂದು ವಿಚಾರಶೀಲರಾದ ಪ್ರಜೆಗಳು ಚಿಂತಿಸಬೇಕು.

ನ ಭಾರ್ಯಯಾ ಸಮಂ ಮಿತ್ರಂ ನ ಚ ಧರ್ಮೋ ದಯಾಸಮಃ |
ನ ಸ್ವಾತಂತ್ರ್ಯಸಮಂ ಸೌಖ್ಯಂ
ಗಾರ್ಹಸ್ಥ್ಯಸ್ನಾಶ್ರಮೋ ವರಃ|| || ೧೧೧ ||

– ಪದ್ಮಪುರಾಣ, ೪-೮೮-೫೦

"ಮಡದಿಗೆ ಎಣೆಯಾದ ಮಿತ್ರನಿಲ್ಲ. ದಯೆಗೆ ಸಮಾನವಾದ ಧರ್ಮ ಇಲ್ಲ. ಸ್ವಾತಂತ್ರ್ಯಕ್ಕೆ ಸಮವಾದ ಸುಖವಿಲ್ಲ. ಗೃಹಸ್ಥಾಶ್ರಮಕ್ಕಿಂತ ಉತ್ತಮವಾದ ಆಶ್ರಮವಿಲ್ಲ."

ಮಿತ್ರರೆಂದರೆ ಯಾರು? ಕಷ್ಟದಲ್ಲಿ ಸಹಾಯಮಾಡತಕ್ಕವರು, ಹಿತವನ್ನು ಬೋಧಿಸತಕ್ಕವರು, ಪಾಪಕರ್ಮವನ್ನು ಮಾಡದಂತೆ ತಡೆಯತಕ್ಕವರು, ಗುಟ್ಟನ್ನು ಕಾಪಾಡತಕ್ಕವರು, ನಮ್ಮ ಹರ್ಷಕಾಲದಲ್ಲಿ ಸಂತೋಷಪಡತಕ್ಕವರು, ನಮಗೆ ಕಷ್ಟ ಬಂದಾಗ ಶೋಕಿಸತಕ್ಕವರು-ಈ ರೀತಿಯಲ್ಲಿರುವವರು ಸನ್ಮಿತ್ರರು.

ಗುಣಶಾಲಿನಿಯಾದ ಪತ್ನಿಯೂ ಹೀಗೆಯೇ ಇರುತ್ತಾಳೆ. ಅವಳಂತೆ ಆಪ್ತಳಾಗಿ ಸುಖದುಃಖಗಳನ್ನು ಸಮನಾಗಿ ಹಂಚಿಕೊಳ್ಳುವವರು ದುರ್ಲಭ. ಅವಳು ಪೂರ್ತಿಯಾಗಿ ತನ್ನನ್ನು ಗಂಡನಿಗೆ ಅರ್ಪಿಸಿಕೊಂಡ ಸಹಭಾಗಿನಿ. ಗಂಡನ ಹಿತವೇ ತನ್ನ ಹಿತವೆಂದು ನಿಶ್ಚಯಿಸಿಕೊಂಡಿರುತ್ತಾಳೆ. ಪ್ರತ್ಯೇಕವಾಗಿ ಅವಳ ಸ್ವಾರ್ಥ ಯಾವುದೂ ಇಲ್ಲ. ಹೊರಗಿನ ಮಿತ್ರನಿಗೆ ತನ್ನ ಸಂಸಾರವೂ, ಬೇರೆ ಜವಾಬ್ದಾರಿಯೂ ಇರುವುದರಿಂದ ಪತ್ನಿಗೆ ಸಾಟಿಯಾದ ಮಿತ್ರನಾಗಲಾರ. ಆದ್ದರಿಂದಲೇ ಪತ್ನಿಯು 'ಅರ್ಧಾಂಗಿ' ಎನಿಸಿದ್ದಾಳೆ. ಗಂಡಸು ರುಗ್ಣನಾದಾಗ, ಮುಪ್ಪಿನಿಂದ ಪರಾಧೀನನಾದಾಗ ಹಗಲೂರಾತ್ರಿ ಬೇಸರವಿಲ್ಲದೆ ಗಂಡನಿಗೆ ಉಪಚಾರ ಮಾಡತಕ್ಕವಳು ಮಡದಿಯೊಬ್ಬಳೇ. ವೃದ್ಧನ ಸೇವೆ ಮಕ್ಕಳಿಗೂ ಜುಗುಪ್ಸೆಯನ್ನು ತಂದೀತು. ಕೈಹಿಡಿದ ಮಡದಿಗೆ ಮಾತ್ರ ಜುಗುಪ್ಸೆಯಾಗದು.

'ದಯೆಗಿಂತ ಹೆಚ್ಚಿನ ಧರ್ಮ ಯಾವುದಯ್ಯಾ ?' ಎಂದಿದ್ದಾರೆ ಶಿವಶರಣರು. ಪರೋಪಕಾರಕ್ಕಿಂತ ಅಧಿಕವಾದ ಧರ್ಮವಿಲ್ಲ– ಎನ್ನುವ

